# ಕಾಖಂಡಕಿ

# ಶ್ರೀಮಹಿಪತಿರಾಯರು



## ಚರಿತ್ರೆ ಮತ್ತು ಕೃತಿಗಳ ಅಧ್ಯಯನ

ಡಾ||ಕೃಷ್ಣ ಕೊಲ್ಹಾರಕುಲಕರ್ಣಿ

ಕಾಖಂಡಕಿ

# ಶ್ರೀ ಮಹಿಪತಿರಾಯರು

(ಚರಿತ್ರೆ, ಮತ್ತು ಕೃತಿಗಳ ಅಧ್ಯಯನ)

ಡಾ|| ಕೃಷ್ಣ ಕೊಲ್ಹಾರಕುಲಕರ್ಣಿ

ಮರಾಠಿ-ಕನ್ನಡ ಸ್ನೇಹ ವರ್ಧನ ಕೇಂದ್ರ, ಪುಣೆ
मराठी-कन्नड स्नेह वर्धन केंद्र, पुणे



ಈ ಪುಸ್ತಕದ ಪ್ರಕಟನೆಗೆ ಧನಸಹಾಯ ನೀಡಿದ

**ತಿರುಪತಿ ತಿರುಮಲೈ ದೇವಸ್ಥಾನದ ಧರ್ಮದತ್ತಿಗೆ**

ಕೃತಜ್ಞತೆಗಳು.

—ಲೇಖಕ

*Sincere Thanks to*

Tirupati Tirumalai Devasthanam Trust

for their Financial aid in Publishing this book.

-Author

ಅರ್ಪಣೆ

ಸ್ನೇಹಿತರಾಗಿ, ಹಿರಿಯಣ್ಣನಂತೆ
ಕೈಹಿಡಿದು ನಡೆಸಿಕೊಂಡು ಬಂದ
ಡಾ। ಶ್ರೀನಿವಾಸ ಹಾವನೂರ
ಅವರಿಗೆ

# ಪ್ರಕಾಶಕರ ನುಡಿ

ಇದು ನಮ್ಮ ಕೇಂದ್ರದ ಪ್ರಪ್ರಥಮ ಪ್ರಕಟನೆ. ಮರಾಠಿ-ಕನ್ನಡ ಸ್ನೇಹ ವರ್ಧನ ಕೇಂದ್ರವು ಈಚೆಗೆ ಅಂದರೆ ಎಪ್ರಿಲ ೧೯೮೯ರಿಂದ ಅಸ್ತಿತ್ವದಲ್ಲಿ ಬಂದಿದೆ. ಅದರ ಹೆಸರೇ ಸೂಚಿಸುವಂತೆ, ಕನ್ನಡ-ಮರಾಠಿ ಜನರ ನಡುವೆ ಬಾಂಧವ್ಯವನ್ನು ಸಾಹಿತ್ಯ ಕಲೆಗಳ ಮೂಲಕ ವರ್ಧಿಸುವುದು ಅದರ ಉದ್ದೇಶವಾಗಿದೆ. ಅದರನ್ವಯ ಕೇಂದ್ರವು ಹಲವು ವಿಧಾಯಕ ಯೋಜನೆಗಳನ್ನು ಹಮ್ಮಿಕೊಂಡಿದ್ದು, ಕನ್ನಡ-ಮರಾಠಿ ಸಂಯುಕ್ತ ವಿಷಯಗಳ ಅಧ್ಯಯ ನಕ್ಕೆ ಅವಕಾಶವನ್ನು ಒದಗಿಸುತ್ತಲಿದೆ. ಜೊತೆಗೆ ಗ್ರಂಥ ಪ್ರಕಟನೆಗೆ ಅಷ್ಟೇ ಆದ್ಯತೆಯನ್ನು ನೀಡಲಾಗಿದೆ. ಈ ಗ್ರಂಥಗಳು ಮರಾಠಿಯಿಂದ ಕನ್ನಡಕ್ಕೆ, ಕನ್ನಡದಿಂದ ಮರಾಠಿಗೆ ಅನುವಾದ ಗೊಂಡವುಗಳು ಇರಬಹುದು; ಇಲ್ಲವೆ ಉಭಯ ಭಾಷೆ, ಸಂಸ್ಕೃತಿಗಳಿಗೆ ಒಂದಿಲ್ಲೊಂದು ರೀತಿಯಲ್ಲಿ ಸಂಬಂಧಿಸಿರಬಹುದು. ಪ್ರಸ್ತುತ ಗ್ರಂಥವು ಎರಡನೆಯ ಪ್ರಕಾರದಲ್ಲಿ ಬರು ವುದು. ಇದರಲ್ಲಿಯ ಕೇಂದ್ರ ವ್ಯಕ್ತಿ ಶ್ರೀ ಮಹಿಪತಿರಾಯರು ಕನ್ನಡ-ಮರಾಠಿ ಈ ಎರಡೂ ಭಾಷೆಗಳಲ್ಲಿ ಹಾಡುಗಳನ್ನು ರಚಿಸಿದ್ದಾರೆ. ಅವರಿಗೆ ಮರಾಠಿ(ಅದರಂತೆ ದಖಿಣಿ ಭಾಷೆ) ಚೆನ್ನಾಗಿ ಬರುತ್ತಿತ್ತೆಂಬುದರ ಜೊತೆಗೆ ಆಗಿನ ಕನ್ನಡ,ಮರಾಠಿ ಭಾಷಿಕರು ಪರಸ್ಪರ ಸಾಹಚ ರ್ಯದಲ್ಲಿದ್ದರೆಂಬುದರ ನಿದರ್ಶನವಾಗಿದೆ. ಈ ಸಂಬಂಧವಲ್ಲದೇ ಅವರ ಚರಿತ್ರೆಯನ್ನು ಹೇಳುವ ಆದಿಮ ಕೃತಿಗಳಲ್ಲಿ ಒಂದು ಮರಾಠಿಯಲ್ಲಿಯೇ ಇದೆ. ಅದುವೇ ರುಕ್ಮಾಜದಾಸ ಎಂಬವರಿಂದ ಸುಮಾರು ೧೭೩೦ರಲ್ಲಿ ರಚಿತವಾದ 'ಗುರುಮಾಲಿಕೆ'. ಅದೀಗ ಮೊದಲ ಬಾರಿ ಈ ಗ್ರಂಥದಲ್ಲಿ ಮುದ್ರಣ ರೂಪವನ್ನು ತಳೆದಿದೆ. (ಅನುಬಂಧ ಮೂರು)

ಸ್ವತಃ ಗುರುದೇವ ರಾನಡೆಯವರು ಮಹಿಪತಿರಾಯರನ್ನು 'ವಿಶ್ವದ ಶ್ರೇಷ್ಠ ಅನುಭಾವ ಕವಿಗಳು' ಎಂದು ತಮ್ಮ ಕೃತಿಗಳಲೆಲ್ಲ ತುಂಬು ಹೃದಯದಿಂದ ಹೇಳಿದ್ದಾರೆ. ಮಹಿಪತಿರಾ ಯರಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಈಗಾಗಲೇ ಹಲವು ಕೃತಿಗಳು ಹೊರಬಂದಿವೆ. ಇದು ಪಿಎಚ್.ಡಿ ಮಟ್ಟದ ಅಧ್ಯಯನ. ಈ ಹಿಂದಿನ ಕೃತಿಗಳಲ್ಲಿ ವ್ಯಕ್ತವಾದ ಅನೇಕ ತಪ್ಪು ತಡೆಗಳನ್ನು ಇಲ್ಲಿ ಆಧಾರಸಹಿತವಾಗಿ ನೇರ್ಪಡಿಸಲಾಗಿದೆ.

ಲೇಖಕ ಡಾ। ಕೊಲ್ಹಾರಕುಲಕರ್ಣಿಯವರು ಪರಿಣತ ಸಂಶೋಧಕರು. ಅವರ ಕೃತಿಯನ್ನು -ಅದೂ ನಮ್ಮ ಪ್ರಕಟನಾ ಯೋಜನೆಯ ಮೊದಲ ಕೃತಿಯಾಗಿ ಪ್ರಕಟಿಸುವ ಯೋಗಾ ಯೋಗವು ನಮಗೆ ಹರ್ಷವನ್ನುಂಟುಮಾಡಿದೆ. ಅವರಿಗೆ ನಮ್ಮ ಹಾರ್ದಿಕ ಅಭಿವಂದನೆಗಳು.

ನಮ್ಮ ಕೇಂದ್ರದ ಉಪಾಧ್ಯಕ್ಷರೂ ಪ್ರಕಟನಾ ಮಾಲೆಯ ಸಂಪಾದಕರಲ್ಲೊಬ್ಬರೂ ಆಗಿರುವ ಡಾ। ಹಾವನೂರರು ಈ ಕೃತಿಯು 'ಗರ್ಭಸ್ಥ'ವಿರುವಾಗಿನಿಂದ ಅದರ ದಾಯಿತನ ಮಾಡಿದವರು. ಕೇಂದ್ರದ ವತಿಯಿಂದ ಈಗ ಅದು ಪ್ರಕಟವಾಗುವಂತೆ ನೋಡಿಕೊಂಡವರೂ ಅವರೇ.

ಪುಣೆ<br>
೧೩ ಸೆಪ್ಟೆಂಬರ್ ೧೯೮೯

ಅ.ರಾ.ತೋರೊ<br>
ಅಧ್ಯಕ್ಷ

# ಮುನ್ನುಡಿ

ಪ್ರಿಯ ಮಿತ್ರರಾದ ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ಅವರು ತಮ್ಮ ಡಾಕ್ಟರೇಟ್ ಪ್ರಬಂಧವನ್ನು ಪ್ರಕಟಿಸುತ್ತಿರುವ ಈ ಹೊತ್ತು, ಅವರಿಗೆ ಶುಭಾಶಯದ ನಾಲ್ಕು ಮಾತುಗಳನ್ನು ಬರೆಯಲು ನನಗೆ ಸಂತೋಷವಾಗುತ್ತದೆ. ವಾಸ್ತವವಾಗಿ ಈ ಪುಸ್ತಕಕ್ಕೆ ಯಾವ ಮೊದಲ ಮಾತುಗಳ ಶಿಫಾರಸ್ಸೂ ಬೇಕಾಗಿಲ್ಲ. ವಿಶ್ವವಿದ್ಯಾ ಲಯದ ಒಂದು ವಿದ್ವಾಂಸ ಮಂಡಳಿಯೇ ಇದನ್ನು ಡಾಕ್ಟರೇಟ್ ಪ್ರಶಸ್ತಿಗಾಗಿ ಶಿಫಾರಸ್ ಮಾಡಿರುವಾಗ ಇತರರ ಶಿಫಾರಸ್ ಯಾಕೆ ಬೇಕು?

ಡಾ. ಕುಲಕರ್ಣಿಯವರು ನನ್ನ ಬಹುಕಾಲದ ಮಿತ್ರರು. ನಾನು ಗುಲಬರ್ಗಾ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದ ದಿನಗಳಲ್ಲಿ ಅವರು ನನ್ನ ಬಳಿ ಬಂದು ಪಿಎಚ್.ಡಿ. ಪದವಿಗಾಗಿ ಕೆಲಸ ಮಾಡುವ ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಅದನ್ನು ತಿಳಿದು ನನಗೆ ತುಂಬ ಸಂತೋಷವೆನ್ನಿಸಿತು. ಬರವಣಿಗೆ ಅವರಿಗೆ ಹೊಸತಲ್ಲ. ತಮ್ಮ ನಾನಾ ವಿಧವಾದ ಬರಹಗಳಿಂದ ಅವರು ಕನ್ನಡ ಓದುಗರಿಗೆ ಪರಿಚಿತರಾಗಿದ್ದಾರೆ. ಅವರು ಕೆಲಸ ಮಾಡುತ್ತಿರುವದು ಅಂಚೆ ತಂತಿ ಇಲಾಖೆಯಲ್ಲಿ. ಸಂಶೋಧನೆ, ಸಂಶೋಧನೆಯ ಪದವಿ ಇವೆಲ್ಲ ಶಾಲೆ, ಕಾಲೇಜು, ವಿಶ್ವವಿದ್ಯಾನಿಲಯಗಳ ಆವರಣದಲ್ಲಿ ಸುತ್ತುತ್ತಿರುವ ದಿನಗಳಲ್ಲಿ ಹೊರಗಿನವರೊಬ್ಬರು ಈ ವಿಷಯದಲ್ಲಿ ಆಸಕ್ತಿ ತಾಳಿದ್ದು ಸ್ತುತ್ಯರ್ಹವೆನಿಸಿತು.

ಈ ಪದವಿಯಿಂದ ಡಾ. ಕುಲಕರ್ಣಿಯವರಿಗೆ ಆಗುವ ಲೌಕಿಕ ಲಾಭಗಳೇನೂ ಇರಲಿಲ್ಲ. ಅವರು ಆಗಲೇ ಮಧ್ಯ ವಯಸ್ಸಿಗೆ ಬಂದಿದ್ದರು. ಅವರ ಉದ್ದೇಶಕ್ಕೆ ಆಯ್ಕೆ, ಬಡ್ತಿ ಮೊದಲಾದ ಯಾವ ಜಿಡ್ಡೂ ಇರಲಿಲ್ಲ. ಸಂಶೋಧನೆಯ ಅವರ ಆಸಕ್ತಿ ಶುದ್ಧವಾಗಿತ್ತು. ಎಷ್ಟೋ ಸಂದರ್ಭಗಳಲ್ಲಿ ಇಂಥವರು ತಮ್ಮದೇ ಆದ ವೃತ್ತಿಜೀವನದ ನಡುವೆ ತಮಗೆ ಪ್ರಿಯವಾದ ಈ ಬಗೆಯ ಕೆಲಸವನ್ನು ಮುಗಿಸಲಾಗದೆ ಒದ್ದಾಡುತ್ತಿದ್ದುದು ನನಗೆ ಗೊತ್ತಿತ್ತು. ಆದರೆ ಡಾ.ಕುಲಕರ್ಣಿಯವರ ಪ್ರವೃತ್ತಿ ನನಗೆ ಸ್ವಲ್ಪಮಟ್ಟಿಗೆ ತಿಳಿದಿತ್ತು. ಆದುದರಿಂದಲೇ ಅವರಿಗೆ ಪ್ರೋತ್ಸಾಹದಾಯಕವಾದ ಕೆಲವು ಮಾತುಗಳನ್ನು ಹೇಳಿದೆ.

ಅವರು ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ, ಡಾ. ಕೃಷ್ಣಮೂರ್ತಿ ಕಿತ್ತೂರ ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಸಂಶೋಧನೆಗೆಂದು ತಮ್ಮ ಹೆಸರನ್ನು ನೋಂದಾಯಿಸಿಕೊಂಡರು. ನಾನು ಗುಲುಬರ್ಗಾ ಬಿಟ್ಟು ಮೈಸೂರಿಗೆ ಬಂದ ಕೆಲವು ತಿಂಗಳುಗಳಲ್ಲಿಯೇ ಡಾ.ಕುಲಕರ್ಣಿಯವರಿಂದ ಕಾಗದ ಬಂತು. ತಮಗೆ ಪದವಿ ದೊರೆಯಿತೆಂದು ತಿಳಿಸಿದ್ದರು. ಸುಮಾರು ಎರಡೂವರೆ ಮೂರು ವರ್ಷಗಳ ಕ್ಷಿಪ್ರಾವಧಿಯಲ್ಲಿ ಅವರು ತಮ್ಮ ಪ್ರಬಂಧವನ್ನು ಮುಗಿಸಿ ಯಶಸ್ವಿಯಾಗಿದ್ದರು. ನಿಜದಲ್ಲಿ ಪಿಎಚ್.ಡಿ. ಪದವಿಗೆ ನೋಂದಾಯಿಸಿಕೊಳ್ಳುವ ಪೂರ್ವದ ಕೆಲವು ವರ್ಷಗಳಲ್ಲಿ ಅವರು ತಮ್ಮ ಸಂಶೋಧನೆಯ ವಿಷಯದಲ್ಲಿ ಸಾಕಷ್ಟು ಕೆಲಸ ಮಾಡಿಕೊಂಡಿದ್ದರು. ಬರವಣಿಗೆ ಅವರಿಗೆ ಸಹಜವಾಗಿ ಸಾಧಿಸಿತ್ತು. ಈ ಕಾರಣಗಳಿಂದ ಅವರಿಗೆ ಪ್ರಬಂಧವನ್ನು ಸುಲಭವಾಗಿ ಮುಗಿಸುವದು ಸಾಧ್ಯವಾಗಿತ್ತು.

ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ಅವರನ್ನು ಈ ಸಂದರ್ಭದಲ್ಲಿ ನಾನು

ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಪದವಿ ಪಡೆದ ಸ್ವಲ್ಪ ಕಾಲದಲ್ಲಿಯೇ ಅವರ ಪ್ರಬಂಧ ಪ್ರಕಟಗೊಳ್ಳುತ್ತಿರುವುದು ಹೆಚ್ಚಿನ ಸಂತೋಷದ ಸಂಗತಿ. ಇಂಥ ಅನೇಕ ಪ್ರಬಂಧಗಳು ಬೆಳಕಿಗೆ ಬರುವುದೇ ಸಾಧ್ಯವಾಗದ ಸಂದರ್ಭದಲ್ಲಿ (ಕೆಲವು ಬೆಳಕಿಗೆ ಬರುವಂಥವೂ ಅಲ್ಲ, ಆ ಮಾತು ಬೇರೆ!) ಪ್ರಸ್ತುತ ಪ್ರಕಟಣೆಯನ್ನು ನಾನು ಸ್ವಾಗತಿಸುತ್ತೇನೆ. ಈ ಪ್ರಬಂಧ 'ಕಾಖಂಡಿಕಿ ಶ್ರೀ ಮಹಿಪತಿರಾಯರು' ನಮ್ಮ ಹರಿದಾಸ ಸಾಹಿತ್ಯ ಪರಂಪರೆಯನ್ನು ಅರಿತುಕೊಳ್ಳುವ ದಿಕ್ಕಿನಲ್ಲಿ ಸಹಾಯಕವಾಗುವಂಥದು. ದಾಸ ಸಾಹಿತ್ಯವನ್ನು ಸಾಮಾನ್ಯವಾಗಿ, ಮಹಿಪತಿರಾಯರನ್ನು ನಿರ್ದಿಷ್ಟವಾಗಿ ತಿಳಿದುಕೊಳ್ಳುವಲ್ಲಿ ಇದು ಹೆಚ್ಚಿನ ನೆರವನ್ನು ನೀಡುತ್ತದೆ.

ದಾಸ ಸಾಹಿತ್ಯದ ಪ್ರಕಟಣೆಯ ಇತಿಹಾಸ ಹತ್ತಿರ ಹತ್ತಿರ ಒಂದೂವರೆ ಶತಮಾನದ್ದು (೧೮೫೦) ಆದರೆ ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನಾ ಪದವಿಗೆಂದು ಹರಿದಾಸ ಸಾಹಿತ್ಯದ ಅಧ್ಯಯನ ಮಾತ್ರ ಕಳೆದ ನಾಲ್ಕು ದಶಕಗಳಿಂದ ನಡೆದುಕೊಂಡು ಬಂದಿದೆ. ಈ ದಿಸೆಯಲ್ಲಿ ಡಾ.ಎ.ಟಿ.ಪಾಟೀಲ ಅವರು 'ಶ್ರೀ ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು' ಎಂಬ ಪ್ರಬಂಧವನ್ನು ಪ್ರಕಟಿಸಿ ಮೊದಲಿಗರೆನ್ನಿಸಿದರು (೧೯೫೬). ಮುಂದೆ ಡಾ. ಕೆ.ಎಂ.ಕೃಷ್ಣರಾವ್ ('ಶ್ರೀ ಜಗನ್ನಾಥ ದಾಸರು', ೧೯೫೬), ಡಾ.ವ.ಅ.ದಿವಾಣಜಿ ('ಪ್ರಸಾದ ಯೋಗ',೧೯೭೨), ಡಾ.ಎಚ್.ಕೆ.ವೇದವ್ಯಾಸಾಚಾರ್ಯ ('ಕರ್ನಾಟಕದ ಹರಿದಾಸರು', ೧೯೬೫), ಡಾ.ಕೆ.ಗೋಕುಲನಾಥ ('ಶ್ರೀ ವಿಜಯದಾಸರು ಜೀವನ ಮತ್ತು ಕೃತಿಗಳ ಸಮೀಕ್ಷೆ',೧೯೭೮), ಡಾ.ಟಿ.ಎನ್.ನಾಗರತ್ನ ('ಹರಿದಾಸರ ಭಕ್ತಿ ಸ್ವರೂಪ',೧೯೮೬) ಮೊದಲಾದವರು ಈ ಕೆಲಸವನ್ನು ಮುಂದುವರಿಸಿದರು. ಕನಕದಾಸರನ್ನು, ವಾದಿರಾಜರನ್ನು ಮತ್ತು ಹರಿದಾಸ ಆಂದೋಲನವನ್ನು ಕುರಿತ ಮೂರು ಪ್ರಬಂಧಗಳು ಇನ್ನೂ ಪ್ರಕಟವಾಗಬೇಕಾಗಿವೆ. ಈ ಮಾಲೆಯಲ್ಲಿ ಡಾ.ಕೃಷ್ಣ ಕೊಲ್ಹಾರಕುಲಕರ್ಣಿ ಅವರ ಪ್ರಸ್ತುತ ಪ್ರಬಂಧ ತೀರ ಈಚಿನದು.

ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ, ಶ್ರೀಪಾದರಾಜರಿಂದ ತೊಡಗಿ ಪುರಂದರದಾಸರವರೆಗಿನ ದಾಸ ಸಾಹಿತ್ಯ ಘಟ್ಟ ಒಂದು; ವಿಜಯದಾಸರಿಂದ ತೊಡಗಿದ ಘಟ್ಟ ಇನ್ನೊಂದು. ಎರಡೂ ಘಟ್ಟಗಳ ನಡುವಿನ ಒಂದು ಒಂದೂವರೆ ಶತಮಾನದ ಅವಧಿಯನ್ನು ಒಂದು ಬಗೆಯ ಅಜ್ಞಾತ ಕಾಲವೆಂದು ಇತಿಹಾಸಕಾರರು ಭಾವಿಸಿದ್ದಾರೆ. ಮಹಿಪತಿರಾಯರು ಈ ಅವಧಿಗೆ ಸೇರಿದವರಾದರೂ ನಿರ್ಲಕ್ಷ್ಯಕ್ಕೆ ಒಳಗಾದವರು. ಅವರ ಮಗ ಕೃಷ್ಣರಾಯರು ಸ್ವಂತ ಬಲದ ಮೇಲೆ ಕೀರ್ತನಕಾರರೆನ್ನಿಸಿದ್ದವರು. ''ಹರಿದಾಸ ಸಾಹಿತ್ಯದ ಸೊಲ್ಲೇ ಅಡಗಿ ಹೋಗಿದ್ದ ಹದಿನೇಳನೆ ಯ ಶತಮಾನದಲ್ಲಿ ಈ ತಂದೆ ಮಕ್ಕಳ ವಾಣಿ ಕೇಳಿ ಬರುವದನ್ನು ನಾವು ಕಡೆಗಣಿಸುವಂತಿಲ್ಲ. ಆದರೆ ಅವರ ರೀತಿ ನೀತಿಗಳಲ್ಲಿ ಆದ ಮಾರ್ಪಾಡುಗಳನ್ನು ಮನ ಒಪ್ಪದೆಯೋ ಇಲ್ಲವೇ ಅವರ ಕೀರ್ತನೆಗಳು ಹೆಚ್ಚಾಗಿ ಬೆಳಕಿಗೆ ಬಾರದೇ ಇದ್ದುದರಿಂದಲೋ ಏನೋ, ನಮ್ಮ ಹರಿದಾಸ ಪರಂಪರೆಯಲ್ಲಿ ಸಾಂಪ್ರದಾಯಿಕರು ಅವರ ಹೆಸರನ್ನು ಹೇಳುವ ಪದ್ಧತಿ ಕಂಡು ಬರುವುದಿಲ್ಲ. ಮಹಿಪತಿರಾಯರು ಬದುಕಿದ್ದ ಕಾಲದಲ್ಲಿಯೇ ಅವರ ಬಗ್ಗೆ ಜನ ಆಕ್ಷೇಪವೆತ್ತಿರಬಹುದು ಎನ್ನುವುದಕ್ಕೆ ಅವರು ರಚಿಸಿರುವ 'ದ್ವೈತ ಅದ್ವೈತೆಂದು ಹೊಡೆದಾಡದಿರೊ ಪ್ರಾಣಿ, ಚೇತಿಸಿ ಬ್ಯಾರಿಹ ವಸ್ತುಗಾಣಿ' ಎಂದು ಮೊದಲಾಗುವ ಒಂದು

ಕೀರ್ತನೆಯೇ ಸಾಕ್ಷಿ'' ಎಂದು ಡಾ.ಜಿ.ವರದಾರಾಜರಾಯರು ಹೇಳಿರುವ ಮಾತುಗಳನ್ನು ನಾವು ಮರೆಯುವಂತಿಲ್ಲ. ಮಹಿಪತಿರಾಯರು ದ್ವೈತ ತತ್ವಾನುಯಾಯಿಯಾಗಿದ್ದರೂ, ಕೆಲವು ವಲಯಗಳಲ್ಲಿ ಅವರಿಗೆ ಅದ್ವೈತವನ್ನು ಆರೋಪಿಸಿರುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು. ಇದು ಸತ್ಯಕ್ಕೆ ದೂರವಾದುದೆಂಬುದನ್ನು ವಿದ್ವಾಂಸರು ಪ್ರತಿಪಾದಿಸಿದ್ದಾರೆ.

ಕಾರಣಗಳು ಏನೇ ಇರಲಿ ಮಹಿಪತಿರಾಯರು ನಿರ್ಲಕ್ಷಿತರಾದುದಂತೂ ನಿಜ. ಇಲ್ಲದಿದ್ದರೆ ದಾಸ ಪರಂಪರೆಯ ಸಾತತ್ಯವನ್ನು ಅವರು ಕಾಪಾಡಿಕೊಂಡು ಬಂದಿದ್ದರೂ, ಅವರ ಕಾಲವನ್ನು 'ಅಜ್ಞಾತಕಾಲ' ವೆಂದೂ 'ತಟಸ್ಥಕಾಲ'ವೆಂದೂ ಕರೆಯುವ ಆಗತ್ಯವಿರುತ್ತಿರಲಿಲ್ಲ. ಅವರ ಸಾಹಿತ್ಯಿಕ, ಆಧ್ಯಾತ್ಮಿಕ ಸಾಧನೆಗಳಾದರೂ ಸಣ್ಣವಲ್ಲ. ''ಆಧ್ಯಾತ್ಮಿಕ ಕವಿಶ್ರೇಷ್ಠರಲ್ಲಿ ಅವರೂ ಒಬ್ಬರು'' ಎಂಬ ಡಾ.ಆರ್.ಡಿ.ರಾನಡೆ ಅವರ ಮಾತುಗಳೇ ಇದನ್ನು ದೃಢಪಡಿಸುತ್ತವೆ. ಡಾ.ಜಿ.ವರದರಾಜರಾಯರ ಈ ಮಾತುಗಳು ಮನನಯೋಗ್ಯವಾಗಿವೆ: ''ವಾಸ್ತವವಾಗಿ ವಿಚಾರಿಸಿ ನೋಡಿದಲ್ಲಿ ಮಹಿಪತಿರಾಯರು ಈ ಕೃತಿಗಳನ್ನು ರಚಿಸಿದ ಕಾಲವಾದರೋ, ಹರಿದಾಸ ಸಾಹಿತ್ಯದ ಇತಿಹಾಸದಲ್ಲಿ ಅತ್ಯಂತ ಸಂದಿಗ್ಧವಾದುದು. ಅತ್ತ ಪುರಂದರ ದಾಸರ ಕಾಲ ಮುಗಿದು, ಇತ್ತ ವಿಜಯದಾಸರ ಕಾಲ ಇನ್ನೂ ಆರಂಭವಾಗದಿದ್ದ ಅವಧಿಯದು. ಎಂದರೆ ಕ್ರಿ.ಶ. ೧೫೬೪ ರಿಂದ ಕ್ರಿ.ಶ. ೧೬೮೭ ರವರೆಗೆ ಈ ಕ್ಷೇತ್ರದಲ್ಲಿ ಏನು ಕೃಷಿ ನಡೆಯಿತೆಂಬುದರ ಅರಿವು ನಮಗೆ ಆಗಿರಲಿಲ್ಲ. ಇದೀಗ ಶ್ರೀ ಮಹಿಪತಿರಾಯರು ಅವರ ಮಕ್ಕಳಾದ ಕೃಷ್ಣರಾಯರು ಈ ಅವಧಿಯಲ್ಲಿ ಸಾಕಷ್ಟು ಕೃಷಿ ಮಾಡಿರುವರೆಂಬ ಅಂಶ ತುಂಬ ಪ್ರಶಸ್ತವಾದುದು.''

ಈ ಅಭಿಪ್ರಾಯವನ್ನು ದೃಢಪಡಿಸಿರುವುದೇ ಡಾ. ಕುಲಕರ್ಣಿಯವರ ಪ್ರಸ್ತುತ ಪ್ರಬಂಧದ ಮಹತ್ವವಾಗಿದೆ. ಡಾ. ವರದರಾಜರಾಯರ ಮೇಲಿನ ಮಾತುಗಳನ್ನೇ ಡಾ. ಕುಲಕರ್ಣಿಯವರೂ ಹೇಳಿ (ಪು.೨೦೩), ''ಈ ಪ್ರಬಂಧದ ಮುಖಾಂತರ ದೊರೆತ ೩೬ ಹಸ್ತಪ್ರತಿಗಳು ಹರಿದಾಸ ಸಾಹಿತ್ಯದಲ್ಲಿ ಅಜ್ಞಾತ ಕಾಲವೊಂದಿದೆಯೆಂಬುದನ್ನು ಸುಳ್ಳುಮಾಡುತ್ತದೆ. ಆ ನಿಟ್ಟಿನಲ್ಲಿ ದೊರೆತ ಅಗಾಧ ಪ್ರಮಾಣದ ಸಾಹಿತ್ಯ, ವಿಶೇಷವಾಗಿ ಮಹಿಪತಿರಾಯರ ವೈವಿಧ್ಯಮಯ ಶೈಲಿಯ ಕೃತಿಗಳು ೧೭ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಾರ್ಹವಾಗಿವೆ. ಮಹಿಪತಿರಾಯರ ಕೃತಿಗಳ ಅವಲೋಕನದಿಂದ ಅವರ ಸಂಪ್ರದಾಯ ಶ್ರದ್ಧೆಗಳ ಕುರಿತು ಇರುವ ಎಲ್ಲ ಸಂದೇಹಗಳೂ ನಿವಾರಣೆಯಾದಂತಾಗಿದೆ'' ಎಂದಿದ್ದಾರೆ (ಪು.೨೦೪). '' ಈ ದಿಶೆಯಲ್ಲಿ ನಡೆಸಿದ ಶೋಧದ ಫಲವಾಗಿ ಈ ಮೊದಲಿನ 'ಅಜ್ಞಾತಕಾಲ' ಎಂಬ ನಿರ್ಣಯವನ್ನು ಬದಲಿಸುವಷ್ಟು ಆ ಕಾಲದ ಸಾಹಿತ್ಯವು ನನಗೆ ದೊರೆಯಿತು'' ಎಂಬ ಮಾತನ್ನೂ ಹೇಳಿದ್ದಾರೆ. ಆದರೆ ಮಹಿಪತಿರಾಯರ ಕೃತಿಗಳು ಗುಣದಲ್ಲಿ ಪುರಂದರ ದಾಸರ ಕೃತಿಗಳಿಗೆ ಸರಿಸಮನಾದವೆಂದು ಅವರು ಇದೇ ಸಂದರ್ಭದಲ್ಲಿ ಹೇಳಿದ ಮಾತುಗಳು (ಪು.೪) ಉತ್ಪ್ರೇಕ್ಷೆ ಎನ್ನಿಸುತ್ತವೆ.

'ಶ್ರೀ ಮಹಿಪತಿರಾಯರು' ಎಂಬ ಈ ಪ್ರಬಂಧದಲ್ಲಿ ಏಳು ಅಧ್ಯಾಯಗಳಿವೆ: ಅಧ್ಯಯನದ ಹಿನ್ನೆಲೆ, ವಿಷಯ ಸಂಗ್ರಹದ ವಿವರ, ಅಧ್ಯಯನದ ವಿಷಯ ಪರಿಚಯ, ಮಹಿಪತಿರಾಯರು, ಅವರ ಕೃತಿಗಳು, ಕೃತಿಗಳ ಅವಲೋಕನ ಮತ್ತು ಉಪಸಂಹಾರ-ಇವು ಈ ಏಳು

ಅಧ್ಯಯನಗಳನ್ನು ತುಂಬಿಕೊಂಡಿವೆ. ಅನುಬಂಧಗಳ ವಿಭಾಗದಲ್ಲಿ ಕೆಲವು ಉಪಯುಕ್ತ ಪತ್ರಗಳನ್ನು ಕೊಡಲಾಗಿದೆ.

ಮೊದಲನೇಯ ಅಧ್ಯಾಯದಲ್ಲಿ ಹರಿದಾಸ ಸಾಹಿತ್ಯ ಪ್ರಕಟಣೆಯ ಸ್ಥೂಲ ಇತಿಹಾಸವಿದೆ. ಒಂದೆರಡು ಹೆಸರುಗಳು ತಪ್ಪಾಗಿವೆ. ಕೆಲವಾದರೂ ಮಹತ್ವದ ಪ್ರಕಟಣೆಗಳನ್ನು ಉಲ್ಲೇಖಿಸಿಲ್ಲ. ಈ ದೃಷ್ಟಿಯಿಂದ ಈ ಭಾಗ ಅಸಮರ್ಪಕವಾಗಿದೆ. ಇಂಥ ಸಮೀಕ್ಷೆಗಳು ಪರಿಪೂರ್ಣವಾಗಿರುವುದು ಸಾಧ್ಯವೇ ಇಲ್ಲ. ಆದರೆ ಮುಖ್ಯವಾದ ಉಲ್ಲೇಖಗಳು ತಪ್ಪಿ ಹೋಗಬಾರದು. ಈ ಅಧ್ಯಾಯದ ರಚನೆಯಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ 'ಶ್ರೀಪಾದರಾಜರ ಕೃತಿಗಳು' (೧೯೭೩) ಖಂಡಿತವಾಗಿಯೂ ಡಾ.ಕುಲಕರ್ಣಿಯವರ ನೆರವಿಗೆ ಬಂದಿರುತ್ತದೆ. ಆದರೆ ಅದರ ಉಲ್ಲೇಖವೇ ಇಲ್ಲಿ ಕಾಣದಿರುವುದು ಆಶ್ಚರ್ಯವೇ ಸರಿ.

ತಮ್ಮ ಅಧ್ಯಯನಕ್ಕಾಗಿ ಡಾ. ಕುಲಕರ್ಣಿಯವರು ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ. ಈ ಹಸ್ತಪ್ರತಿಗಳೇ ಅವರ ಅಧ್ಯಯನದ ಬಲ. ಅವರು ಸಂಗ್ರಹಿಸಿರುವ ಹಸ್ತಪ್ರತಿಗಳು ಕೇವಲ ಮಹಿಪತಿರಾಯರ ಕೃತಿಗಳಿಗಷ್ಟೇ ಸಂಬಂಧಿಸಿದವಲ್ಲ; ಅವರ ಮಗ, ಮೊಮ್ಮಕ್ಕಳು, ಮರಿಮಕ್ಕಳು ಮತ್ತು ಇತರ ಹರಿದಾಸರು, ಸಂತರು ರಚಿಸಿದ ಕೃತಿಗಳನ್ನೂ ಒಳಗೊಂಡಿವೆ. ಈ ಹಸ್ತಪ್ರತಿಗಳು ಕನ್ನಡ, ಮರಾಠಿ, ಹಿಂದಿ ಭಾಷೆಯಲ್ಲೂ ಇವೆ. ಈ ಎಲ್ಲ ಹಸ್ತಪ್ರತಿಗಳ ಶಾಸ್ತ್ರೋಕ್ತ ವಿವರಣೆ ಎರಡನೆಯ ಅಧ್ಯಾಯದಲ್ಲಿದೆ.

'ವಿಷಯ ಪ್ರವೇಶ' ಎಂಬ ಮೂರನೇಯ ಅಧ್ಯಾಯದಲ್ಲಿ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಭಾಷಿಕ ಹಾಗೂ ಸಾಹಿತ್ಯಿಕ ಸಮಕಾಲೀನ ಸ್ಥಿತಿಗತಿಗಳ ವಿವರಣೆಯೂ, ಮುಖ್ಯ ಸಮಕಾಲೀನರು ಕೆಲವರ ಸ್ಥೂಲ ಪರಿಚಯವೂ ಇವೆ. ಅಂದಿನ ಕವಿ ಸಾಹಿತಿಗಳು ಬಹುಭಾಷೆಗಳನ್ನು ಉಪಯೋಗಿಸಿ ಕೃತಿ ರಚನೆ ಮಾಡಿರುವದು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ಡಾ.ಕುಲಕರ್ಣಿಯವರು ಅದನ್ನು ಸರಿಯಾಗಿ ಗುರುತಿಸಿದ್ದಾರೆ. ''ವೈಷ್ಣವ-ಬ್ರಾಹ್ಮಣರು ಈ ಆಂದೋಲನದಲ್ಲಿ ಅಧಿಕವಾಗಿದ್ದುದರಿಂದ ಬಹುಶಃ ಅದಕ್ಕೆ 'ಹರಿದಾಸಕೂಟ' ಎಂಬ ಹೆಸರು ಬಂದಿರಬೇಕು'' (ಪು. ೪೧) ಎನ್ನುವದು ಹೊಸವಾದ ಅರ್ಥವಾಗಿದ್ದರೂ, ಸಾಧಾರಣವಾದುದೆನಿಸುತ್ತದೆ. ಹೆಚ್ಚಿನ ಚರ್ಚೆಯನ್ನು ಬೇಡುತ್ತದೆ. ಇದೇ ಸಂದರ್ಭದಲ್ಲಿ ಹರಿದಾಸರು ಯಾರಾಗಿರಬೇಕೆಂಬ ಹಟವನ್ನು ಕುರಿತು ಮಾತು ಸ್ಪಷ್ಟವಾಗಿಲ್ಲ. ಆ ವಿವರಣೆಯ ಅಗತ್ಯವಿಲ್ಲವೆಂದೂ ತೋರುತ್ತದೆ. ''ದರ್ಮ ರಕ್ಷಣೆ ಅವರ ಮೂಲ ಉದ್ದೇಶವಾಗಿತ್ತು'' (ಪು. ೪೧) ಎಂದು ಹೇಳಲಾಗಿದೆ. ಮತ ಪ್ರಚಾರವೂ ಅದರಲ್ಲಿ ಸೇರಿತ್ತು ಎಂಬುದನ್ನು ನಾವು ಮರೆಯಬಾರದು. ''ಹರಿದಾಸ ಸಾಹಿತ್ಯವು ಒಂದು ತತ್ವದ ಮುಖವಾಣಿಯಾಗಿರಲಿಲ್ಲ'' ಎನ್ನುವುದು (ಪು. ೪೨) ಸರಿಯಲ್ಲ. ಮಧ್ವತತ್ವ ಆದರೆದುರಿಗೇ ಇತ್ತು ಎನ್ನುವುದನ್ನು ಕಡೆಗಾಣುವುದು ಹೇಗೆ ಸಾಧ್ಯ? ಸಮಕಾಲೀನ ಸ್ಥಿತಿಗಳ ಮತ್ತು ವ್ಯಕ್ತಿಗಳ ಈ ಪರಿಚಯ, ಮಹಿಪತಿರಾಯರ ಜೀವನ ಸಾಧನೆಗಳನ್ನು ಅರ್ಥ ಮಾಡಿಕೊಳ್ಳಲು ಸಮರ್ಥ ಪ್ರವೇಶವನ್ನೊದಗಿಸುತ್ತದೆ.

ಮುಂದಿನ ಮೂರು ಅಧ್ಯಾಯಗಳು ಈ ಪ್ರಬಂಧದ ತಿರುಳಾಗಿದೆ. ಇಲ್ಲಿ ಡಾ.ಕೃಷ್ಣ ಕೊಲ್ಹಾರಕುಲಕರ್ಣಿಯವರು ತಮ್ಮ ಸಂಶೋಧನೆಯ ಮಹತ್ವವನ್ನು ತೋರಿಸಿದ್ದಾರೆ. ಅವರ

ಶ್ರಮ ಈ ಅಧ್ಯಾಯದಲ್ಲಿ ಹರಳುಗಟ್ಟಿದೆ. ಮಹಿಪತಿರಾಯರ ಜೀವನ-ಕೃತಿಗಳ ಸುತ್ತ ಹೆಣೆದುಕೊಂಡ ಸಮಸ್ಯೆಗಳನ್ನು ಬಿಡಿಸಲು ಅವರು ಶ್ರಮಿಸಿದ್ದಾರೆ. ವಿಜಾಪುರದ ಆದಿಲಶಾಹಿ ಮನೆತನದ ಆರನೆಯ ಬಾದಶಹ ಮಹ್ಮದ್ ಆದಿಲಶಹನ (೧೬೨೬-೧೬೫೬) ಆಸ್ಥಾನದಲ್ಲಿ ಮಹಿಪತಿರಾಯರು ಕೋಶಾಧಿಕಾರಿಯಾಗಿದ್ದರೆಂದೂ, ಮಂತ್ರಿಯಾಗಿದ್ದರೆಂದೂ ಹೇಳಿಕೆಗಳಿವೆ. ''ಆದರೆ ಐತಿಹಾಸಿಕ ದಾಖಲೆಗಳಲ್ಲಿ ಅವರ ಹೆಸರು ಮಾತ್ರ ಈವರೆಗೆ ದೊರೆತಿಲ್ಲ'' ಎಂದು ಕುಲಕರ್ಣಿಯವರು ಖಚಿತಪಡಿಸುತ್ತಾರೆ. ಇದು ಒಂದು ಮುಖ್ಯವಾದ ವಿಚಾರ. ಮಹಿಪತಿರಾಯರ ಮರಿಮಗ 'ಶ್ರೀಪತಿ ತನುಜ' ತನ್ನ ಮುತ್ತಜ್ಜನನ್ನು ಕುರಿತು ಬರೆದಿರುವ ಎಂಬತ್ತು ಸಾಲುಗಳನ್ನೇ ಕುಲಕರ್ಣಿಯವರು, ರಾಯರ ಬದುಕಿಗೆ ಸಂಬಂಧಿಸಿದ ಮುಖ್ಯ ದಾಖಲೆಯನ್ನಾಗಿ ಗ್ರಹಿಸುತ್ತಾರೆ. ಇಂಥ ಸಾಹಿತ್ಯಿಕ ರಚನೆಗಳು ಎಷ್ಟರಮಟ್ಟಿಗೆ ನಂಬಿಕೆಗೆ ಅರ್ಹವಾಗಿವೆ ಎಂಬುದನ್ನು ನಾವು ಕೇಳಿಕೊಳ್ಳಬೇಕು. ''ಅತಿರಂಜಿತ ಕಲ್ಪನೆಗಳನ್ನು ಅಸಾಧ್ಯವಾದ ಪವಾಡಗಳನ್ನು ಅವಾಸ್ತವಿಕ ದೃಷ್ಟಿಯಿಂದ ಬದಿಗೆ ಸರಿಸಬೇಕಾಗುತ್ತದೆ. ಆದರಿಂದಾಗಿ ಮಹಾಪುರುಷರ ಅಲೌಕಿಕತೆಯನ್ನು ಪ್ರಶ್ನಿಸಿದ ಹಾಗೆ ಎಂದು ಯಾರೂ ಭಾವಿಸಬೇಕಾಗಿಲ್ಲ'' (ಪು. ೬೮) ಎನ್ನುವ ಆರೋಗ್ಯಕರ ದೃಷ್ಟಿಯನ್ನು ಡಾ.ಕುಲಕರ್ಣಿ ಹೊಂದಿದ್ದಾರೆ. ಇದಕ್ಕಾಗಿ ಅವರು ಅಭಿನಂದನೀಯರು.

ಮಹಿಪತಿರಾಯರು ಕ್ರಿ.ಶ. ಸುಮಾರು ೧೬೧೧ರಲ್ಲಿ ಜನಿಸಿ ೧೬೮೧ರಲ್ಲಿ ಮರಣ ಹೊಂದಿದರೆಂದು ಇದುವರೆಗಿನ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅದಕ್ಕನುಸಾರವಾಗಿಯೇ ಜೀವನದ ಕೆಲವು ಮುಖ್ಯ ವರ್ಷಗಳನ್ನೂ ಸೂಚಿಸಿದ್ದಾರೆ. ಡಾ.ಕುಲಕರ್ಣಿಯವರು ತುಂಬ ಶ್ರಮವಹಿಸಿ ಈ ವರ್ಷಗಳನ್ನು ತಿದ್ದಿದ್ದಾರೆ. ಅವರ ಪ್ರಕಾರ ಮಹಿಪತಿರಾಯರು ಜನಿಸಿದ್ದು ಕ್ರಿ.ಶ.ಸು. ೧೬೪೦ ರಲ್ಲಿ; ಮರಣ ಹೊಂದಿದ್ದು ೧೭೦೫ ರಲ್ಲಿ, ಡಾ.ಕುಲಕರ್ಣಿಯವರು ಒದಗಿಸಿರುವ ದಾಖಲೆಗಳು, ಮಾಡಿರುವ ತರ್ಕ ಇದನ್ನು ಒಪ್ಪಬಹುದೆಂದು ಹೇಳುತ್ತವೆ. ''ಕಲಬುರ್ಗಿ ಜಿಲ್ಲೆಯ ತಾಲೂಕಿನ ಸ್ಥಳ ಶಾಹಪುರದಲ್ಲಿ ಇಂದಿಗೂ ಅವರು (ರಾಯರು) ಉಳಿದುಕೊಂಡಿದ್ದ ಕುರುಹುಗಳು ಇವೆ'' ಎಂದು ಹೇಳುತ್ತಾರೆ (ಪು. ೭೧) ಆ ಕುರುಹುಗಳು ಏನೆಂದು ಪುಟ ೯೨ರಲ್ಲಿ ಹೇಳಿದೆ. ಇವರೆಡರ ಸಮನ್ವಯ ಒಂದೆಡೆಗಿದ್ದರೆ ಚೆನ್ನಾಗಿತ್ತು. ಮಹಿಪತಿರಾಯರ ಗುರುಗಳೆಂದು ಉಮರ್ಜಿ ಕೃಷ್ಣಾಚಾರ್ಯರ ಹೆಸರನ್ನು ವಿದ್ವಾಂಸರು ಹೇಳಿಕೊಂಡು ಬಂದಿದ್ದಾರೆ. ಆದರೆ ಉಮರ್ಜಿಯವರ ಹೆಸರು ಗ್ರಂಥಸ್ಥವಾಗಿಲ್ಲವೆಂದು ಡಾ.ಕುಲಕರ್ಣಿ ಖಚಿತಗೊಳಿಸುತ್ತಾರೆ. ಸಾರವಾಡದ ಭಾಸ್ಕರ ಸ್ವಾಮಿಗಳ ಶಿಷ್ಯರಾಗಿ ಅಧ್ಯಾತ್ಮ ಸಾಧನೆ ಮಾಡಿ ಯೋಗ ಸಿದ್ಧಿಪಡೆದ ಮಹಿಪತಿರಾಯರು ಕೊಲ್ಹಾರದಲ್ಲಿ ಕಾಲವಶರಾಗಿ ಕಾಖಂಡಕಿಯಲ್ಲಿ ವೃಂದಾವನಸ್ಥರಾದರು ಎಂಬ ಮಾತು ಚರ್ಚಾತೀತವಾದದ್ದು.

ಮಹಿಪತಿರಾಯರ ಕೃತಿಗಳ ವಿವೇಚನೆ ಮಾಡುವಾಗ ದಾಸ ಪರಂಪರೆಯ ಕೆಲಸವನ್ನು ''ಪರಮತ ಧರ್ಮದ ಆಕ್ರಮಣದ ವಿರುದ್ಧ ಎದ್ದ ಒಂದು ಕ್ರಾಂತಿ'' (ಪು. ೧೦೯) ಎಂದು ಡಾ.ಕುಲಕರ್ಣಿ ಹೇಳುತ್ತಾರೆ. 'ಕ್ರಾಂತಿ' ಎಂಬ ಮಾತು ಬಹಳ ದೊಡ್ಡದಾಯಿತು ಎಂಬುದು ನಮ್ಮ ಅಭಿಪ್ರಾಯ. ಅದು ಏನಿದ್ದರೂ ಸ್ವಮತ ಪ್ರಚಾರದ ಒಂದು ಚಳವಳಿ ಎನ್ನಬಹುದೆಂದು ತೋರುತ್ತದೆ. ಹರಿದಾಸರಿಗೆ ವಿಜಯದಾಸರು ಒಂದು ಚೌಕಟ್ಟನ್ನು ಕಟ್ಟಿಕೊಟ್ಟು,

ಲಕ್ಷಣಗಳನ್ನು ಹೇಳಿದರು. ''ವಿಜಯದಾಸರಿಗಿಂತ ಮೊದಲಿನ ಹರಿದಾಸರಲ್ಲಿ ಈ ಲಕ್ಷಣಗಳನ್ನು ಹುಡುಕುವುದು ಉಚಿತವೆನ್ನಿಸುವದಿಲ್ಲ'' (ಪು.೧೧೦) ಎನ್ನುವ ಡಾ.ಕುಲಕರ್ಣಿಯವರು, ಈ ''ಎಲ್ಲ ಲಕ್ಷಣಗಳನ್ನು ಅವರ (ಮಹಿಪತಿರಾಯರ) ಚರಿತ್ರೆಯಿಂದ ಹಾಗೂ ಅವರು ರಚಿಸಿದ ಹಲವಾರು ಕೃತಿಗಳಿಂದ ಕಾಣಬಹುದಾಗಿದೆ'' (ಪು.೧೧೧) ಎನ್ನುತ್ತಾರೆ. ಇದು ಒಂದು ರೀತಿಯಲ್ಲಿ ಅಸ್ಪಷ್ಟವೆನ್ನಿಸುತ್ತದೆ. ವಿಜಯದಾಸರಿಗಿಂತ ಮೊದಲಿನ ದಾಸರಲ್ಲಿ ಈ ಲಕ್ಷಣಗಳ ಅಗತ್ಯವಿಲ್ಲವೆನ್ನುವುದಾದರೆ, ಅನಂತರದ ದಾಸರಲ್ಲಿ ಅವುಗಳ ಅಗತ್ಯ ಏನಿದೆ ?

ಹದಿನಾಲ್ಕು ವಿವಿಧ ಅಂಕಿತಗಳಿಂದ ಕೃತಿ ರಚನೆ ಮಾಡಿರುವ ಮಹಿಪತಿರಾಯರು ೭೫೪ ಕೃತಿಗಳನ್ನು ರಚಿಸಿದ್ದಾರೆಂದು ಡಾ.ಕುಲಕರ್ಣಿ ಲೆಕ್ಕ ಹಾಕಿದ್ದಾರೆ. ಇವು ಕನ್ನಡ (೬೮೫), ಮರಾಠಿ (೪೬), ಹಿಂದಿ (೧೮) ಭಾಷೆಗಳಲ್ಲಲ್ಲದೆ ಮಿಶ್ರ ಭಾಷೆ (೫)ಗಳಲ್ಲೂ ಇವೆ. ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಮಹಿಪತಿರಾಯರ ಕೃತಿಗಳಲ್ಲಿ ಹಲವಾರು ಅಪಪಾಠಗಳಿವೆ ಎಂಬುದಾಗಿ ಡಾ.ಕುಲಕರ್ಣಿಯವರು ಹೇಳುತ್ತಾರೆ. ಅನೇಕ ಕಾರಣಗಳಿಂದ ಇದು ನಿಜವಿರಬಹುದು. ದೇವನಾಗರಿಯಿಂದ ಲಿಪ್ಯಂತರಗೊಳಿಸುವಾಗ ತಪ್ಪಾಗಿರಬಹುದು; ಆಡುನುಡಿ- ಶಿಷ್ಟ ಭಾಷೆಗಳ ಗೊಂದಲದಿಂದ ತಪ್ಪಾಗಿರಬಹುದು; ಮುದ್ರಣ ದೋಷಗಳಿಂದ ತಪ್ಪಾಗಿರಬಹುದು; ಡಾ. ಜಾನ್ಸನ್ ಹೇಳುವಂತೆ ಸಂಪಾದಕರ 'ಅಜ್ಞಾನ'ದಿಂದಲೂ ತಪ್ಪಾಗಿರಬಹುದು. ಈ ಬಗೆಯ ಕೆಲಸಗಳು ಒಂದೇ ಸಲಕ್ಕೆ ಪರಿಪೂರ್ಣವೆನ್ನಿಸಲಾರವು. ಅಲ್ಲದೇ ಭಗವಂತನೇ ಪರಿಪೂರ್ಣನಲ್ಲದಿರುವಾಗ, ಅವನ ಸೃಷ್ಟಿಯೇ ಆದ ನಾವೂ ಪರಿಪೂರ್ಣರಾಗಿಲ್ಲದಾಗ, ನಮ್ಮ ಕೆಲಸಗಳು ಹೇಗೆ ಪರಿಪೂರ್ಣವಾದಾವು?

ತಮ್ಮ 'ಠ' ಪ್ರತಿಯನ್ನೂ, ಮೈಸೂರು ವಿಶ್ವವಿದ್ಯಾನಿಲಯದ ಪ್ರತಿಯನ್ನೂ ಡಾ.ಕುಲಕರ್ಣಿಯವರು ಹೋಲಿಸಿರುವುದನ್ನು (ಪು.೧೨೬-೧೩೧) ನೋಡಿದ ಮೇಲೆ ನನ್ನಲ್ಲಿ ಕೆಲವು ಪ್ರಶ್ನೆಗಳೆದ್ದವು. ಎರಡು ಭಿನ್ನ ಪ್ರತಿಗಳಿರುವಾಗ ಅವೆರಡೂ ಒಂದೇ ಆಗಿರಬೇಕೆಂದು ನಿರೀಕ್ಷಿಸುವುದು ಹೇಗೆ? ಇವುಗಳಲ್ಲಿ ಬದಲಾವಣೆಯ ಸಾಧ್ಯತೆಯೇ ಇಲ್ಲವೆ? ಎರಡೇ ಪ್ರತಿಗಳನ್ನು ಇಟ್ಟುಕೊಂಡು ಯಾವುದು ಸರಿ ಯಾವುದು ತಪ್ಪು ಎಂದು ಕಂಡುಕೊಳ್ಳುವುದು ಸಾಧ್ಯವೆ?- ಇವೆಲ್ಲ ಹಸ್ತಪ್ರತಿ ಶಾಸ್ತ್ರಕ್ಕೆ, ಗ್ರಂಥ ಸಂಪಾದನೆಗೆ ಸಂಬಂಧಿಸಿದ ವಿಚಾರಗಳು. 'ಠ' ಪ್ರತಿಯಲ್ಲಿ ''ಸರ್ವಪಾಪ ಹೋಯಿತು ನೋಡಿ'' ಎಂದಿದೆ (ಪು. ೧೨೯). ಮೈಸೂರು ಪ್ರತಿಯಲ್ಲಿ ''ಸರ್ವ ಪಾಪ ಹೋಯಿತು ಓಡಿ'' ಎಂದಿದೆ. ಮೈಸೂರು ಪಾಠ ಅಪಪಾಠ ಹೇಗಾಗುತ್ತದೆ? 'ಠ' ಪ್ರತಿಯಲ್ಲಿ ''ಗುರು ವಿಂದಧಿಕ ಬ್ಯಾರಿಲ್ಲ ಸುಖ'' ಎಂದಿದೆ. (ಪು. ೧೨೯) 'ಸುಖ' ಎನ್ನುವದು ಮೈಸೂರುಪ್ರತಿಯಲ್ಲಿ 'ಸಖ' ಎಂದಿದೆ. ಇದು ಅಚ್ಚಿನ ದೋಷವಾಗಿರಬಹುದು. ಆಗಿಲ್ಲದಿದ್ದರೂ 'ಸಖ' ಎನ್ನುವದು 'ಸುಖ' ಎನ್ನುವುದಕ್ಕಿಂತ ಹೆಚ್ಚು ಉತ್ತಮವಾಗಿಲ್ಲವೆ? 'ಠ' ಪ್ರತಿಯ 'ವಡಮೂಡಿ' ಮೈಸೂರು ಪ್ರತಿಯ 'ವಡಮೂಡಿ' (ಪು. ೧೩೧) ಇವುಗಳ ನಡುವಿನ ವ್ಯತ್ಯಾಸ ಏನೆಂದು ನನಗೆ ತಿಳಿಯಲಿಲ್ಲ. ಯಾವುದೇ ಕೃತಿಯನ್ನು ''ಸಾಧ್ಯವಾದಷ್ಟು ಮಟ್ಟಿಗೆ ಮೂಲರೂಪದಲ್ಲಿಯೇ ಪ್ರಕಟಿಸುವ ಅಗತ್ಯ'' ಇದೆ ಎಂಬುದು ನಿಜ. ಗ್ರಂಥ ಸಂಪಾದನೆಯ ಕೆಲಸವೇ ಅದು. ಡಾ.ಕುಲಕರ್ಣಿಯವರು ಮಹಿಪತಿರಾಯರ ಕೃತಿಗಳ ಪರಿಶುದ್ಧ ಆವೃತ್ತಿಯೊಂದನ್ನು ತರಲು ಪ್ರಯತ್ನಿಸಬೇಕೆಂದು ಈ ಸಂದರ್ಭ

ದಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ.

“ಹಲವಾರು ವಿದ್ವಾಂಸರು ತಮ್ಮ ತಮ್ಮ ಸಂಪ್ರದಾಯಗಳಂತೆ ತಾವು ನಂಬಿದ ಶ್ರದ್ಧೆಯ ಬೆಳಕಿನಲ್ಲಿ ಮಹಿಪತಿರಾಯರಂಥ ಮಹಾತ್ಮರ, ಯೋಗಿಗಳ ತಮಗೆ ಅನುಕೂಲವಾಗುವಂಥ ಕೆಲವು ಕೃತಿಗಳನ್ನು ಆಯ್ದುಕೊಂಡು ಅರ್ಥೈಸಲು ಪ್ರಯತ್ನಿಸಿದ್ದಾರೆ. ಅದು ಅವರವರು ಕಂಡುಕೊಂಡ ದೃಷ್ಟಿ. ಅದಕ್ಕೆ ಅವರು ಸ್ವತಂತ್ರರು. ಆದರೆ ಅದುವೆ ನಿರ್ಣಾಯವಾಗಲಾರದು. (ಪು. ೧೩೫) ಎಂಬುದಾಗಿ ಡಾ. ಕುಲಕರ್ಣಿಯವರು ಸರಿಯಾಗಿಯೇ ಹೇಳುತ್ತಾರೆ. ಇದಕ್ಕೆ ಯಾರೂ ಹೊರತಲ್ಲ. ಪ್ರತಿಯೊಬ್ಬರೂ ತಮ್ಮ ಅನುಭವ, ಅಧ್ಯಯನ, ಪ್ರತಿಭೆಗಳ ಆಳತೆಗೆ ಅನುಗುಣವಾಗಿ ತಮ್ಮ ಕೆಲಸ ಮಾಡುತ್ತಾರೆ. ಅದಕ್ಕೆ ಕೊನೆಯಿಲ್ಲ. ಮಹಿಪತಿರಾಯರ ಕೃತಿಗಳನ್ನು ಅವಲೋಕಿಸುವ ಸಂದರ್ಭದಲ್ಲಿ ಡಾ.ಕುಲಕರ್ಣಿಯವರು ಆ ಕೃತಿಗಳನ್ನು ಚೆನ್ನಾಗಿಯೇ ಕೆದಕಿದ್ದಾರೆ. ಕ್ಲಿಷ್ಟ ಆಧ್ಯಾತ್ಮಿಕ ಅನುಭವಗಳನ್ನು ಮಹಿಪತಿರಾಯರು ಹೇಗೆ ನಿರೂಪಿಸಿದ್ದಾರೆಂಬುದನ್ನು ಪರಿಣಾಮಕಾರಿಯಾಗಿ ಹೇಳಿದ್ದಾರೆ. “ಬ್ರಹ್ಮ ಸಾಕ್ಷಾತ್ಕಾರವು ಅನಿರ್ವಚನೀಯವಾದುದು. ಮಾತಿಗೆ ಮೀರಿದ್ದು. ಮನಸ್ಸಿನ ಆಚೆಯದು. ಅನುಭವವು ಅನುಭವವೇ ಹೊರತು ಹೇಳಲು ಬಾರದು. ಇಂಥ ಅನುಭವಗಳನ್ನೂ ಶಬ್ದಗಳಲ್ಲಿ ಹಿಡಿದಿಟ್ಟ ಶ್ರೇಯಸ್ಸು ರಾಯರದು” (ಪು.೧೯೧) ಎಂಬ ಮಾತು ಸರಿಯೆ. ಆದರೆ ಅದು ರಾಯರಿಗಷ್ಟೇ ಮೀಸಲಾದ ಶ್ರೇಯಸ್ಸಲ್ಲ. ಎಲ್ಲ ಅನುಭಾವಿಗಳಿಗೂ ಇದು ಸಮನಾಗಿ ಅನ್ವಯವಾಗುತ್ತದೆ ಎಂಬುದು ನಮ್ಮ ನೆನಪಿನಲ್ಲಿರಬೇಕು. “ದೊರೆತ ೬೮೫ ಕೃತಿಗಳಲ್ಲಿ ಅರ್ಧದಷ್ಟು ಕೃತಿಗಳು ಅನುಭವ-ಸ್ವಾನುಭವದ ಉಪದೇಶದವುಗಳಾಗಿವೆ. ಉಳಿದರ್ಧದಲ್ಲಿ ಹರಿ-ಗುರು ಮಹಿಮೆಗಳು, ಅಲ್ಲಿಯೂ ಗುರುಮಹಿಮೆಗೆ ಹೆಚ್ಚಿನ ಪ್ರಾಶಸ್ತ್ಯವಿದೆ. ಗುರುಮಹಿಮೆಯನ್ನು ಹೇಳುವಾಗಲೂ, ಅವರ ಅನುಗ್ರಹದಿಂದ ಪಡೆದ ಬ್ರಹ್ಮ ಸಾಕ್ಷಾತ್ಕಾರದ ಅನುಭವಕ್ಕೆ ಹೆಚ್ಚಿನ ಕೃತಿಗಳು ಮೀಸಲು. ಹೀಗಾಗಿ ಪುನರುಕ್ತಿ ಕಂಡು ಬರುವದು ಸಹಜವಾಗಿದೆ. ಆದರೆ ಅಭಿವ್ಯಕ್ತಿಯಲ್ಲಿ ವೈವಿಧ್ಯತೆಯಿದೆ” ಎಂಬ ಮಾತುಗಳಲ್ಲಿ (ಪು. ೧೯೨) ಸ್ಥೂಲವಾದ ಆದರೆ ಸರಿಯಾದ ಮೌಲ್ಯಮಾಪನವಿದೆ. “ಮಹಿಪತಿರಾಯರು ಶಬ್ದ ಸಾಮ್ರಾಟರು. ಅವರ ಶಬ್ದ ಸಂಗ್ರಹ ಅನುಪಮವಾದುದಾಗಿದೆ. ಆ ಶಬ್ದಗಳ ಸರಿ ಉಪಯೋಗ ಕೃತಿಗಳಿಗೆ ನಾದ ಮಾಧುರ್ಯವನ್ನು ಒದಗಿಸಿದೆ. ಪ್ರಾಸ, ಅನುಪ್ರಾಸ, ಯಮಕಾದಿ ಶಬ್ದಾಲಂಕಾರಗಳು, ಮುಕ್ತಪದಗ್ರಾಸಾಲಂಕಾರ, ಅರ್ಥಾನುಕಾರಿ ನಾದವುಳ್ಳ ಶಬ್ದಗಳ ಬಳಕೆ ಸಹಜವಾಗಿ ಹೊರಹೊಮ್ಮಿ ಅವರ ಕೃತಿಗಳ ನಾದಮಾಧುರ್ಯವನ್ನು ಹೆಚ್ಚಿಸಿವೆ” ಎಂಬುದೂ (ಪು.೧೯೮-೯) ಸಹಜವಾದ ಮೆಚ್ಚುಗೆಯೇ ಆಗಿದೆ.

ರಾಜಕೀಯ ಅವ್ಯವಸ್ಥೆ, ಸಾಮಾಜಿಕ ಅವನತಿ, ಧಾರ್ಮಿಕ ಅಸ್ಥಿರತೆಗಳು ತುಂಬಿದ್ದ ಕಾಲದಲ್ಲಿ ಮಹಿಪತಿರಾಯರು ಬಂದರು. ಕೃತಿ ರಚನೆ ಮಾಡಿದರು. ಆ ಕೃತಿಗಳ ಮೂಲಕ ದಿಕ್ಕುಗೆಟ್ಟಿದ್ದ ಸಮಾಜಕ್ಕೆ ಆಸೆ, ಧೈರ್ಯ, ಭರವಸೆಗಳನ್ನು ತಂದರು. ಮೇಲಾಗಿ ಹೃದಯದ ಹಣತೆಗಳನ್ನು ಹೊತ್ತಿಸಿ ಮಾನವೀಯತೆಯ ಬೆಳಕು ಚೆಲ್ಲಿದರು. ಇಂಥ ಸಂತರೊಬ್ಬರ ಜೀವನ ಸಾಧನೆಗಳನ್ನು ಅಧ್ಯಯನದ ವಿಷಯವನ್ನಾಗಿ ಆಯ್ದುಕೊಂಡು ಡಾ.ಕೃಷ್ಣ ಕೊಲ್ಹಾರ ಕುಲಕರ್ಣಿಯವರು ಒಂದು ಒಳ್ಳೆಯ ಕೆಲಸ ಮಾಡಿದ್ದಾರೆ. ತೌಲನಿಕವಾಗಿ ನಿರ್ಲಕ್ಷಿತರಾಗಿದ್ದ ದಾಸರೊಬ್ಬರನ್ನು ಕುರಿತು ಮೊದಲನೆಯ ಅಧಿಕೃತ ಗ್ರಂಥವನ್ನು ಪ್ರಕಟಿಸಿದ್ದಾರೆ. ನನಗೆ ಕಂಡ

ಕೆಲವು ಸಣ್ಣ ಪುಟ್ಟ ಕೊರತೆಗಳಿಂದ ಗ್ರಂಥದ ಮಹತ್ವಕ್ಕಾಗಲೀ, ಉಪಯುಕ್ತತೆಗಾಗಲೀ ಯಾವುದೇ ಬಗೆಯ ಕುಂದೂ ಇಲ್ಲ. ಡಾ.ಕುಲಕರ್ಣಿಯವರು ಯಾವ ಬಗೆಯ ತಲ್ಲೀನತೆ, ಆಸಕ್ತಿ, ಪ್ರೀತಿಗಳಿಂದ ಈ ಕೆಲಸ ಮಾಡಿದ್ದಾರೆಂಬುದನ್ನು ನಾನುಬಲ್ಲೆ. ಅದಕ್ಕೆ ಅನುಗುಣವಾದ ಪ್ರತಿಫಲ ಅವರಿಗೆ ದೊರೆಯಲೆಂದು ಹಾರೈಸುತ್ತೇನೆ. ಅವರ ಊರು ಕೊಲ್ಹಾರದ ಮುಖಾಂತರ ನಾನು ಅನೇಕ ಸಲ ಪ್ರಯಾಣ ಮಾಡಿದ್ದೇನೆ. ಅಲ್ಲಿನ ಸೊಗಸಾದ ಮೊಸರು ಅವಲಕ್ಕಿ ತಿಂದು ಆನಂದಿಸಿದ್ದೇನೆ. ಅವರ ಪ್ರಸ್ತುತ ಸಂಶೋಧನೆ ಬೌದ್ಧಿಕವಾಗಿ ಆ ಮೊಸರು ಅವಲಕ್ಕಿಗಳಿಗೆ ಸಮನಾದದ್ದು. ಅವರಿಗೆ ಎಲ್ಲ ಶುಭಗಳೂ ಒದಗಿ ಬರಲೆಂದು ಹೃದಯಪೂರ್ವಕ ಹಾರೈಸುತ್ತೇನೆ.

- ಹಾ.ಮಾ.ನಾಯಕ

''ಗೋಧೂಳಿ''

ಜಯಲಕ್ಷ್ಮೀಪುರಂ,
ಮೈಸೂರು - ೫೭೦ ೦೧೨.
ಜುಲೈ ೨೫, ೧೯೮೯

# ಅಂತರಂಗ

ಸುಮಾರು ಇಪ್ಪತ್ತೈದು ವರುಷಗಳಷ್ಟು ಹಿಂದೆ, ಕಾಖಂಡಕಿಯ ಶ್ರೀ ಮಹಿಪತಿರಾಯರ ಕುರಿತು ಒಂದು ಚಿಕ್ಕ ಲೇಖನದೊಂದಿಗೆ (ಕರ್ಮವೀರ ೧೧-೧೧-೧೯೬೫) ನನ್ನ ಬರವಣಿಗೆಯನ್ನು ಪ್ರಾರಂಭಿಸಿದಾಗ ಮುಂದೆ ಒಂದು ದಿನ ಈ ವಿಷಯದಲ್ಲಿ ಪಿಎಚ್.ಡಿ ಪ್ರಬಂಧವನ್ನು ಬರೆಯಬಹುದೆಂಬ ಕಲ್ಪನೆ ನನ್ನಲ್ಲಿಇರಲಿಲ್ಲ. ಆದಾಗ ಎಸ್.ಎಸ್.ಸಿ. ಪಾಸಾಗಿ ಅಂಚೆ-ತಂತಿ ಇಲಾಖೆಯಲ್ಲಿ 'ತಾರ ಮಾಸ್ತರ' ನೆಂದು ನೌಕರಿ ಮಾಡುವ ನನಗೆ ಅದನ್ನು ಊಹಿಸುವುದೂ ಸಾಧ್ಯವಿರಲಿಲ್ಲ. ಆದರೆ ಈ ಮಧ್ಯದ ಸುಮಾರು ಕಾಲು ಶತಮಾನದಲ್ಲಿ ನನಗೆ ಅರಿವಿಲ್ಲದೆಯೇ ಬೆಳೆದು ಬಂದ ಬರವಣಿಗೆಯ ಹುಚ್ಚು. ಜೊತೆಗೆ ಇತಿಹಾಸ - ಸಂಶೋಧನೆಗಳಲ್ಲಿ ಒಲವು ಈ ಘಟ್ಟಕ್ಕೆ ತಂದು ನಿಲ್ಲಿಸಿದೆ. ಈ ಅವಧಿಯಲ್ಲಿ ನಾನು ತಂತಿ ಇಲಾಖೆಯನ್ನು ಬಿಡಲಿಲ್ಲ. ನನ್ನನ್ನು ಬರವಣಿಗೆ ಬಿಡಲಿಲ್ಲ.

ನೌಕರಿಯ ಪ್ರಾರಂಭದ ದಿನಗಳಲ್ಲಿ ಮುಂಬಯಿಯಲ್ಲಿದ್ದಾಗ (೧೯೬೦-೧೯೭೧) ಹುಟ್ಟಿಕೊಂಡ ಪ್ರಾದೇಶಿಕ ಅಭಿಮಾನ, ಅದರೊಂದಿಗೆ ಒಂದಿಷ್ಟು ಭಾವುಕತನ, ನನ್ನ ಊರು, ನನ್ನ ಜಿಲ್ಲೆಗಳ ಕುರಿತಾದ ಅಭಿಮಾನ ಅಂತರಂಗವನ್ನು ಹಸಿಯಾಗಿಸಿತು. ನನ್ನ ಊರ ಹತ್ತಿರದ ಹಳ್ಳಿ ಕಾಖಂಡಕಿ ಅಲ್ಲಿಯ ಮಹಿಪತಿರಾಯರ ಕುರಿತು ನಾಡಿನ ಖ್ಯಾತ ತತ್ವಜ್ಞಾನಿ ಡಾ. ಆರ್.ಡಿ. ರಾನಡೆ ಅವರು ಬರೆಯುತ್ತ 'ಅವರೊಬ್ಬ ವಿಶ್ವದ ಶ್ರೇಷ್ಠ ಅನುಭಾವ ಕವಿ' ಎಂದು ಉದ್ಗರಿಸಿದಾಗ ಎದೆ ಉಬ್ಬಿತು. ಅವರ ಬಗ್ಗೆ ತಿಳಿದುಕೊಳ್ಳಬೇಕು ಅನಿಸಿತು. ಅವರನ್ನು ತಿಳಿದುಕೊಳ್ಳಲು ಹೊರಟ ದಾರಿಯಲ್ಲಿ ವಿಜಾಪುರದ ಅಪೂರ್ವ ಇತಿಹಾಸ ಸಿಕ್ಕಿತು. ಈ ವಿಷಯಗಳಲ್ಲಿ ಇನ್ನುವರೆಗೆ ಯಾರೂ ಹೇಳಿಕೊಳ್ಳುವಂಥ ಕೆಲಸ ಮಾಡಿಲ್ಲ ಎಂದು ತಿಳಿದಾಗ ಒಂದು ರೀತಿಯ ಹುಮ್ಮಸ್ಸು ಬಂದಿತು. ಆದರೆ ಏನಿದ್ದರೂ ಎಸ್.ಎಸ್.ಸಿ.ಯ ನಾನು ಬರೆವುದು ಚಿಕ್ಕ ಪುಟ್ಟ ಲೇಖನಗಳಿಗಷ್ಟೆ ಸೀಮಿತವಾಯಿತು. ವಿಜಾಪುರದ ಕುರಿತು, ಮಹಿಪತಿರಾಯರ ಕುರಿತು ಅಲ್ಲಿ -ಇಲ್ಲಿ ಬಿಡಿ ಲೇಖನಗಳನ್ನು, ಕಾಲ ವಿಚಾರ ಇತ್ಯಾದಿಯಾಗಿ ಬರೆದು ಪತ್ರಿಕೆಗಳಲ್ಲಿ ನಿಯತಕಾಲಿಕೆಗಳಲ್ಲಿ ಪ್ರಕಟಿಸಿದೆ. ಆಗಲೂ ನನಗೆ ಈ ಪಿಎಚ್.ಡಿಯ ಕಲ್ಪನೆ ಇರಲಿಲ್ಲ!

ಮುಂಬಯಿಯಿಂದ ಬೆಳಗಾವಿ, ರಾಯಚೂರುಗಳನ್ನು ತಿರುಗಿ ೧೯೮೨ ರಲ್ಲಿ ಮೈಸೂರಿಗೆ ಬಂದೆ. ಅಲ್ಲಿಯ ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣ ಸಂಸ್ಥೆಯಿಂದ ನೇರವಾಗಿ ಎಂ.ಎ. ಮಾಡಬಹುದು ಎಂದಾಗ ಒಂದು 'ಕೈ' ನೋಡಬೇಕು ಅನಿಸಿತು. ಹಳೆಯ ಎಸ್.ಎಸ್.ಸಿ. (೧೯೫೭) ಪ್ರಮಾಣ ಪತ್ರವನ್ನು ತೆಗೆದು ಧೂಳು ಜಾಡಿಸಿ ಕಳಿಸಿದೆ. ಮುಂದಿನ ಎರಡು ವರುಷಗಳಲ್ಲಿ ನಾನು ಎಂ.ಎ. ಪದವೀಧರನಾಗುವ ಹೊತ್ತಿಗೆ ನನಗೆ ವಿಜಾಪುರಕ್ಕೆ ಬದಲಿಯಾಯಿತು. ಅಭ್ಯಾಸದ ಕುರಿತು ಒಂದಿಷ್ಟು ಧೈರ್ಯ ಬಂದಿತು. ಅನಾಯಾಸವಾಗಿ ವಿಜಾಪುರಕ್ಕೆ ಬಂದಾಗ ಹತ್ತಿರದ ಮಹಿಪತಿರಾಯರ ಕುರಿತು ಪಿಎಚ್.ಡಿ ಏಕೆ ಮಾಡಬಾರದು ಅನಿಸಿತು. ಸರಿ, ಸಮೀಪದ ಕಲಬುರ್ಗಿಗೆ ಹೋಗಿ ಹೆಸರು

ನೊಂದಾಯಿಸಿದೆ. ಮತ್ತೆ ಎರಡು ವರುಷಗಳಲ್ಲಿ ಪ್ರಬಂಧವನ್ನು ಸಿದ್ಧಪಡಿಸಿ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದೆ. (೧೯೮೭) ಅವರು ಅದನ್ನು ಮನ್ನಿಸಿ ಪಿಎಚ್.ಡಿ ಪದವಿಯನ್ನಿತ್ತರು. ಪದವಿಗೆ ನಾನು ಸಾದರಪಡಿಸಿದ ಪ್ರಬಂಧ 'ಶ್ರೀಮಹಿಪತಿರಾಯರ ಕೃತಿಗಳು- ಒಂದು ಅಧ್ಯಯನ' ಅದರ ಆಧಾರದ ಮೇಲೆ - ಚರಿತ್ರೆಗೆ ಒಂದಿಷ್ಟು ಒತ್ತುಕೊಟ್ಟು ರಚಿಸಿದ 'ಕಾಖಂಡಕಿ ಶ್ರೀಮಹಿಪತಿರಾಯರು ಇದೀಗ ಪುಸ್ತಕ ರೂಪದಲ್ಲಿ ಹೊರಬರುತ್ತಿದೆ. ಪಿಎಚ್.ಡಿ ಪದವಿ ನೀಡಿದ ಗುಲಬರ್ಗಾವಿಶ್ವವಿದ್ಯಾಲಯಕ್ಕೆ ನಾನು ಋಣಿ.

ಹೌದು ಈ ನಡೆದು ಬಂದ ದಾರಿಯನ್ನು ಈಗ ದಾಖಲಿಸಲು ತುಂಬ ಸುಲಭವೆನಿಸುತ್ತದೆ. ಆದರೆ ನಡೆದ ದಾರಿ ತುಂಬ ಕಷ್ಟದ್ದು. ಅದನ್ನು ಹಗುರುಗೊಳಿಸಿದ ಮಹನೀಯರ ಒಂದು ದೊಡ್ಡ ಪಟ್ಟಿಯೇ ಆಗುತ್ತದೆ. ಅದನ್ನು ಎಲ್ಲಿಂದ ಪ್ರಾರಂಭಿಸಬೇಕು? ಯಾವುದನ್ನು ಹೇಳಬೇಕು?

ಅಪರಿಚಿತನಾದ ನನ್ನನ್ನು ವಿಶ್ವಾಸದಿಂದ ಬರಮಾಡಿಕೊಂಡು, ತಮ್ಮ ಸಹೋದರನಂತೆ ಕರೆದು ಮಾರ್ಗದರ್ಶನ ಮಾಡಲು ಮುಂದೆ ಬಂದವರು ಕಲಬುರ್ಗಿಯ ಡಾ. ಕೃಷ್ಣಮೂರ್ತಿ ಕಿತ್ತೂರರು. ವಾರಗಟ್ಟಲೆ ತಮ್ಮ ಮನೆಯಲ್ಲಿಯೇ ಉಳಿಸಿಕೊಂಡು ಪ್ರಬಂಧದ ಪ್ರತಿ ಅಕ್ಷರವನ್ನು ಪರಿಶೀಲಿಸಿ ಮಾರ್ಗದರ್ಶನ ಮಾಡಿದರು. ಆದರೆ ಹೆಸರು ನೊಂದಾಯಿಸಿದಾಗ, ಮಾರ್ಗದರ್ಶಿಗಳನ್ನು ಗೊತ್ತುಪಡಿಸಿಕೊಂಡಾಗ ಮಾರ್ಗವೇ ಇರಲಿಲ್ಲ! ದಾರಿಗೆ ಬಂದ ಮೇಲೆ ತಾನೆ, ದಾರಿದರ್ಶನ. ಆ ದಾರಿಗೆ ಹಚ್ಚಿದವರು ಮಹಿಪತಿರಾಯರ ಮನೆತನದವರಾದ ವಿಜಾಪುರದ ಕೀರ್ತನ ಕೇಸರಿ ಶ್ರೀ ದೇವಪ್ಪಯ್ಯ ಕಾಖಂಡಕಿ ಅವರು. ತಮ್ಮಲ್ಲಿದ್ದ ಒಂದು ತುಂಡು ಕಾಗದ ಮೊದಲು ಮಾಡಿಕೊಂಡು ಎಲ್ಲ ಸಾಹಿತ್ಯವನ್ನೂ ಒದಗಿಸಿದರು. ಕೇಳಿದಾಗಲೆಲ್ಲ ಬೇಸರಿಸದೆ ಹೇಳಿದರು. ಆದರಂತೆ ಸಿಂದಗಿಗೆ ಹೋದಾಗ ಅಲ್ಲಿಯ ಶ್ರೀ ಕೇಶವರಾವ ಬಿಂದೂರಾವ ಕುಲಕರ್ಣಿ ಅವರು ತಮ್ಮಲ್ಲಿಯ ಸಾಮಗ್ರಿಯನ್ನು ಉದಾರವಾಗಿ ನೀಡಿದರಲ್ಲದೆ ತಮ್ಮ ಕಕ್ಕಂದಿರಾದ ಶ್ರೀ ಧೊಂಡೋ ಪಂತರಿಂದ ಆದಿಲಶಾಹಿ ಕಾಲದ ಕಾಗದ ಪತ್ರಗಳನ್ನು ದೊರಕಿಸಿಕೊಟ್ಟರು. ವರುಷಗಟ್ಟಲೆ ತಮ್ಮ ಹಸ್ತಪ್ರತಿಗಳನ್ನು, ಕಾಗದ ಪತ್ರಗಳನ್ನು ನನ್ನಲ್ಲಿಯೇ ಉಳಿಸಿಕೊಳ್ಳಲು ಈ ಮಹನೀಯರು ಅನುಮತಿ ನೀಡಿದರು.

ಅಪೂರ್ವವಾದ ಕಚ್ಚಾ ಸಾಮಗ್ರಿ ದೊರೆಯಿತು. ಅಷ್ಟಕ್ಕೆ ನಿಲ್ಲಲಿಲ್ಲ. ಐತಿಹಾಸಿಕ ದಾಖಲೆಗಳನ್ನು ಹುಡುಕಬೇಕಲ್ಲ. ವಿಜಾಪುರದ ಮಧ್ಯಯುಗೀನ ಕಾಲದ ಬಹುತೇಕ ದಾಖಲೆಗಳು ಇರುವುದು ಪುಣೆಯ ಭಾರತ ಇತಿಹಾಸ ಸಂಶೋಧನ ಮಂಡಲದಲ್ಲಿ ಹಾಗು ಪುರಾತತ್ವ ಇಲಾಖೆಯಲ್ಲಿ. ಅಲ್ಲಿ ಸುಲಭ ಪ್ರವೇಶ ದೊರಕಿಸಿದವರು, ಪುಣೆಯ ಗೋಖಲೆ ಅರ್ಥ ಹಾಗು ರಾಜ್ಯಶಾಸ್ತ್ರ ಸಂಸ್ಥೆಯಲ್ಲಿ ಸಹಾಯಕ ಸಂಶೋಧಕರಾದ ಅಥಣಿಯ ಶ್ರೀ ಅನಂತ ರಾ. ಕುಲಕರ್ಣಿ ಅವರು. ನಾಲ್ಕಾರುದಿನ ಪುಣೆಯಲ್ಲಿ ನನ್ನ ಜೊತೆ ತಿರುಗಿದರಲ್ಲದೆ,

ಬೇಕೆಂದಾಗ ಬೇಡಿದ್ದನ್ನು ಜೆರಾಕ್ಸ ಮಾಡಿಸಿ ವಿಜಾಪುರಕ್ಕೆ ಕಳಿಸಿದರು. ತಮ್ಮಲ್ಲಿದ್ದ ಮರಾಠಿಯ ಅಪೂರ್ಣ ಚರಿತ್ರೆಯನ್ನು ನಕಲು ಮಾಡಿಕೊಟ್ಟರು. ಕೆಲವು ಮಿಶ್ರಭಾಷಾ ಕೃತಿಗಳನ್ನು ಒದಗಿಸಿದರು.

ಇನ್ನು ಪ್ರಬಂಧವನ್ನು ಬರೆಯುವಾಗ ಸಲಹೆ ಸೂಚನೆಗಳನ್ನಿತ್ತು, ಎಲ್ಲಿಗೆ ಬಂತು? ಎಂದು ಕೇಳುತ್ತ ಬೆನ್ನು ಚಪ್ಪರಿಸಿದವರು, ಬರೆದಾದ ಮೇಲೆ ವಿಶ್ವವಿದ್ಯಾಲಯಕ್ಕೆ ಪ್ರಬಂಧವನ್ನು ಸಾದರ ಪಡಿಸುವಲ್ಲಿ, ಅನಂತರ ಇಂದಿನ ಪ್ರಕಟನೆಯವರೆಗೆ ಅನೇಕ ವಿಧವಾಗಿ ಸಹಾಯ ಸಹಕಾರಗಳನ್ನು ನೀಡಿದವರು ಮತ್ತೆ ಹಲವರು. ಅವರಲ್ಲಿ ನನ್ನ ಮಾವ, ಕನ್ನಡ ಸಂಸ್ಕೃತ ವಿದ್ವಾಂಸರಾದ ಶ್ರೀ ರಾ.ಹ. ದಿವಾಣಜಿ. ಶ್ರೀ ಕೃಷ್ಣರಾವ ಸತ್ತೂರ, ಡಾ. ಸುಮಂತ ನ. ಗುಮಾಸ್ತೆ, ಶ್ರೀ ಪ್ರಕಾಶ ಮಲ್ಹಾರರಾವ ಸೋಲಾಪುರಕರ, ಡಾ. ಎಂ.ಎಂ. ಜೋಶಿ, ಶ್ರೀ ಬಿ.ವ್ಹಿ.ಕುಲಕರ್ಣಿ, ಶ್ರೀ ಎಂ.ಆರ್. ದೇಶಪಾಂಡೆ, ಶ್ರೀ ಆರ್.ಜಿ. ಹರಿದಾಸ, ಶ್ರೀ ಎಚ್.ಎನ್. ಕುಲಕರ್ಣಿ, ಶ್ರೀ ಆದ್ಯ ರಾಮಾಚಾರ್ಯರು ಮತ್ತು ಹಲವರು. ಇವರೊಂದಿಗೆ ನನ್ನ ತಂತಿ ಇಲಾಖೆಯ ಕರ್ನಾಟಕಾದ್ಯಂತದ ಸಹೋದ್ಯೋಗಿಗಳು ಮತ್ತು ಅಸಂಖ್ಯ ಸ್ನೇಹಿತರನ್ನು ನಾನು ನೆನೆಯಬೇಕು.

ಹೀಗೆ ಹಲವಾರು ಜನರ ಸಹಾಯ -ಸಹಕಾರಗಳಿಂದ ರೂಪುಗೊಂಡ ಪ್ರಬಂಧ ಇದು. ಇಷ್ಟಕ್ಕೂ ಕಾರಣ ಕರ್ತರಾಗಿ ನಿಂತವರು ಇನ್ನಿಬ್ಬರು. ಅವರ ಹೆಸರನ್ನು ಉದ್ದೇಶಪೂರ್ವಕವಾಗಿ ಈವರೆಗೆ ಹೇಳಲಿಲ್ಲ. ಅವರಲ್ಲಿ ಒಬ್ಬರು ನನ್ನ ಬಾಲ್ಯ ಸ್ನೇಹಿತ ಶ್ರೀ ಪಿ.ಎನ್. ಕುಲಕರ್ಣಿ ಇನ್ನೊಬ್ಬರು ಡಾ. ಶ್ರೀನಿವಾಸ ಹಾವನೂರರು.

ಮೂರು ದಶಕಗಳ ಹಿಂದೆ ನನಗೆ ಸಾಹಿತ್ಯದ ಹುಚ್ಚು ಹಿಡಿಸಿದವನೇ ಪಿ.ಎನ್. ಕುಲಕರ್ಣಿ. ತಾನೊಬ್ಬ ಅಪರೂಪದ ಕವಿಯಾಗಿ, ತಾನು ಶ್ರೀ ಅರವಿಂದರ ಯೋಗ ಸಾಧನೆಯಲ್ಲಿ ನಿರತನಾಗಿ ನನ್ನನ್ನು ಪುಸ್ತಕ ಓದಲು ಬಿಟ್ಟ. ಈ ಪ್ರಬಂಧದಲ್ಲಿ ಆಧ್ಯಾತ್ಮ, ಯೋಗ ಹಾಗು ಅನುಭಾವಗಳ ಕುರಿತು ಕಿಂಚಿತ್ ಬರೆಯಲು ನನಗೆ ಸಾಧ್ಯವಾಗಿದ್ದರೆ ಅದು ಅವನ ಪ್ರೇರಣೆಯಿಂದ ಹಾಗು ಅವನೊಂದಿಗಿನ ಸತತ ಚರ್ಚೆಯಿಂದ.

ಇನ್ನು ಡಾ. ಶ್ರೀನಿವಾಸ ಹಾವನೂರರ ಕುರಿತು ಏನು ಹೇಳಬೇಕು- ಏನು ಹೇಳಬಾರದು? ತಾರಮಾಸ್ತರ ಕೆ.ಎಚ್. ಕುಲಕರ್ಣಿಯನ್ನು ಡಾ. ಕೃಷ್ಣ ಕೊಲ್ಹಾರಕುಲಕರ್ಣಿ ಎಂದು ರೂಪಿಸಿದವರು ಅವರು. ಈ ಮಣ್ಣು ಮುದ್ದೆಯಲ್ಲಿ ಕೆಸರು ಉಳಿದಿದ್ದರೆ ನನ್ನದು. ಕುಸುರು ಅವರದು. ಯಾವ ಜನ್ಮದ ಋಣಾನುಬಂಧವೋ ಏನೋ, ಗುರುವಾಗಿ, ಹಿರಿಯಣ್ಣನಾಗಿ, ಸ್ನೇಹಿತರಾಗಿ ನಿಂತು ಹೆಜ್ಜೆ-ಹೆಜ್ಜೆಗೂ ಕೈ-ಹಿಡಿದು ನಡೆಸಿಕೊಂಡು ಬಂದವರು. ಪ್ರಾರಂಭದ ಬರವಣಿಗೆಯ ದಿನಗಳಲ್ಲಿ ಒತ್ತಕ್ಷರ ದೀರ್ಘಗಳನ್ನು

ತಿದ್ದುವುದಲ್ಲದೆ, ಬರವಣಿಗೆ ಅಂದರೆ ಏನು? ಅಭ್ಯಾಸ ಹೇಗೆ ಮಾಡಬೇಕು ಎಂದು ತಿಳಿಸುತ್ತ ಅವಕಾಶ ದೊರೆತಾಗಲೆಲ್ಲ ಮುಂದೆ ಕರೆದುಕೊಂಡು ನಿಲ್ಲಿಸಿದವರು. ಮುಂಬಯಿಯಲ್ಲಿ ಅವರೊಂದಿಗೆ ಕಳೆದ ಒಂದು ದಶಕ, ಆಮೇಲೆ ದೂರ ಇದ್ದುಕೊಂಡು ಕಳೆದ ಎರಡು ದಶಕಗಳಲ್ಲಿ ಯಾವುದು ಹೆಚ್ಚು ಉಪಯುಕ್ತ ಎಂಬುದನ್ನು ಆ ದಶಕಗಳೇ ಹೇಳಬೇಕು. ಮೈಸೂರಿಗೆ ಬಂದು ನಾನು ಹಾಜರಾಗುವ ಮೊದಲೇ ಮಂಗಳೂರಿನಲ್ಲಿದ್ದ ಅವರು ನನ್ನ ಎಂ.ಎ. ಅರ್ಜಿಯನ್ನು ತುಂಬಿ ಇಟ್ಟಿದ್ದರು. ವಿಜಾಪುರಕ್ಕೆ ಬರುವ ಮೊದಲೇ ತಮ್ಮ ಸ್ನೇಹಿತರಾದ ಡಾ. ಕಿತ್ತೂರರಿಗೆ ಪತ್ರ ಬರೆದು ಪಿಎಚ್.ಡಿ.ಗೆ ರಜಿಸ್ಟರ ಮಾಡಲು ಹೇಳಿದ್ದರು. ನನ್ನದು ಕೇವಲ 'ಅರ್ಜುನ ವೃತ್ತಿ'! ಅಂತೆಯೇ ಈ ಪ್ರಬಂಧ ಅವರಿಗೆ ಅರ್ಪಿತ. ಅರವತ್ತರ ಹೊಸ್ತಿಲಲ್ಲಿ ನಿಂತ, ವೃತ್ತಿಯಿಂದ ನಿವೃತ್ತರಾದ ಹಿರಿಯಣ್ಣನಿಗೆ ಕಿರಿಯನ ಕಾಣಿಕೆ.

ಇನ್ನು ಖಾಸಗಿಯಾಗಿ ನನ್ನ ಬೆಳವಣಿಗೆಗೆ ಬೆನ್ನೆಲುಬಾಗಿ ನಿಂತವಳು ನನ್ನ ಹೆಂಡತಿ ಸೌ. ವಿಜಯಾ. ವಿಶೇಷತ: ಪ್ರಬಂಧವನ್ನು ಸಿದ್ಧಪಡಿಸುವಾಗಿನ ಅವಳ ಶ್ರದ್ಧೆ ಅನುಪಮವಾದದ್ದು.

ಹೀಗೆ ರೂಪುಗೊಂಡ ಈ ಪ್ರಬಂಧವನ್ನು ಪ್ರಕಟನೆಗೆ ಅಳವಡಿಸುವಾಗ ನನ್ನ ಮೇಲಿನ ಪ್ರೀತಿ ವಿಶ್ವಾಸಗಳಿಂದ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಡಲು ಒಪ್ಪಿದವರು ಡಾ.ಹಾ.ಮಾ. ನಾಯಕ ಅವರು. ನಾನು ಪತ್ರ ಬರೆದು ಕೇಳಿದಾಗ, ತಕ್ಷಣ ಉತ್ತರ ಬರೆದು 'ಇದೊಂದು ಗೌರವವೆಂದೇ ನನ್ನ ಭಾವನೆ. ಅವಶ್ಯವಾಗಿ ನಾಲ್ಕು ಮಾತು ಬರೆದುಕೊಡುತ್ತೇನೆ' ಎಂದು ಹೇಳಿದ್ದು ಅವರ ದೊಡ್ಡ ಗುಣ. ಅವರಿಗೆ ನಮನ.

ರಾಜಕೀಯ ಅವ್ಯವಸ್ಥೆ ಸಾಮಾಜಿಕ ಅವನತಿ ಧಾರ್ಮಿಕ ಅಸ್ಥಿರತೆಗಳು ತುಂಬಿದ್ದ ಕಾಲದಲ್ಲಿ ಮಹಿಪತಿರಾಯರು ಬಂದು ತಮ್ಮ ಕೃತಿಗಳ ಮೂಲಕ ಹೃದಯದ ಹಣತೆಗಳನ್ನು ಹೊತ್ತಿಸಿ ಮಾನವೀಯತೆಯ ಬೆಳಕು ಚೆಲ್ಲಿದರು. ಪುಣೆಯ ಮರಾಠಿ-ಕನ್ನಡ ಸ್ನೇಹ ವರ್ಧನ ಕೇಂದ್ರವು ಅಂಶತಃ ಅದೇ ಕೆಲಸವನ್ನು ಮಾಡಲು ಹುಟ್ಟಿಕೊಂಡದ್ದು. ಅವರು ಈ ಕೃತಿಯನ್ನು ಪ್ರಕಟಿಸುತ್ತಿರುವುದು ನನಗೆ ಸಂತೋಷದ ವಿಷಯ. ಕೇಂದ್ರದ ಪದಾಧಿಕಾರಿಗ ಳಿಗೆ ನನ್ನ ಕೃತಜ್ಞತೆಗಳು.

ಪ್ರಕಟನೆಯ ಹಂತದಲ್ಲಿ ಕೆಲವರು ಪ್ರಕಟನಾಪೂರ್ವ ಬೆಲೆಯನ್ನು ನೀಡಿ ನೆರವಾಗಿದ್ದಾರೆ. ನನ್ನ ಗುರುಗಳಾದ ಶ್ರೀ ಲ.ಹ. ದೇಸಾಯಿ ಅವರು ಪದನಾಮಸೂಚಿಯನ್ನು ಸಿದ್ಧಪಡಿಸಿಕೊಟ್ಟರು. ಆತ್ಮೀಯ ಶ್ರೀ ಕೆ.ಬಿ. ಕುಲಕರ್ಣಿಯವರು ಮುಖಚಿತ್ರವನ್ನು ರಚಿಸಿಕೊಟ್ಟರು. ಇವರೆಲ್ಲರಿಗೆ ನನ್ನ ನಮನಗಳು.

ಮುದ್ರಣ ವಿಷಯದಲ್ಲಿ ಆಸ್ಥೆವಹಿಸಿ ಸುಂದರವಾಗಿ ಹೊರಬರುವಲ್ಲಿ ಕಾರಣರಾದ ಬೆಳಗಾವಿಯ ನನ್ನ ಸ್ನೇಹಿತರು ಸರ್ವಶ್ರೀ ಭೀಮಸೇನ ತೊರಗಲ್ಲ, ಶರದ ದೇಸಾಯಿ ಹಾಗೂ ರಾಘವೇಂದ್ರ ಜೋಶಿ ಅವರನ್ನು ಇಲ್ಲಿ ನೆನೆಯುತ್ತೇನೆ.

ಹೊಯ್ಸಳ ಕಾಲನಿ  
ವಿಜಾಪುರ ೫೮೬೧೦೩  
೧೩-೯-೧೯೮೯

ಕೃಷ್ಣ ಕೊಲ್ಹಾರಕುಲಕರ್ಣಿ

# ಪರಿವಿಡಿ

ಚಿತ್ರಗಳು

# ದಯವಿಟ್ಟು ಗಮನಿಸಿ

★ // // ಈ ಚಿಹ್ನೆಗಳ ಮಧ್ಯದ ಸಂಖ್ಯೆಗಳು ಅಡಿಟಿಪ್ಪಣಿಯ ಸಂಖ್ಯೆಗಳನ್ನು ತೋರಿಸುತ್ತವೆ.

★ ಅಡಿ ಟಿಪ್ಪಣಿಗಳನ್ನು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಕೊಡಲಾಗಿದೆ.

★ ಓದುವ ಮೊದಲು ಈ ಕೆಲವು ಮುಖ್ಯ ಮುದ್ರಣ ದೋಷಗಳನ್ನು ತಿದ್ದಿಕೊಂಡು ಓದಿ.

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೩ | ೧೩ | ಡಾ। ಕೆ.ಗೋಪಿನಾಥರ | ಡಾ। ಕೆ.ಗೋಕುಲನಾಥರ |
| ೩ | ೧೮ | ಡಾ। ಪಾ.ಶಂ.ಶ್ರೀನಿವಾಸ | ಡಾ। ಪಾ.ಶ.ಶ್ರೀನಿವಾಸ |
| ೩ | ೨೦ | ಪ್ರಕಟವಾಗಿವೆ. | ಪ್ರಕಟವಾಗಿದೆ. |
| ೧೧ | ೨೩ | ಸೆಟ್ಟ | ಸೆಟ್ಟ |
| ೧೩ | ೨೧ | ರದ್ದಿ | ಸಿದ್ದಿ |
| ೧೫ | ೨೩ | ಸೆಟ್ಟಿಕಥೆ | ಸೆಟ್ಟಕಥೆ |
| ೧೮ | ೪ | ೧೨ | ೧೭ |
| ೧೮ | ೧೦ | ಪಾರಾಂತರಕ್ಕೆ | ಪಾಠಾಂತರಕ್ಕೆ |
| ೩೨ | ೩೧ | ಕಿತಾಬ-ಇ-ಸೌರಸ | ಕಿತಾಬ-ಇ-ನೌರಸ |
| ೫೪ | ೧೮ | ಮರ್ಣಾಶ್ರಮ | ವರ್ಣಾಶ್ರಮ |
| ೫೫ | ೩೧ | ಅಸ್ಪೃಶ್ಯರ | ಅಸ್ಪೃಶ್ಯರ |
| ೬೨ | ೨೬ | ಅದರ ಅಣತಿಯಂತೆ | ಅವರ ಆಣತಿಯಂತೆ |
| ೮೦ | ೧೧ | ಬಾದಹರ | ಬಾದಶಹರ |
| ೮೨ | ೨೩ | ಕುಳತರು | ಕುಳಿತರು |
| ೯೧ | ೫ | ಶಾಸ್ತ್ರಾವನ್ನು | ಶಾಸ್ತ್ರವನ್ನು |
| ೧೧೨ | ೬ | ಅವಚ್ಛಿನ್ನವಾದ | ಅವಿಚ್ಛಿನ್ನವಾದ |
| ೧೧೪ | ೬ | ಸಂಬಂಧವಾಚರ | ಸಂಬಂಧವಾಚಕ |
| ೧೧೭ | ೨೯ | ಧೀರಕೃಷ್ಣೋಡೆಯ, ಚಿನ್ನಕೃಷ್ಣ | ಧೀರಕೃಷ್ಣೋಡೆಯ ಅಂಕಿತವನ್ನು ಒಳಗೊಂಡಿದೆ. ಗುರುಕೃಷ್ಣ, ಚಿನ್ನಕೃಷ್ಣ ಚಿನ್ನಕೃಷ್ಣೋಡೆಯ ಹಾಗೂ ಧೀರಕೃಷ್ಣೋಡೆಯ |
| ೧೩೧ | ೧೨ | ವಡಮೂಡಿ | ವಡಮಾಡಿ |
| ೧೮೪ | ೭ | ಮಸಿಪತಿ | ಮಹಿಪತಿ |
| ೨೦೫ | ೧೧ | ಬೆಳೆದು ಬಗೆಯನ್ನು | ಬೆಳೆದು ಬಂದ ಬಗೆಯನ್ನು |

# ಅಧ್ಯಾಯ ಒಂದು

## ಅಧ್ಯಯನದ ಹಿನ್ನೆಲೆ

ಹರಿದಾಸ ಸಾಹಿತ್ಯ ಚರಿತ್ರೆಯನ್ನು ಕುರಿತು ಈವರೆಗೆ ಅನೇಕ ಗ್ರಂಥಗಳು ಪ್ರಕಟವಾಗಿವೆ. ಹರಿದಾಸರ ಪದಗಳಂತೂ ಕಳೆದ ಶತಮಾನದ ಮಧ್ಯದಲ್ಲಿಯೇ ಪ್ರಕಟವಾಗಿವೆ. ಕ್ರಿ.ಶ. ೧೮೫೦ ರಲ್ಲಿ ಜರ್ಮನಿಯ ಹರ್ಮನ್ ಮೊಗ್ಲಿಂಗ್ ಎಂಬಾತನು ಹರಿದಾಸರ ಕೆಲವು ಹಾಡುಗಳನ್ನು ಸಂಗ್ರಹಿಸಿ 'ದಾಸರ ಪದಗಳು' ಎಂಬ ಹೆಸರಿನಿಂದ ಮಂಗಳೂರಿನಲ್ಲಿ ಛಾಪಿಸಿದ ಕಲ್ಲಚ್ಚಿನ ಪುಸ್ತಕವೆ ಪ್ರಕಟಿತ ಮೊಟ್ಟಮೊದಲ ಸಂಕಲನವೆಂದು ವಿದ್ವಾಂಸರು ಗುರುತಿಸಿದ್ದಾರೆ. ಅದನ್ನೆ ಮರುವರುಷ ಎಂದರೆ ೧೮೫೧ ರಲ್ಲಿ ಮೈಸೂರು ಸರಕಾರದ ವಿದ್ಯಾ ಇಲಾಖೆಯ ನಿರ್ದೇಶಕ ಜೆ. ಗ್ಯಾರೆಟ್ ಎಂಬಾತನು ಪುನಃ ಮುದ್ರಣ ಮಾಡಿರುವುದನ್ನು ಗಮನಿಸಿದರೆ ಮೊದಲ ಸಂಕಲನದ ಜನಪ್ರಿಯತೆಯ ಅರಿವಾಗುತ್ತದೆ.

ಅನಂತರ ಈ ಕ್ಷೇತ್ರದಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ದಾಸರ ಪದಗಳ ಪ್ರಕಟನೆಯ ಕೆಲಸವನ್ನು ಮುಂದುವರಿಸಿದರು. ಕ್ರಿ.ಶ. ೧೮೭೬ ರಲ್ಲಿ ಹಿಂದೂ ಭಾಷಾ ಸಂಜೀವಿನಿ ಮುದ್ರಣ ಶಾಲೆಯಲ್ಲಿ ಅಚ್ಚಾದ 'ಹರಿಭಜನೆ ಕೀರ್ತನೆ', ೧೮೯೦ ರಲ್ಲಿ ದೇವನಾಗರಿ ಲಿಪಿಯಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತರು ಪ್ರಕಟಿಸಿದ 'ದಾಸರ ಪದಗಳ ಸಂಗ್ರಹವು' ಎಂಬ ಕೃತಿಗಳು ಉಲ್ಲೇಖಾರ್ಹವಾಗಿವೆ. ಆ ದಶಕದಲ್ಲಿಯೇ ಮಡಕಶಿರಾ ಬಾಲಕೃಷ್ಣರಾಯರು ೧೮೯೪ ರಲ್ಲಿ 'ಪುರಂದರದಾಸರು ಪಾಡಿದ ಕೀರ್ತನಲು' ಹಾಗೂ ೧೮೯೫ ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕಗಳನ್ನು ತೆಲಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಈ ಮಹನೀಯರೇ ಇನ್ನೊಂದು ಸಂಕಲನವನ್ನು ಪ್ರಕಟಿಸಿದ್ದಾರೆ. ಮುಂದಿನ ದಿನಗಳಲ್ಲಿ ಬೆಂಗಳೂರು, ಉಡುಪಿ, ಧಾರವಾಡ ಮತ್ತು ಲಿಂಗಸುಗೂರುಗಳಿಂದ ಅನೇಕರು ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸತೊಡಗಿದರು. ಅವರುಗಳಲ್ಲಿ ಬಹು ಮುಖ್ಯರಾದವರು ಉಡುಪಿಯ ಶ್ರೀ ಪಾವಂಜೆ ಗುರುರಾಯರು. ಕ್ರಿ.ಶ. ೧೯೦೮ ರಲ್ಲಿ ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯವನ್ನು ಸ್ಥಾಪಿಸಿ ಅದರ ಮುಖಾಂತರ ಪುರಂದರ ದಾಸರ ಪದಗಳನ್ನು ಐದು ಸಂಪುಟಗಳಲ್ಲಿ ಹಾಗೂ ಉಳಿದ ಹರಿದಾಸರ ಕೃತಿಗಳನ್ನು ಬಿಡಿ-ಬಿಡಿಯಾಗಿಯೂ, ಸಂಗ್ರಹಗಳಲ್ಲೂ ಪ್ರಕಟಿಸಿದರು. ಹರಿದಾಸ ಸಾಹಿತ್ಯ ಸಂಗ್ರಹ ಹಾಗೂ ಪ್ರಕಟನ ಕ್ಷೇತ್ರದಲ್ಲಿ ಶ್ರೀ ಪಾವಂಜೆ ಗುರುರಾಯರೊಂದಿಗೆ ಬೆಂಗಳೂರಿನ ಶ್ರೀ ಸುಬೋಧ ಎಂ. ರಾಮರಾಯರನ್ನು ಲಿಂಗಸುಗೂರಿನ ಶ್ರೀ ಗೋರಾಬಾಳ್ ಹಣಮಂತರಾವ ವಕೀಲರನ್ನು ಹಾಗೂ ಧಾರವಾಡ ಜಿಲ್ಲೆಯ ಶ್ರೀ ಬೆಂಗೇರಿ ಹುಚ್ಚರಾಯರನ್ನು ನೆನೆಯಲೇಬೇಕು. ಇಂದು ದೊರೆಯುವ ಹರಿದಾಸ

ಸಾಹಿತ್ಯದಲ್ಲಿ ಬಹುಪಾಲು ಸಾಹಿತ್ಯ ಇವರುಗಳ ಸಾಹಸದ ಫಲವಾಗಿದೆ.

ಹೀಗೆ ದಾಸರ ಪದಗಳ ಸಂಗ್ರಹ ೧೮೫೦ರಷ್ಟು ಹಿಂದಿನಿಂದಲೇ ಪ್ರಕಟವಾಗುತ್ತ ಬಂದುದನ್ನು ಕಂಡರೂ, ಅವುಗಳನ್ನು ರಚಿಸಿದ ದಾಸರ ಕುರಿತು ಅಧ್ಯಯನ ಆರಂಭವಾದದ್ದು ಈ ಶತಮಾನದ ಮೂರನೇಯ ದಶಕದಿಂದ. ಕ್ರಿ.ಶ. ೧೯೨೧ ರಲ್ಲಿ ಪ್ರಕಟವಾದ ಶ್ರೀ ಬೇಲೂರು ಕೇಶವದಾಸರ 'ಪುರಂದರ ದಾಸರ ಚರಿತ್ರೆ'ಯೇ ಬಹುಶ: ಮೊದಲ ಪುಸ್ತಕವಾಗಿರಬೇಕು. ಮುಂದಿನ ವರುಷ 'ಜಗನ್ನಾಥರಾಯರ ಚರಿತ್ರೆ' ಯನ್ನು ಶ್ರೀ ನಾ.ಭಿ. ಕಲಮದಾನಿ ಅವರು ಬರೆದು ಪ್ರಕಟಿಸಿದ್ದಾರೆ. ಅನಂತರ ೧೯೨೬ ರಲ್ಲಿ ಶ್ರೀ ಭೀಮಾಚಾರ್ಯ ವಡವಿ ಅವರ 'ಕನಕ ಮಹಿಮಾದರ್ಶ' ಬಂದಿತು

ಈ ದಿಶೆಯಲ್ಲಿಯ ಅಭ್ಯಾಸಕ್ಕೆ ಭದ್ರ ತಳಪಾಯವನ್ನು ಹಾಕಿದವರು ಶ್ರೀ ಬೇಲೂರು ಕೇಶವದಾಸರೆಂದೇ ಹೇಳಬೇಕು. ಕ್ರಿ.ಶ. ೧೯೩೨ ರಲ್ಲಿ ಅವರು 'ಶ್ರೀ ಕರ್ಣಾಟಕ ಭಕ್ತ ವಿಜಯ' ವನ್ನು ಎರಡು ಭಾಗಗಳಲ್ಲಿ ಪ್ರಕಟಿಸಿದರು. ಇವುಗಳಲ್ಲಿ ಮೊದಲ ಸಲ ೧೯ ಜನರ ಹರಿದಾಸರ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. 'ಶ್ರೀ ಕರ್ಣಾಟಕ ಭಕ್ತ ವಿಜಯ'ದ ಮುನ್ನುಡಿಯಲ್ಲಿ ಅವರು ಹೇಳಿದ ಮಾತುಗಳು, ಅಲ್ಲಿಯವರೆಗೆ ಇಂಥ ಕೆಲಸ ನಡೆದಿರದ್ದನ್ನು ಎತ್ತಿ ತೋರಿಸುತ್ತದೆ.

'... ... ... ಈ ಗ್ರಂಥ ರಚನೆಗೆ ಬಹುಶ: ಭರತಖಂಡದ ಎಲ್ಲ ದೇಶಗಳ -ಎಲ್ಲ ಭಾಷೆಗಳಲ್ಲೂ ಭಕ್ತ ವಿಜಯವೆಂಬ ಹೆಸರಿನಿಂದ ರಚಿತವಾಗಿರುವ ಪುಸ್ತಕವನ್ನು ಓದಿದ್ದೇ ಕಾರಣವಾಯಿತು....... ಕರ್ಣಾಟಕದ ದುರ್ದೈವಕ್ಕೆ ತಕ್ಕಂತೆ ಮೊದಲಿನಿಂದ ಕಡೆಯತನಕ ನೋಡಿದರೂ ಒಬ್ಬ ಕರ್ಣಾಟಕ ಸಂತನ ಹೆ ಸರು ಯೋಗ್ಯ ರೀತಿಯಿಂದ ಆ ಪುಸ್ತಕದಲ್ಲಿರಲಿಲ್ಲ'//೧// ಎಂದು ಹೇಳಿದ್ದಾರೆ. ೧೯ ಜನರ ಹರಿದಾಸರ ವಿಸ್ತೃತ ಜೀವನ ಚರಿತ್ರೆಯೊಂದಿಗೆ, ತಾವು ಕೇಳಿದ ಇತರ ಹರಿದಾಸರ ಕುರಿತೂ ಪಕ್ಷಿನೋಟ ಇಲ್ಲಿ ದೊರೆಯುತ್ತದೆ. ಹರಿದಾಸ ಸಾಹಿತ್ಯದ ಕುರಿತು ಅಭ್ಯಾಸ ಮಾಡುವವರಿಗೆ ಅವರ ಗ್ರಂಥ ಮೊದಲ ಆಕರ ಗ್ರಂಥವೆಂದರೆ ತಪ್ಪಲ್ಲ.

ಹರಿದಾಸರ ಚರಿತ್ರೆ ಹಾಗೂ ಸಾಹಿತ್ಯ ಎರಡನ್ನೂ ವಿವೇಚಿಸಿ ಬರೆದ ಇನ್ನೊಂದು ಪ್ರಮುಖ ಗ್ರಂಥ ಶ್ರೀ ರಾ.ಸ್ವಾ.ಪಂಚಮುಖಿ ಅವರ 'ಹರಿದಾಸ ಸಾಹಿತ್ಯ'ವು ೧೯೫೦ ರಲ್ಲಿ ಪ್ರಕಟವಾಯಿತು. ಇದು ಸಾಮಾನ್ಯರಿಗೂ ರುಚಿಸಿತು. ಸಂಶೋಧಕರಿಗೆ ಮುಂದಿನ ದಾರಿ ಕಾಣಲು ಉಪಯುಕ್ತವೆನಿಸಿತು. ಈ ಗ್ರಂಥ ಹೊರಬರುವ ಮೊದಲೆ ಶ್ರೀ ಎನ್.ಬಿ. ಕಲಮದಾನಿ ಹಾಗೂ ಶ್ರೀ ಎ.ಪಿ. ಕರಮರಕರ ಅವರುಗಳು ೧೯೪೧ ರಲ್ಲಿ 'Mystic Teachings of the Dasas of Karnataka' ಎಂಬ ಇಂಗ್ಲೀಷ

ಪುಸ್ತಕವನ್ನು ಪ್ರಕಟಿಸಿದ್ದರು. ಪುಸ್ತಕದ ಹೆಸರೇ ಸೂಚಿಸುವಂತೆ ದಾಸರ ಅನುಭಾವ ಸಾಹಿತ್ಯದ ವಿವೇಚನೆಗೆ ಇಲ್ಲಿ ಹೆಚ್ಚು ಒತ್ತು ಕೊಟ್ಟಿದ್ದಾರೆ. ಚಾರಿತ್ರಿಕ ಅಂಶಗಳಿಗೆ ವಿಶೇಷ ಸ್ಥಾನವಿರಲಿಲ್ಲ. ಹೀಗಾಗಿ ಶ್ರೀ ಪಂಚಮುಖಿ ಅವರ 'ಹರಿದಾಸ ಸಾಹಿತ್ಯ'ದಲ್ಲಿ ಹರಿದಾಸರು ಭಕ್ತಿ ಪಂಥ ಹಾಗೂ ಸಾಹಿತ್ಯ ಇವುಗಳ ಕುರಿತು ಒಂದು ಬಗೆಯ ವ್ಯವಸ್ಥಿತ ಸಮಗ್ರ ರೂಪ ದೊರೆಯುವಂತಾಯಿತು.

ಈ ಹೊತ್ತಿಗಾಗಲೇ ವೈಯಕ್ತಿಕವಾಗಿ ಒಬ್ಬೊಬ್ಬ ದಾಸರನ್ನು ತೆಗೆದುಕೊಂಡು, ಸಂಶೋಧನೆ ನಡೆಸಿ, ದಾಸರ ಚರಿತ್ರೆಯನ್ನು ಹಾಗೂ ಅವರು ರಚಿಸಿದ ಸಾಹಿತ್ಯದ ಅಭ್ಯಾಸ ಹಾಗೂ ವಿಮರ್ಶೆ ಮಾಡುವ ಪ್ರಯತ್ನಗಳೂ ಪ್ರಾರಂಭವಾಗಿದ್ದವು. ಕ್ರಿ.ಶ. ೧೯೩೮ರಲ್ಲಿ ಪ್ರಕಟವಾದ ಶ್ರೀ ಕಟ್ಟಿ ಶೇಷಾಚಾರ್ಯರ 'ಕನಕದಾಸರು' ಈ ನಿಟ್ಟಿನಲ್ಲಿ ಒಂದು ಮೈಲಿಗಲ್ಲು. ಕ್ರಿ.ಶ. ೧೯೫೬ ರಲ್ಲಿ ಡಾ. ಎ.ಟಿ. ಪಾಟೀಲರ 'ಪ್ರಸನ್ನ ವೆಂಕಟದಾಸರು', ಡಾ. ಕೆ.ಎಂ. ಕೃಷ್ಣರಾಯರ 'ಶ್ರೀ ಜಗನ್ನಾಥ ದಾಸರು' ೧೯೬೯ ರಲ್ಲಿ ಡಾ. ವ.ಅ.ದಿವಾಣಜಿ ಅವರ ಪುರಂದರ ದಾಸರ ಕುರಿತಾದ 'ಪ್ರಸಾದ ಯೋಗ' ಹಾಗೂ ಡಾ. ಕೆ. ಗೋಪೀನಾಥರ 'ವಿಜಯ ದಾಸರು' ಮೊದಲಾದ ಪಿ ಎಚ್.ಡಿ. ಪ್ರೌಢ ಪ್ರಬಂಧಗಳು, ಹರಿದಾಸರನ್ನು ಕುರಿತು ಪ್ರಕಟಿತ ಕೃತಿಗಳಲ್ಲಿಯ ಕೆಲವು ಪ್ರಮುಖ ಗ್ರಂಥಗಳಾಗಿವೆ. ಈ ದಿನಗಳಲ್ಲಿ ಹರಿದಾಸ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಅನೇಕ ಕೃತಿಗಳು ಪ್ರಕಟವಾಗಿವೆ. ಪುರಂದರ ದಾಸರ ಕುರಿತಂತೂ ಸಾಕಷ್ಟು ಗ್ರಂಥಗಳು, ಲೇಖನಗಳು ಪ್ರಕಟವಾಗಿವೆ. ಶರಣರ -ದಾಸರ ತುಲನಾತ್ಮಕ ಅಭ್ಯಾಸವೂ ನಡೆದಿದೆ. ಕ್ರಿ.ಶ. ೧೯೮೧ ರಲ್ಲಿ ಡಾ. ವಾ.ಶಂ. ಶ್ರೀನಿವಾಸರ 'A Comparative Study of Sarana and Dasa Literature' ಎಂಬ ಪ್ರೌಢ ಪ್ರಬಂಧ ಪ್ರಕಟವಾಗಿವೆ.

ಹೀಗೆ ಹಲವಾರು ದೃಷ್ಟಿಕೋನಗಳಿಂದ ಅಭ್ಯಸಿಸಿದ ಕನ್ನಡ ಹರಿದಾಸ ಸಾಹಿತ್ಯವನ್ನು ಚಾರಿತ್ರಿಕವಾಗಿ ನಾಲ್ಕು ಪ್ರಮುಖ ಕಾಲಗಳಲ್ಲಿ ಶ್ರೀ ರಾ.ಸ್ವಾ. ಪಂಚಮುಖಿ ಅವರು ನಿರ್ದೇಶಿಸಿದ್ದಾರೆ. ಶ್ರೀ ಮಧ್ವಾಚಾರ್ಯರ ಕಾಲದಲ್ಲಿ ಅವರ ಶಿಷ್ಯ ಸಂಘವು ಶ್ರೀ ನರಹರಿ ತೀರ್ಥರ ನೇತೃತ್ವದಲ್ಲಿ ಮೊದಲನೆಯದು, ವಿಜಯನಗರ ಕಾಲದಲ್ಲಿ ಶ್ರೀಪಾದರಾಯರು, ಶ್ರೀ ವ್ಯಾಸರಾಯರು, ಪುರಂದರ -ಕನಕದಾಸರ ಕಾಲ ಎರಡನೆಯದು. ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಬಾಳಿದ ಕಾಲ ಮೂರನೆಯದಾದರೆ, ನಾಲ್ಕನೆಯದು ಪ್ರಾಣೇಶ ಗುರುಪ್ರಾಣೇಶದಾಸರಿಂದ ಮುಂದುವರಿದ ಕಾಲವೆಂದು. ಶ್ರೀ ಪಂಚಮುಖಿ ಅವರು ಹೇಳುತ್ತಾರೆ.//೨// ಆದರೆ 'ದಾಸ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಹನ್ನೆರಡನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೆ ಬೆಳೆದು ಬಂದ ಸಾಹಿತ್ಯವನ್ನು, ನರಹರಿತೀರ್ಥರಿಂದ ಪುರಂದರ ಕನಕದಾಸರ ಜೀವಿತ ಕಾಲದ ವರೆಗಿನ ಅವಧಿಯನ್ನು

ಒಂದು ಘಟ್ಟವೆಂದೂ, ಮುಂದೆ ವಿಜಯದಾಸರ ಹಾಗೂ ತರುವಾಯದ ಅವಧಿಯನ್ನು ಇನ್ನೊಂದು ಘಟ್ಟವೆಂದೂ, ಹೀಗೆ ಎರಡೇ ಪ್ರಧಾನ ಘಟ್ಟಗಳಾಗಿ ಎಣಿಸುವುದರಲ್ಲಿ ಸುಲಭವೂ ಔಚಿತ್ಯವೂ ಇದೆ.' ಎಂದು ಡಾ. ಕೆ.ಜಿ.ಶಾಸ್ತ್ರಿ ಅವರು ಹೇಳುತ್ತಾರೆ.//೩// ಹದಿಮೂರನೆಯ ಶತಮಾನದ ನರಹರಿತೀರ್ಥರು 'ದಾಸಕೂಟದ ಮೂಲ ಪುರುಷ' ರಾಗಿದ್ದರೂ ೧೫ ನೆಯ ಶತಮಾನದ ಶ್ರೀಪಾದರಾಯರ ವರೆಗೆ ಯಾರ ಹೆಸರೂ ಕೇಳಿಬರುವದಿಲ್ಲ. ದಾಸಕೂಟ ಸಂಪ್ರದಾಯದ ಧ್ಯಾನ ಶ್ಲೋಕದಲ್ಲಿಯ,

'ನಮ: ಶ್ರೀ ಪಾದರಾಜಾಯ ನಮಸ್ತೇ ವ್ಯಾಸಯೋಗಿನೇ!
ನಮ: ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮ:!!

ಎಂಬುದನ್ನು ಗಮನಿಸಿದರೆ ಶ್ರೀಪಾದರಾಯರಿಂದಲೇ ದಾಸ ಸಾಹಿತ್ಯವು ಪ್ರಾರಂಭವಾಯಿತು. ಎನ್ನಬಹುದು. ಶ್ರೀಪಾದರಾಯರಿಂದ ಪುರಂದರ ಕನಕದಾಸರ ವರೆಗೆ ಅಂದರೆ ಕ್ರಿ.ಶ. ೧೬೦೦ ರವರೆಗೆ ದಾಸ ಸಾಹಿತ್ಯದ ಪ್ರಥಮ ಘಟ್ಟವೆಂದೂ ಸೂಚಿಸಲಾಯಿತು. ಕ್ರಿ.ಶ. ೧೫೬೪ ರಲ್ಲಿ ವೈಕುಂಠಕ್ಕೆ ತೆರಳಿದ ಪುರಂದರದಾಸರ ತರುವಾಯ ವಿಜಯದಾಸರ ವರೆಗೆ ಅಂದರೆ ೧೫೦ ವರುಷಗಳಷ್ಟು ಕಾಲ ಈ 'ಹರಿದಾಸ ಕೂಟ' ಎಲ್ಲಿ? ಹೇಗೆ? ಯಾರಿಂದ ಜೀವ ಹಿಡಿದುಕೊಂಡು ಇದ್ದಿತು?' ಎಂದು ಶ್ರೀ ಬೆಟಗೇರಿ ಕೃಷ್ಣಶರ್ಮರು ಕೇಳುತ್ತಾರೆ.//೪// ಇದೇ ಅಭಿಪ್ರಾಯವನ್ನು ಶ್ರೀ ರಾ.ಸ್ವಾ. ಪಂಚಮುಖಿ ಅವರೂ,//೫// ಡಾ. ರಂ. ಶ್ರೀ. ಮುಗಳಿ ಅವರೂ,//೬// ಹಾಗೂ ಶ್ರೀ ಕಪಟರಾಳ ಕೃಷ್ಣರಾಯರೂ//೭// ವ್ಯಕ್ತಿ ಮಾಡುತ್ತಾರೆ. ಆದ್ದರಿಂದ ಈ ಸುಮಾರು ೧೫೦ ವರುಷಗಳಷ್ಟು ಕಾಲವನ್ನು ದಾಸ ಸಾಹಿತ್ಯದ ಅಜ್ಞಾತ ಕಾಲವೆಂದೇ ಕರೆದರು. ಈ ಅಜ್ಞಾತ ಕಾಲದ ಕಾರಣಗಳನ್ನು ವಿವೇಚಿಸಬೇಕಲ್ಲವೆ?. ಈ ದಿಶೆಯಲ್ಲಿ ನಡೆಸಿದ ಶೋಧದ ಫಲವಾಗಿ ಈ ಮೊದಲಿನ 'ಅಜ್ಞಾತ ಕಾಲ' ಎಂಬ ನಿರ್ಣಯವನ್ನು ಬದಲಿಸುವಷ್ಟು ಆ ಕಾಲದ ಸಾಹಿತ್ಯವು ನನಗೆ ದೊರೆಯಿತು. ಅದರ ಪರಿಚಯವನ್ನು ಹಾಗೂ ಈ ಅವಧಿಯಲ್ಲಿ ಬಾಳಿ- ಬದುಕಿ, ಸಂಖ್ಯೆಯಲ್ಲಿ -ಗುಣದಲ್ಲಿ ಪುರಂದರದಾಸರಿಗೆ ಸರಿ-ಸಮನಾದ ಕೃತಿಗಳನ್ನು ನೀಡಿದ ಕಾಖಂಡಕಿಯ ಶ್ರೀ ಮಹಿಪತಿರಾಯರ ಬದುಕು ಕೃತಿಗಳ ಬಗ್ಗೆ ವಿವೇಚನೆಯನ್ನು ಮಾಡುವುದರ ಆಗತ್ಯವೂ ಉಂಟಾಯಿತು.

ಶ್ರೀ ಮಹಿಪತಿರಾಯರ ಕುರಿತು ೧೯೨೪ ರಷ್ಟು ಹಿಂದೆಯೇ ಶ್ರೀ ಗುಂಡಾಚಾರ ನಾಮಸೇವೆ ಅವರು 'ಮಹೀಪತಿರಾಯರ ಚರಿತ್ರೆ,' ಎಂಬ ಪುಸ್ತಕವನ್ನು ಬರೆದುದಾಗಿ ತಿಳಿದು ಬರುತ್ತದೆ.//೮// ಅನಂತರ ದೊರೆಯುವ ಅವರ ಚರಿತ್ರೆ 'ಶ್ರೀ ಕರ್ನಾಟಕ ಭಕ್ತ ವಿಜಯ'ದಲ್ಲಿ. ಶ್ರೀ ಬೇಲೂರು ಕೇಶವದಾಸರು ತಮ್ಮ ಗ್ರಂಥದಲ್ಲಿ, 'ಮಹಿಪತಿರಾಯರ ಹೆಸರು ಪ್ರಾಯಶಃ ಮರೆತ ಹೆಸರೆಂದು -ಹೇಳಬೇಕು.' ಎಂದು ಪ್ರಾರಂಭಿಸುತ್ತಾರೆ.//೯// 'ರಾಯರು ರಚಿಸಿದ ಸಾವಿರಾರು ದೇವರ ನಾಮಗಳು

ಕಾಖಂಡಿಕೆಯಲ್ಲಿ ಅವರ ವಂಶೀಕರ ಬಳಿಯಲ್ಲಿವೆ. ಅವುಗಳ ಶೋಧ ಮಾಡಿ ಮುದ್ರಿಸಿ ಪ್ರಚುರಗೊಳಿಸುವ ಕಾಲವಿನ್ನೂ ಬಂದಿಲ್ಲ.' ಎಂದೂ ಹೇಳುತ್ತಾರೆ.//೧೦//

ಸಾವಿರಾರು ದೇವರ ನಾಮಗಳಲ್ಲಿಯ ಕೆಲವನ್ನು ಆಯ್ದು ಅವರ ವಂಶಿಕರಾದ ಶ್ರೀ ಅಣ್ಣಾಪ್ಪಯ್ಯ ಹರಿದಾಸರು ೧೯೫೩ ರಲ್ಲಿ 'ಮಹಿಪತಿರಾಯರ ಕೀರ್ತನೆಗಳ ಸಂಗ್ರಹ'ವನ್ನು ಪ್ರಪ್ರಥಮವಾಗಿ ಪ್ರಕಟಿಸಿದರು. ಸಂಗ್ರಹದ ಪೀಠಿಕೆಯಲ್ಲಿ ರಾಯರ ಸಂಕ್ಷಿಪ್ತ ಚರಿತ್ರೆಯೂ ಇದೆ.

ಮಹಿಪತಿರಾಯರ ಕೃತಿಗಳಲ್ಲಿಯ ಅನುಭಾವ ಕಾವ್ಯ ಸಿದ್ಧಿಯನ್ನು ಮೊದಲಸಲ ಗುರುತಿಸಿದವರು ಖ್ಯಾತ ತತ್ವಜ್ಞಾನಿ ಡಾ. ಗುರುದೇವ ಆರ್.ಡಿ. ರಾನಡೆ ಅವರು ಎಂದು ಹೇಳಬೇಕು. ಅವರು ೧೯೫೯-೬೦ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನೀಡಿದ ಉಪನ್ಯಾಸಗಳು 'Pathway to God in Kannada Literature' ಎಂದು ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಅದನ್ನು ಅಥಣಿಯ ಶ್ರೀ ದೇಶಪಾಂಡೆ ಮನೋಹರರಾಯರು ಅನುವಾದಿಸಿದ್ದನ್ನು 'ಕನ್ನಡ ಸಂತರ ಪರಮಾರ್ಥಪಥ' ಎಂಬ ಹೆಸರಿನಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ೧೯೬೨ ರಲ್ಲಿ ಪ್ರಕಟಿಸಿದೆ. ಡಾ. ರಾನಡೆ ಅವರು ತಮ್ಮ ಗ್ರಂಥದಲ್ಲಿ ಮಹಿಪತಿರಾಯರ ಕುರಿತು ಹೇಳುತ್ತ -

> 'ಈ ಹಿರಿಯ ಅನುಭಾವಿಗಳ ಸಾಹಿತ್ಯದ ಸೂಕ್ಷ್ಮವಾದ ಪರಿಪೂರ್ಣವಾದ ಅಧ್ಯಯನವನ್ನು ಬೇಗನೆ ಕೈಕೊಳ್ಳುವದು ಅವಶ್ಯವಾದುದು'//೧೧//
>
> 'ಈ ಹಿರಿಯ ಸಂತರ ಪರಿಚಯವು ಕನ್ನಡ ನಾಡಿಗೆ ಇನ್ನೂ ಸಾಕಷ್ಟು ಆಗಿರುವದಿಲ್ಲ'//೧೨//
>
> 'ಅವರು ಹಿರಿಯ ಪಾರಮಾರ್ಥಿಕ ಕವಿಗಳಲ್ಲಿ ಒಬ್ಬರು'//೧೩//
>
> 'ಅವರು ಶ್ರೇಷ್ಠತಮ ಕನ್ನಡ ಕವಿಗಳಲ್ಲಿ, ವಿಶೇಷತಃ ಸಂತ ಕವಿಗಳಲ್ಲಿ ಒಬ್ಬರೆಂಬುದು ನನ್ನ ಅಭಿಮತ.//೧೪//

ಎಂದು ಮುಂತಾಗಿ ಹಲವಾರು ಸಲ ತುಂಬು ಹೃದಯದಿಂದ ಹೇಳಿದ್ದಾರೆ. ಅವರ ಸಾವಿರಾರು ಕೃತಿಗಳಲ್ಲಿಯ ಎಂಟು ಕೃತಿಗಳನ್ನು ಗುರುದೇವ ರಾನಡೆಯವರು ತಮ್ಮ ಉಪನ್ಯಾಸಗಳಲ್ಲಿ ಉದಾಹರಿಸಿ ಸುದೀರ್ಘವಾಗಿ ಚರ್ಚಿಸಿದ್ದಾರೆ.

ಗುರುಗಳ ಈ ಇಂಗ್ಲೀಷ ಕೃತಿಯ ಅನುವಾದದ ಅನಂತರ ಶ್ರೀ ದೇಶಪಾಂಡೆ ಮನೋಹರರಾಯರು ಮಹಿಪತಿರಾಯರ ಕುರಿತು ಒಂದು ವಿಸ್ತೃತ ಗ್ರಂಥ 'ಸ್ವಾನಂದ ಸಾಮ್ರಾಜ್ಯ'ವನ್ನು ಬರೆದು ಜೊತೆಗೆ ಅವರ ೧೧೫ ಕೃತಿಗಳನ್ನು ೧೯೬೨ ರಲ್ಲಿ ಪ್ರಕಟಿಸಿದರು. ತಮ್ಮ ಗ್ರಂಥದಲ್ಲಿ ಅವರು 'ಸಾಂಪ್ರದಾಯಕರು ತಿಳಿಯುವಂತೆ ರಾಯರು ವಿಷ್ಣುವಿನ ದಾಸರೂ ಅಲ್ಲ ಶಿವನ ದಾಸರೂ ಅಲ್ಲ, ಅವರು ದೇವರ ದಾಸರು' ಎಂದು ಹೇಳಿದರು.//೧೫// ವಿಶಾಲ ದೃಷ್ಟಿಯಲ್ಲಿ ಶ್ರೀ ದೇಶಪಾಂಡೆ

ಅವರ ಅಭಿಪ್ರಾಯವು ಗ್ರಾಹ್ಯವಾದರೂ ಮನೆತನದಿಂದ ಮಾಧ್ವರಾದ ಮಹಿಪತಿರಾಯರ ಸಂಪ್ರದಾಯ ಶ್ರದ್ಧೆಗಳ ಕುರಿತು ಚರ್ಚಿಸುವುದು ಸೂಕ್ತ ಎನಿಸಿತು.

ರಾಯರ ಮನೆತನದ ಇನ್ನೊಬ್ಬ ಹಿರಿಯರಾದ ಶ್ರೀ ಶ್ರೀಪತಯ್ಯ ಹರಿದಾಸ ಅವರು ರಾಯರ ಸಂಕ್ಷಿಪ್ತ ಚರಿತ್ರೆಯೊಂದಿಗೆ ಅವರ ಹಾಗೂ ಮನೆತನದವರ ಕೀರ್ತನೆಗಳ ಸಂಗ್ರಹ 'ಸೇವಾತತ್ವ'ವನ್ನು ೧೯೬೩ ರಲ್ಲಿ ಪ್ರಕಟಿಸಿದ್ದಾರೆ. ಚರಿತ್ರೆ ಹಾಗೂ ಕಾಲವಿಚಾರಗಳಲ್ಲಿ 'ಸ್ವಾನಂದ ಸಾಮ್ರಾಜ್ಯ'ವನ್ನು ಅನುಸರಿಸಿದ್ದಾರೆ. ಸಂಪ್ರದಾಯದಲ್ಲಿ ಅವರು 'ಮಾಧ್ವ'ರು ಎಂದು ಶ್ರೀ ಶ್ರೀಪತಯ್ಯನವರು 'ಸೇವಾತತ್ವ'ದಲ್ಲಿ ಹೇಳುತ್ತಾರೆ. 'ಸ್ವಾನಂದ ಸಾಮ್ರಾಜ್ಯ' ಹಾಗೂ 'ಸೇವಾತತ್ವ' ಈ ಎರಡು ಕೃತಿಗಳು ಒಂದೇ ವ್ಯಕ್ತಿಯ ಭಿನ್ನ ಸಂಪ್ರದಾಯಗಳನ್ನು ತೋರಿಸುವದರ ಜೊತೆಗೆ ಅವರ ಚರಿತ್ರೆ ಹಾಗೂ ಕಾಲ ನಿರ್ದೇಶನಗಳನ್ನು ನಿರ್ಣಯಿಸುವಲ್ಲಿ ಗಟ್ಟಿ ಆಧಾರಗಳನ್ನು ಕೊಡಲಿಲ್ಲ.

ಈ ಮಧ್ಯ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ಹರಿದಾಸ ಸಾಹಿತ್ಯ ಮಾಲೆಯನ್ನು ಪ್ರಾರಂಭಿಸಿತು. ನಾಡಿನ ಎಲ್ಲ ಹರಿದಾಸರ ಕೃತಿಗಳನ್ನು ಶಾಸ್ತ್ರ ಶುದ್ಧವಾಗಿ ಸಂಪಾದಿಸಿ ವಿಸ್ತೃತ ಪೀಠಿಕೆಯೊಂದಿಗೆ ಪ್ರಕಟಿಸುವ ಈ ಮಾಲೆಯಲ್ಲಿ ಅನೇಕ ಕೃತಿಗಳು ಈಗಾಗಲೇ ಹೊರಬಂದಿವೆ. ಅವುಗಳಲ್ಲಿ 'ಶ್ರೀ ಮಹಿಪತಿರಾಯರ ಕೃತಿಗಳು' ೧೯೭೬ರಲ್ಲಿ ಪ್ರಕಟವಾಯಿತು. ಈ ಸಂಗ್ರಹದಲ್ಲಿ ಪ್ರ-ಪ್ರಥಮವಾಗಿ ರಾಯರ ೬೮೫ ಕೃತಿಗಳು ಬೆಳಕು ಕಂಡಿವೆ. ಸಂಪಾದಕರಾದ ಡಾ.ಜಿ. ವರದರಾಜರಾವ್ ಅವರ ಶ್ರಮ ಸಾರ್ಥಕವಾಗಿದೆ. ದಾಸ ಸಾಹಿತ್ಯ ಪ್ರಿಯರು ಅವರಿಗೆ ಕೃತಜ್ಞರಾಗಿರಬೇಕು. ಸಂಗ್ರಹದ ಪ್ರಾರಂಭದಲ್ಲಿ ವಿಸ್ತೃತ ಪೀಠಿಕೆಯೂ ಇದೆ. ಆದರೆ ರಾಯರ ಚರಿತ್ರೆ ಹಾಗೂ ಕಾಲ ವಿಚಾರಗಳಲ್ಲಿ ಈ ಹಿಂದಿನ 'ಸ್ವಾನಂದ ಸಾಮ್ರಾಜ್ಯ' ಮತ್ತು 'ಸೇವಾತತ್ವ' ಗಳಲ್ಲಿಯ ವಿಷಯಗಳನ್ನೇ ಚರ್ಚೆ ಇಲ್ಲದೆ ಉಪಯೋಗಿಸಿಕೊಳ್ಳಲಾಗಿದೆ. ಆದ್ದರಿಂದ ರಾಯರ ಚರಿತ್ರೆಯನ್ನು ಸಾಧಾರ ಪೂರ್ವಕವಾಗಿ, ವಸ್ತು ನಿಷ್ಠವಾಗಿ ಬರೆಯುವುದಲ್ಲದೆ, ಐತಿಹಾಸಿಕ ಆಧಾರಗಳೊಂದಿಗೆ ಸಂಭಾವ್ಯ ಕಾಲ ನಿರ್ಣಯವನ್ನು ಮಾಡುವ, ಅದರಂತೆ ರಾಯರ ಕೃತಿಗಳ ಆಧಾರದಿಂದಲೇ ಅವರ ಸಂಪ್ರದಾಯವನ್ನು ಗುರುತಿಸುವ ಪ್ರಯತ್ನ ಆಗಬೇಕು ಎನಿಸಿತು.

ಮಹಿಪತಿರಾಯರಂಥ ಒಬ್ಬ ಶ್ರೇಷ್ಠ ಅನುಭಾವ ಕವಿಯು ಹುಟ್ಟಬೇಕಾದರೆ, ಅವರ ಸುತ್ತಲಿನ ಪರಿಸರವು ಕೂಡ ಫಲವತ್ತಾಗಿರಬೇಕು. ಆ ಫಲವತ್ತಾದ ಭೂಮಿಯಲ್ಲಿ ಇವರ ಸರಿ-ಸಮನಾಗಿ ನಿಲ್ಲುವ ಹಲವಾರು ಮಹಾನ್ ವ್ಯಕ್ತಿಗಳು ಜನಿಸಿರಬೇಕು. ಅವರು ಕೂಡ ಸಾಹಿತ್ಯವನ್ನು ರಚಿಸಿರಬೇಕು. ಈ ಎಲ್ಲದಕ್ಕೂ ಕಳಸ

ಎಂಬಂತೆ ಮುಸಲ್ಮಾನರ ಬಲಿಷ್ಠರಾಜ್ಯ ವಿಜಾಪುರದ ಉತ್ಕಟ ಪ್ರಭಾವಲಯದಲ್ಲಿ ಇಂಥ ಮೇಲ್ಮಟ್ಟದ ದಾಸ-ಸಾಹಿತ್ಯ ನಿರ್ಮಾಣದ ಸಾಧ್ಯತೆಯನ್ನು ಗಮನಿಸುವುದು ಅನಿವಾರ್ಯವೆನಿಸಿತು, ಆದ್ದರಿಂದ ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಪರಿಸ್ಥಿತಿಗಳನ್ನು ಚರ್ಚಿಸುವುದಲ್ಲದೆ, ಪ್ರಚಲಿತ ಭಾಷೆ ಹಾಗೂ ಸಾಹಿತ್ಯ ನಿರ್ಮಿತಿಯ ಕುರಿತೂ ಚಿಂತನೆ ಅಗತ್ಯವೆನಿಸಿತು.

ಪರಂಪರೆಯಿಂದ ಕೇಳಿಬಂದ ಮಹಿಪತಿರಾಯರ ಚರಿತ್ರೆ ಹಾಗೂ ಅವರ ಪ್ರಕಟಿತ ಸಾಹಿತ್ಯದ ಅವಲೋಕನದಿಂದ ಈ ದಿಶೆಯಲ್ಲಿ ಇನ್ನಷ್ಟು ಸಂಶೋಧನೆಯ ಅಗತ್ಯವಿದೆ ಎನಿಸಿತು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು 'ಶ್ರೀ ಮಹಿಪತಿರಾಯರ ಕೃತಿಗಳು' ಎಂಬ ಪುಸ್ತಕವನ್ನು ಪ್ರಕಟಿಸುವಾಗ ಮೂಲ ಆಕರವಾಗಿ ಒಂದೇ ಒಂದು ಹಸ್ತಪ್ರತಿಯನ್ನು ಇಟ್ಟುಕೊಂಡು ರಾಯರ ೬೮೫ ಕೃತಿಗಳ ಸಂಗ್ರಹವನ್ನು ಪ್ರಕಟಿಸಿರುವುದಾಗಿ ಸಂಪಾದಕರು ಹೇಳುತ್ತಾರೆ.

'ಇಲಕಲ್ಲಿನ ಡಾ. ಕೆ.ಎ.ಕಾಖಂಡಕಿಯವರಲ್ಲಿ ಶ್ರೀ ಮಹಿಪತಿರಾಯರ ಮತ್ತು ಶ್ರೀ ಕೃಷ್ಣರಾಯರ ಕೃತಿಗಳುಳ್ಳ ಪ್ರಾಚೀನ ಹಸ್ತಪ್ರತಿಯೊಂದು ಇರುವುದಾಗಿ ತಿಳಿದು ಬಂದಿತು. ......... ಎರವಲಾಗಿ ನೀಡಿದ ಮೇಲೆ ಈ ಕಾರ್ಯವನ್ನು ಕೈಕೊಳ್ಳಲು ಸಾಧ್ಯವಾಯಿತು.' ಎಂದು ಸಂಗ್ರಹದ ಪೀಠಿಕೆಯಲ್ಲಿ ಹೇಳಲಾಗಿದೆ.//೧೬// ಆದರೆ ವಾಸ್ತವದಲ್ಲಿ ಸಾವಿರದಷ್ಟು ಕೃತಿಗಳನ್ನು ರಚಿಸಿರಬೇಕಾದರೆ, ಇನ್ನು ಹಲವಾರು ಹಸ್ತಪ್ರತಿಗಳು ಇರುವ ಸಾಧ್ಯತೆ ಇದೆ ಎನಿಸಿತು. ಆಗ ಅವುಗಳನ್ನು ಹುಡುಕಲು ಪ್ರಯತ್ನಿಸಲಾಯಿತು. ವಿಜಾಪುರದ ಸುತ್ತಮುತ್ತಲಿನ ಹಳ್ಳಿಗಳಲ್ಲಿ, ಅವರ ವಂಶಿಕರಲ್ಲಿ ವಿಚಾರಿಸಿದಾಗ ಉತ್ತೇಜನಕಾರಿಯಾದ ಫಲ ದೊರೆಯಿತು. ಶ್ರಮಸಾಧ್ಯವಾದರೂ, ರಾಯರು ಹಾಗೂ ಅವರ ಮನೆತನದವರು ರಚಿಸಿದ ಸಾವಿರಾರು ಕೀರ್ತನೆಗಳು, ಹತ್ತೆಂಟು ಆಖ್ಯಾನಗಳು ಮತ್ತು ಇತರ ಹರಿದಾಸರು ರಚಿಸಿದ ಅನೇಕ ಕೃತಿಗಳನ್ನೊಳಗೊಂಡ ೨೫ ಹಸ್ತಪ್ರತಿಗಳು ದೊರಕಿದುವು. ಅವುಗಳಲ್ಲಿ ಮಹಿಪತಿರಾಯರ ಮೊಮ್ಮಗ ಯತಿರಾಯರಿಂದ (ಕ್ರಿ.ಶ. ೧೭೩೨) ಹಿಡಿದು ಕ್ರಿ.ಶ. ೧೮೯೦ರ ವರೆಗಿನ ಹಸ್ತಪ್ರತಿಗಳು ಇದ್ದುದು ವಿಶೇಷವಾಗಿತ್ತು. ಇವುಗಳ ಆಧಾರದಿಂದ ಪ್ರಕಟಿತ ಕೃತಿಗಳ ಪಾಠಾಂತರಗಳನ್ನು ಗುರುತಿಸಲು ಸಾಧ್ಯ. ಅದರಂತೆ ಇನ್ನಷ್ಟು ಹುಡುಕಿದಾಗ ಅವರ ಸಮಕಾಲೀನರು ರಚಿಸಿದ ಮತ್ತೆ ೧೧ ಹಸ್ತಪ್ರತಿಗಳು ದೊರೆತವು. ಹೀಗೆ ಒಟ್ಟು ದೊರೆತ ೩೬ ಹಸ್ತಪ್ರತಿಗಳಲ್ಲಿ ಕನ್ನಡವಲ್ಲದೆ, ಮರಾಠಿ, ಹಿಂದಿ ಹಾಗೂ ಬಹುಭಾಷಾ ಮಿಶ್ರಿತ ರಚನೆಗಳು ಇದ್ದುದು ವಿಶೇಷವೆನಿಸಿತು. ಇವುಗಳ ಪರಿಶೀಲನೆಯಿಂದ ಅನೇಕ ಹೊಸ ವಿಷಯಗಳು ಬೆಳಕಿಗೆ ಬರುವುದರಲ್ಲಿ ಸಂಶಯವಿಲ್ಲ ಎಂಬುದು ಮನದಟ್ಟಾಯಿತು.

'ಸ್ವಾನಂದ ಸಾಮ್ರಾಜ್ಯ'ವನ್ನು ಪ್ರಕಟಿಸುವಾಗ ಶ್ರೀ ದೇಶಪಾಂಡೆ ಅವರು ತಮಗೆ ದೊರೆತ ಸಂಗ್ರಹದಲ್ಲಿ 'ಒಟ್ಟಾರೆ ೭೨೬ ಪದ ಪದ್ಯಗಳಿರುವವು' ಎಂದು ಹೇಳುತ್ತಾರೆ.//೧೬//ಡಾ.ಜಿ. ವರದರಾಜರಾವ್ ಅವರು ೬೮೫ ಕೃತಿಗಳನ್ನು ಸಂಗ್ರಹಿಸಿದ್ದಾರೆ. ಈಗ ದೊರೆತ ಹಸ್ತಪ್ರತಿಗಳನ್ನು ಪರಿಶೀಲಿಸಿ ಮಹಿಪತಿರಾಯರ ಕೃತಿಗಳ ಸಂಖ್ಯೆಯನ್ನು ನಿರ್ಣಯಿಸಬಹುದೆಂದು ತೋರಿತು. ಜೊತೆಗೆ ರಾಯರ ಅಂಕಿತಗಳು ಮತ್ತು ಅವುಗಳಲ್ಲಿಯ ವಿವಿಧತೆ ಮತ್ತು 'ಮಹಿಪತಿ' ಎಂಬ ಅಂಕಿತವನ್ನು ಅವರ ಮಗ, ಮೊಮ್ಮಕ್ಕಳು ಬಳಸಿಕೊಂಡು ರಚಿಸಿದ ಕೃತಿಗಳಲ್ಲಿ ರಾಯರ ಅಂಕಿತದ ಖಚಿತತೆ ಮುಂತಾದವುಗಳ ಸಂಶೋಧನೆಯ ಅಗತ್ಯವೂ ಕಂಡು ಬಂದಿತು.

ಹೀಗೆ ಕಂಡು ಬಂದ ವಿವಿಧ ಸಮಸ್ಯೆಗಳನ್ನು ಬಿಡಿಸುವಾಗ, ಹಸ್ತಪ್ರತಿಗಳ ಅಧಿಕ ಹೊತ್ತಿಗೆಗಳು ದೊರೆತದ್ದರಿಂದ, ಪ್ರಬಂಧದ ವಿಷಯ ಸಂಗ್ರಹ ಹಾಗೂ ಅದರ ವಿಕಾಸಕ್ಕಾಗಿಯೇ ಒಂದು ಅಧ್ಯಾಯವನ್ನು ಮೀಸಲಿಡಬೇಕಾಯಿತು. ಅಂತೆಯೇ ದೊರೆತ ಹಸ್ತಪ್ರತಿಗಳ ವಿವರ ಹಾಗೂ ಅವುಗಳ ಸಂಭಾವ್ಯ ಕಾಲಮಾನವನ್ನು ಗುರುತಿಸುತ್ತ ಅವುಗಳಿಗೆ ಪೂರಕವಾದ, ಈ ವರೆಗೆ ಲಭ್ಯ ಇರುವ ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳ ವಿವೇಚನೆ, ಮತ್ತು ಪೂರಕ ಪ್ರಕಟಿತ ಚಾರಿತ್ರಿಕ ಅಂಶಗಳ ಪರಿಚಯವನ್ನು ಮೊದಲು ಮಾಡಿಕೊಂಡು, ಈ ಅಧ್ಯಾಯದ ಆಧಾರದಿಂದ ಉಳಿದ ಸಮಸ್ಯೆಗಳನ್ನು ಬಿಡಿಸಲು ಈ ಮುಂದಿನ ಪುಟಗಳಲ್ಲಿ ಪ್ರಯತ್ನಿಸಲಾಗಿದೆ.

★ ★ ★

## ಅಡಿ ಟಿಪ್ಪಣಿಗಳು

೧. ಬೇಲೂರು ಕೇಶವದಾಸರು: ಶ್ರೀ ಕರ್ಣಾಟಕ ಭಕ್ತವಿಜಯ ಪುಟ ೧ (೧೯೬೩)
೨. ರಾ.ಸ್ವಾ.ಪಂಚಮುಖಿ: ಹರಿದಾಸ ಸಾಹಿತ್ಯ ಪುಟ ೪೯-೫೦ (೧೯೫೦)
೩. ಕೆ.ಜಿ.ಶಾಸ್ತ್ರಿ: ದಾಸಸಾಹಿತ್ಯ-ದ್ವಿತೀಯ ಘಟ್ಟದ ಸಾಧನೆ:
ಕ.ವಿ.ವಿ. (೧೯೭೦) ಹಿನ್ನೆಲೆ ಪುಟ ii
೪. ಬೆಟಗೇರಿ ಕೃಷ್ಣಶರ್ಮ (ಸಂ): ಪುರಂದರದಾಸರ ಸಾಹಿತ್ಯ-೬, ಪುಟ ೨೩-೨೪ (೧೯೬೪)
೫. ರಾ.ಸ್ವಾ.ಪಂಚಮುಖಿ: ಹರಿದಾಸ ಸಾಹಿತ್ಯ ಪುಟ ೬೭ (೧೯೫೦)
೬. ರಂ.ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ ಪು. ೨೬೦
೭. ಕಪಟರಾಳ ಕೃಷ್ಣರಾಯ: ಹರಿದಾಸ ಪರಂಪರೆ
-ಪ್ರಬುದ್ಧ ಕರ್ನಾಟಕ ಸಂ.೪೬-೧ ಪುಟ ೧೬೦
೮. ರಂ.ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ ಅಭ್ಯಾಸ ಸೂಚಿ ಪುಟ ೧೪೯ (೧೯೭೧)
೯. ಬೇಲೂರು ಕೇಶವದಾಸರು: ಶ್ರೀ ಕರ್ಣಾಟಕ ಭಕ್ತ ವಿಜಯ ಪುಟ ೫೪೦.
೧೦. ಅದೇ ಪುಟ ೫೬೫.
೧೧. ಆರ್.ಡಿ.ರಾನಡೆ: ಕನ್ನಡ ಸಂತರ ಪರಮಾರ್ಥಪಥ (ಅನು) ಪುಟ ೮ (೧೯೬೨)
೧೨. ಅದೇ ಪುಟ ೪೨
೧೩. ಅದೇ ಪುಟ ೬೬
೧೪. ಅದೇ ಪುಟ ೧೩೪.
೧೫. ದೇಶಪಾಂಡೆ ಮನೋಹರರಾವ: ಸ್ವಾನಂದ ಸಾಮ್ರಾಜ್ಯ ಪುಟ ೪ (೧೯೬೨)
೧೬. ಜಿ. ವರದರಾಜರಾವ್ (ಸಂ): ಶ್ರೀಮಹಿಪತಿರಾಯರ ಕೃತಿಗಳು ಪೀಠಿಕೆ ಪುಟ lvi (೧೯೭೬)
೧೭. ದೇಶಪಾಂಡೆ ಮನೋಹರರಾವ: ಸ್ವಾನಂದ ಸಾಮ್ರಾಜ್ಯ, ಪುಟ ೩ (೧೯೬೨)

## ಅಧ್ಯಾಯ ಎರಡು

# ವಿಷಯ ಸಂಗ್ರಹ

**I ಹಸ್ತಪ್ರತಿಗಳು:**

ದೊರೆತ ಹಸ್ತಪ್ರತಿಗಳಲ್ಲಿ ಮಹಿಪತಿರಾಯರ ಕೃತಿಗಳಲ್ಲದೆ, ಅವರ ಮಗ, ಮೊಮ್ಮಕ್ಕಳು, ಮರಿಮಕ್ಕಳು ಮತ್ತು ಇತರ ಹರಿದಾಸರುಗಳು, ಸಂತರು ರಚಿಸಿದ ಕನ್ನಡ, ಮರಾಠಿ, ಹಿಂದಿ ಕೃತಿಗಳೂ ಸೇರಿಕೊಂಡಿವೆ. ಆದ್ದರಿಂದ ಮಹಿಪತಿರಾಯರು ಮತ್ತು ಅವರ ಮನೆತನದವರು ರಚಿಸಿದ ಕೃತಿಗಳು ಅಧಿಕವಾಗಿದ್ದ ಸಂಗ್ರಹಗಳನ್ನು ಹಾಗೂ ಇತರ ಸಂತರ ಕೃತಿ ಸಂಗ್ರಹಗಳನ್ನು ಬೇರ್ಪಡಿಸಿ ಅವುಗಳಿಗೆ 'ಅ' ಕಾರಾದಿ ಹೆಸರುಗಳನ್ನು ಸೂಚಿಸಲಾಗಿದೆ. ಅವುಗಳ ವಿವರ ಹೀಗಿದೆ.

೧. ಮಹಿಪತಿರಾಯರು ಹಾಗೂ ಅವರ ಮನೆತನದವರು ರಚಿಸಿದ ಕೃತಿಗಳು ಅಧಿಕವಾಗಿದ್ದ ಹಸ್ತಪ್ರತಿಗಳು:

೧. ಪ್ರತಿ ಅ:- ೨೦ ಸೆಂ.ಮಿ. ಉದ್ದ, ೧೪ ಸೆಂ.ಮಿ. ಅಗಲದ ಕಾಗದಗಳು, ಪುಟಗಳ ಸಂಖ್ಯೆ ಇದೆ. ಒಂದು ಪಾನಿಗೆ ಒಂದರಂತೆ ಪುಟಸಂಖ್ಯೆ. ಮೊದಲಿನ ೫೨ ಪುಟಗಳು ಇಲ್ಲ. ಪುಟ ೫೪ ರಿಂದ ಪ್ರಾರಂಭವಾಗಿ ಪುಟ ೨೩೧ ಕ್ಕೆ ಕೊನೆಗೊಂಡಿದೆ. ಕೊನೆಯ ಕೆಲವು ಪುಟಗಳೂ ಹರಿದಿರುವ ಸಂಭವವಿದೆ. ಲಿಪಿ ದೇವನಾಗರಿ. ಮಸಿ-ಕರಿಬಣ್ಣದ್ದು. ಸ್ಪಷ್ಟ ಅಕ್ಷರಗಳು.

ದೊರೆತ ಹಸ್ತಪ್ರತಿಗಳಲ್ಲಿ ಇದು ತುಂಬ ಹಳೆಯದಾದ ಪ್ರತಿ. ಇದನ್ನು ಬರೆದವರು ಮಹಿಪತಿರಾಯರ ಮೊಮ್ಮಗ ಯತಿರಾಯ. ಅವರು ತಮ್ಮ ತಂದೆ ಕೃಷ್ಣರಾಯರ ಕೃತಿಗಳನ್ನು ಸಂಗ್ರಹಿಸುವಾಗ ಅಜ್ಜ ಮಹಿಪತಿರಾಯರ ೧೮ ಕೃತಿಗಳನ್ನೂ ಇದರಲ್ಲಿ ಸಂಗ್ರಹಿಸಿದ್ದಾರೆ. ತಂದೆ ಬರೆದ 'ಭಾವಾರ್ಥ ರಾಮಾಯಣ' ಕಾವ್ಯದ ನಕಲಿನ ಕೊನೆಗೆ,

> 'ಇತಿ ಶ್ರೀ ಭಾವಾರ್ಥ ರಾಮಾಯಣೇ ಸೀತಾ ಸ್ವಯಂವರ ಕಥಾ
> ಶ್ರೀ ಗುರು ಆತ್ಮಾರ್ಪಣಮಸ್ತು।। ಶುಭಮಸ್ತು।। ಶ್ರೀರಸ್ತು।।
> ಯಾದೃಶೀ ಪುಸ್ತಕಂ ದೃಷ್ಟ್ವಾ ತಾದೃಶೀ ಲಿಖಿತಂ ಮಯಾ।
> ಅಬಧೋ ವಾ ಸುಬಧೋ ವಾ ಮಮ ದೋಷೇನ ಲಿಪ್ಯತೆ।।೧।।
> ಭಗ್ನ ಪೃಷ್ಟ ಕಟಿ ಗ್ರೀವ ಬಧ್ಯ ಮುಷ್ಟಿರಧೋ ......
> ಕಷ್ಟೇನ ಲಿಖಿತಂ ಗ್ರಂಥಂ ಯತ್ನೇನ ಪ್ರತಿಪಾಲಯೇತ್ ।।೨।।
> ಕೃಷ್ಣರಾಜ ತನೂಜೇನ ಕಾಖಂಡಕಿ ಗ್ರಾಮವಾಸಿನಂ
> ಯತಿರಾಜೇನ ಲಿಖಿತಂ ರಾಮಾಯಣೇ ಸಂಪೂರ್ಣಂ ।।೩।।

ಎಂದು ೭೫ನೆಯ ಪುಟದಲ್ಲಿ ಹೇಳಲಾಗಿದೆ. ಮುಂದೆ ೮೦ ನೆಯ ಪುಟದಲ್ಲಿ ಒಂದು ಮಗುವಿನ ಜನನ ವಿವರವೂ ಇದೆ. 'ಶಕೆ ೧೬೫೪ ಪರಿಧಾವಿನಾಮ ಸಂವತ್ಸರ ಆಷಾಢ, ಶುದ್ಧ ದಶಮಿ ಬುಧವಾರ ಸ್ವಾತಿ ನಕ್ಷತ್ರ ದ್ವಿತೀಯ ಚರಣಕ ... .. ' ಹೀಗೆ ನಮೂದಿಸ ಲಾಗಿದೆ. ಇದು ದಿನಾಂಕ ೨೧-೬-೧೭೩೨ (ಕ್ರಿ.ಶ.)ಕ್ಕೆ ಸರಿಯಾಗಿ ಹೊಂದುತ್ತದೆ.

ದೊರೆತ ೫೪ ರಿಂದ ೨೩೧ ಪುಟಗಳಲ್ಲಿ ಭಾವಾರ್ಥ ರಾಮಾಯಣದ ಸೀತಾಸ್ವಯಂವರ ಭಾಗವಲ್ಲದೆ, ಸುದಾಮ ಚರಿತ್ರೆ ಗಜೇಂದ್ರ ಮೋಕ್ಷ, ಪ್ರಲ್ಹಾದ ಚರಿತ್ರೆ (ಎಲ್ಲವೂ ಕೃಷ್ಣರಾಯ ವಿರಚಿತ)- ಆಖ್ಯಾನಗಳು, ಮತ್ತು ೩೦೨ ಕೀರ್ತನೆಗಳು ಇರುತ್ತವೆ. ಅವುಗಳಲ್ಲಿ ೧೮ ಮಹಿಪತಿರಾಯರ ಕೃತಿಗಳು. ಉಳಿದವುಗಳಲ್ಲಿ ಕೃಷ್ಣರಾಯರಿಂದ ರಚಿತವಾದವುಗಳು ಅಧಿಕವಾಗಿವೆ. ಎರಡು ತೆಲಗು ಕೃತಿಗಳಲ್ಲಿ ಒಂದಕ್ಕೆ 'ಭಾನು ನಂದೇಶ್ವರ' ಎಂಬ ಅಂಕಿತವಿದೆ. 'ಗುರುಕೃಷ್ಣ' 'ತಂದೆ ಕೃಷ್ಣ' 'ಶ್ರೀಕೃಷ್ಣನ ಪುತ್ರ' (ಯತಿರಾಯರ ಅಂಕಿತಗಳು) 'ರಾಜಗೋಪಾಲ' 'ಮಹಿಪತಿ ಚಿನ್ನಪ್ರಭು' 'ಪುರಂದರ ವಿಠಲ' ಅಂಕಿತದ ಹಾಗೂ ಅಂಕಿತ ಇಲ್ಲದ ಕೆಲವು ಕನ್ನಡ-ಮರಾಠಿ ಪದಗಳೂ ಇವೆ.

ಮಹಿಪತಿರಾಯರ 'ಕಾಲ ನಿರ್ಣಯ' ದಲ್ಲಿ ಹಿಂದಿನ ಎಲ್ಲ ವಿದ್ವಾಂಸರು ಬಳಸಿಕೊಂಡ 'ನೆನೆದು ನಮಿಸುವೆನು ವಾರಂ ವಾರ' ಕೀರ್ತನೆಯ ಮೂಲಪಾಠ ಈ ಹಸ್ತಪ್ರತಿಯ ವಿಶೇಷವಾಗಿದೆ.

ಈ ಹಸ್ತಪ್ರತಿಯು ೨೫೦ ವರ್ಷಗಳಷ್ಟು ಹಳೆಯದು.

೨. ಪ್ರತಿ 'ಆ':- ೨೦x೧೪ ಸೆಂ.ಮಿ. ಅಳತೆಯ ಕಾಗದ, ಪುಟ ಸಂಖ್ಯೆ ಇಲ್ಲ. ಮೊದಲಿನ ಹಾಗೂ ಕೊನೆಯ ಕೆಲವು ಪುಟಗಳು ಹರಿದಿವೆ. ಲಿಪಿ ದೇವನಾಗರಿ ಸ್ಪಷ್ಟ ಅಕ್ಷರಗಳು.

ಹಸ್ತಪ್ರತಿಯಲ್ಲಿ ಕನ್ನಡ, ಮರಾಠಿ, ಹಿಂದಿ ಭಾಷೆಗಳ ಒಟ್ಟು ೧೨೯ ಪದಗಳಿವೆ. ಅಲ್ಲದೆ 'ತಂದೆ ಮಹಿಪತಿ' ಕೃತ ಸಿರಿಯಾಳ ಸೆಟ್ಟಿ ಕಥಾದ ಹತ್ತು ಪದಗಳು, 'ಗುರು ಕೃಷ್ಣ' ಅಂಕಿತದ ಲವಕುಶ ಕಥಾ, ಬಭ್ರುವಾಹನ ಕಥಾ ಮತ್ತು ದಾನ ವ್ರತಾ ಕಥಾ ಆಖ್ಯಾನಗಳಿವೆ. ಮುದ್ರಿಕೆ ಸ್ಪಷ್ಟವಾಗಿ ಇಲ್ಲದ ಬಹುಶಃ 'ಕೃಷ್ಣ' ಎಂಬುವನು ಬರೆದ ಮರಾಠಿ ಕೃಷ್ಣ ಕಥಾಮೃತ ಇದೆ.

ಕೀರ್ತನೆಗಳಲ್ಲಿ 'ಮಹಿಪತಿ' 'ಮಹಿಪತಿಸುತ' 'ಗುರು ಮಹಿಪತಿ' 'ಬಾಬಾ

ಮಹಿಪತಿ ಪ್ರಭು' 'ಗುರುಕೃಷ್ಣ' 'ಗಿರಿಧರ' 'ಚಿನ್ನ ಕೃಷ್ಣ' ಹಾಗೂ 'ಭೂದೇವ ವಿಠಲ' ಅಂಕಿತದ ಕನ್ನಡ ಕೃತಿಗಳು ಮತ್ತು ವಾಮನ, ಚಿಂತಾಮಣಿ, ಉದ್ಧವ ಚಿದ್ಘನ, ಗೋವಿಂದ, ನೀಲಕಂಠ ಮತ್ತು ಶಿವರಾಮ ಅಂಕಿತದ ಮರಾಠಿ ಪದಗಳು ಇವೆ. ಗುರುವರ ಕೃಷ್ಣಪ್ರಭು, ಅಮೃತರಾಯ ಪ್ರಭು ಅಂಕಿತದ ಹಿಂದಿ ಕೃತಿಗಳು, 'ಗೋವಿಂದಸೂನು' ಅಂಕಿತದ ಒಂದು ಸಂಸ್ಕೃತ ಕೃತಿಯೂ ಇದೆ.

ಹಸ್ತಪ್ರತಿಯಲ್ಲಿ ಕಾಲ ನಿರ್ದೇಶನದ ಉಲ್ಲೇಖವಿಲ್ಲ. ಬರವಣಿಗೆಯ ರೀತಿ, ಹಾಗೂ ಅಕ್ಷರಗಳು 'ಅ' ಪ್ರತಿಗೆ ಹೋಲುವದರಿಂದ ಇದು ಕೂಡ ಬಹುಶಃ ಯತಿರಾಯರ ಸಂಗ್ರಹ ಇರಬೇಕು. ಸುಮಾರು ೨೫೦ ವರುಷಗಳಷ್ಟು ಹಳೆಯ ಹಸ್ತಪ್ರತಿ.

೩. ಪ್ರತಿ 'ಇ':- ೩೦x೨೪ ಸೆಂ.ಮಿ. ಉದ್ದಗಲತೆಯ ಕಾಗದಗಳ ದಪ್ಪ ಪುಸ್ತಕ. ಪುಟಗಳ ಸಂಖ್ಯೆ ಇಲ್ಲ. ಒಟ್ಟು ೨೨೦ ಪುಟಗಳು (ಪಾನಿಗೆ ಒಂದರಂತೆ) ಇವೆ. ಮೊದಲಿನ, ಕೊನೆಯ ಹಾಗೂ ಮಧ್ಯದ ಕೆಲವು ಪುಟಗಳು ಹರಿದಿವೆ. ಲಿಪಿ ದೇವನಾಗರಿ, ಕರಿ ಹಾಗೂ ಜಾಂಭಳಿ ಬಣ್ಣದ ಮಸಿಯ ಸ್ಪಷ್ಟ ಅಕ್ಷರಗಳು, ನಾಲ್ಕೈದು ಜನರ ಕೈಬರಹ.

ಮಹಿಪತಿರಾಯರ ೮ ಆರತಿ ಪದಗಳು, ಮಹಿಪತಿ ನಂದನ, ಗಿರಿಧರಜ, ಅವರ ಕೃತಿಗಳೂ ಇವೆ. ಕನಕದಾಸರ ಹರಿಭಕ್ತಿ ಸಾರ, ವಿಜಯ ವಿಠಲರ ಒಂದು ಕೃತಿ, ಜಗನ್ನಾಥದಾಸರ ನವರತ್ನ ಮಾಲಿಕಾಸ್ತೋತ್ರ, ವೈಕುಂಠ ಪತಿ ವಿಠಲರ ಗಜೇಂದ್ರ ಮೋಕ್ಷ, ಕಟ್ಟಿ ವೆಂಕಟೇಶರ ಅಜಮಿಳೋದ್ಧಾರಗಳೂ ಇವೆ. ಭಗವದ್ಗೀತೆಯ ಮೊದಲ ಅಧ್ಯಾಯದ ೭ ಶ್ಲೋಕಗಳಿಗೆ ಕನ್ನಡ ಟೀಕು ಇದೆ.

ಹಸ್ತಪ್ರತಿಯ ವಿಶೇಷವೆಂದರೆ, ಕೃಷ್ಣರಾಯರು ಬರೆದ ಭಾವಾರ್ಥರಾಮಾಯಣ ಕಾವ್ಯವು ಸಂಪೂರ್ಣವಾಗಿ ೯ ಕಾಂಡಗಳಲ್ಲಿ ದೊರೆಯುತ್ತದೆ. ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರ ಕಾಂಡ, ಯುದ್ಧಕಾಂಡ, ಅಹಿರಾವಣ -ಮಹಿರಾವಣ ಕಥಾ, ಶ್ರೀರಾಮ ಪಟ್ಟಾಭಿಷೇಕ ಮತ್ತು ಸೀತಾ ಅಗ್ನಿ ಪ್ರವೇಶ ಇವುಗಳು ೯ ಕಾಂಡಗಳು. ಈವರೆಗೆ ಅಪ್ರಕಟಿತ ಕಾವ್ಯ. ಜೊತೆಗೆ, ಅವರೇ ಬರೆದ ಪ್ರಲ್ಹಾದ ಚರಿತ್ರೆ. ಶ್ರವಣಕುಮಾರಕಥೆ, ವಾಮನಚರಿತ್ರೆ, ಕಾಳಿಯಾಮ್ಮರದ ಚರಿತ್ರೆ, ಸುದಾಮ ಚರಿತ್ರೆ ಮತ್ತು ಗಜೇಂದ್ರಮೋಕ್ಷ ಆಖ್ಯಾನಗಳೂ ಇವೆ. 'ಗುರುವರ ಗಿರಿಧರತರಳ' ವಿರಚಿತ ಮಹಿಷಾಸುರ ಮರ್ದಿನಿ ಕಥಾ, ಶುಂಭ ನಿಶುಂಭ ಕಥಾ ಮತ್ತು ಕಾರ್ತ್ಯವೀರ್ಯಾರ್ಜುನ ಕಥಾ ಆಖ್ಯಾನಗಳೂ ಇವೆ.

'ಮಹಿಪತಿಸುತ' ಅಂಕಿತ ಕೃಷ್ಣಚರಿತ್ರೆ, ಭಾಗವತ ದಶಮಸ್ಕಂದದ ಶ್ರೀಕೃಷ್ಣನ ಬಾಲಲೀಲೆಯವರೆಗಿನ (ಕಂಸಮರ್ದನ ವರೆಗೆ) ಕಥೆ ಪದ್ಯರೂಪದಲ್ಲಿದೆ.

ಅಲ್ಲಲ್ಲಿ ಕಾಣುವ 'ಶ್ರೀದತ್ತ ಭಾಸ್ಕರ ಮಹೀಪತಿ ಕೃಷ್ಣಮೂರ್ತಿ ರಾಮೇಭ್ಯೋ ನಮಃ' ಎಂಬ ಸ್ವಸ್ತಿ ಲೇಖನ, ಹಾಗೂ ಕೃಷ್ಣ ಚರಿತ್ರೆಯ ಮೊದಲು ಬರುವ ಐದು ಧ್ಯಾನಶ್ಲೋಕಗಳು ರಾಯರ ಮನೆತನದ ಗುರು ಪರಂಪರೆ ಹಾಗೂ ಸಂಪ್ರದಾಯವನ್ನು ಗುರುತಿಸುವಲ್ಲಿ ಸಹಕಾರಿಯಾಗುತ್ತದೆ.

'ದತ್ತಾತ್ರೆಯ ಮಹಂ ವಂದೇ ಅನಸೂಯಾ ಕರೋದ್ಭವಂ।
ಸ್ಮರಣಾನ್ಮುಕ್ತಿದಾತಾರಂ ಮಾಹುರ್ಯಗನಿವಾಸಿನಂ ।।೧।।
ಅಜ್ಞಾನಾಂಧಶ್ಚಂ ...... ಪ್ರಭಾಕರ ವಿಮೋಜ್ವಲಂ ।
ಭಕ್ತಾರ್ಣವ ರೋಪಧೀಶಂ ವಂದೇಹಂ ಭಾಸ್ಕರಗುರುಂ ।। ೨।।
ಭಾಸ್ಕರಾಖ್ಯ ಗುರುಕರೋದ್ಭವಂ ಯೋಗೇಶ್ವರಂ ಪರಂ ।
ಅರ್ಥಾನಾಮರ್ಥ ಫಲದಂ ಪ್ರಣಮಾಮಿ ಮಹೀಪತಿಂ ।। ೩।।
ಭಜಾಮಿ ಕೃಷ್ಣರಾಜಾನಂ ಭೂಪತೇಸ್ತನೂಜಂ ವಿಭು।
ಜ್ಞಾನೋಪದೇಶ ಕರ್ತಾರಂ ಸರ್ವದಾನ್ಸರೂಪಿಣಂ ।। ೪।।
ಏತೇ ದಿವಾಕರ ಮಹಿಪತಿ ಕೃಷ್ಣಾಶ್ಚ ಸಾಧವಃ !
ಅವಂತು ಸ್ಮರಣಾದಸ್ಮಾನ್ಭವ ಸಾಗರ ತಾರಕಾಃ ।। ೫।।

ಭಾಸ್ಕರ ಸ್ವಾಮಿ, ಮಹಿಪತಿರಾಯರು ಹಾಗೂ ಕೃಷ್ಣರಾಯರನ್ನು 'ಸಾಧವಃ' ಎಂದು ಸಂಬೋಧಿಸಿ, ಅವರ ಸ್ಮರಣೆ 'ಭವಸಾಗರ ತಾರಕ' ಎಂಬುದು ವಿಶೇಷವಾಗಿದೆ.

ಕೃಷ್ಣ ಚರಿತ್ರೆಯ ಐದನೆಯ ನುಡಿಯು ಮಹಿಪತಿರಾಯರ ರಾಜಯೋಗದ ಪರಿಯನ್ನು ವರ್ಣಿಸಿದರೆ, ಭಾವಾರ್ಥರಾಮಾಯಣದ ಐದನೆಯ ನುಡಿಯು ಅವರ ಪದ್ಧಿಯನ್ನು ಚಿತ್ರಿಸುತ್ತದೆ. ಇವೆರಡೂ ಕೃತಿಗಳಲ್ಲಿ ನಾಲ್ಕನೆಯ ನುಡಿಗಳು ಹನುಮಂತನ (ಪ್ರಾಣದೇವರ) ಸ್ಮರಣೆಗೆ ಮೀಸಲಾಗಿವೆ!

ಅಲ್ಲಲ್ಲಿ ಕಾಲ ನಿರ್ದೇಶನದ ಗುರುತುಗಳು ದೊರೆಯುತ್ತವೆ. ಭಾವಾರ್ಥ ರಾಮಾಯಣದ ಸೀತಾ ಸ್ವಯಂವರ ಕಥಾಸಮಾಪ್ತಿಯನ್ನು 'ಪಿಂಗಳ ನಾಮ ಸಂವತ್ಸರ ಚೈತ್ರ ಶುದ್ಧ ರಾಮನವಮಿ, ಸೌಮ್ಯವಾಸರೆ ವ್ರತಸಮಾಪ್ತಿ' ಎಂದು ಉಲ್ಲೇಖಿಸಿದೆ. ಮತ್ತೊಂದು ಪುಟದಲ್ಲಿ 'ಗೋವಿಂದಾಚಾರ್ಯರ ಕೈಯಲ್ಲಿ ಭಾಗವತ ದಶಮಸ್ಕಂದ ಕೊಟ್ಟ ಸಂಖ್ಯಾಯಷ್ಟು ಅಧ್ಯಾ(ಯ)ಯಂದರೆ ಸ್ಮರಣಾರ್ಥ ವಾಲಿ ೩೮, ಅಧ್ಯಾಯ ೧೪ ತಿಥಿ ಅಶ್ವೀನ ವದ್ಯ ಪಂಚಮಿ ರೋಜ ಶುಕ್ರವಾರ ಕೊಟ್ಟದೆ' ಎಂದು ಬರೆದಿದೆ. ಇವುಗಳು -ಸಂಗ್ರಹಕಾರನು ಬರೆದ ಕಾಲಮಿತಿಗಳಾಗಿದ್ದು ಕ್ರಮವಾಗಿ ಕ್ರಿ.ಶ. ೫-೪-೧೭೯೨ ಹಾಗೂ ೨೧-೧೦-೧೭೯೬ ನೆಯ ದಿನಗಳಿಗೆ ಸರಿಹೊಂದುತ್ತವೆ.

ಹಸ್ತಪ್ರತಿಯು ಸುಮಾರು ೨೦೦ ವರ್ಷಗಳಷ್ಟು ಹಳೆಯದು.

೪. ಪ್ರತಿ'ಈ':- ೨೮x ೨೬ ಸೆಂ.ಮಿ. ಉದ್ದಳತೆಯ ಕಾಗದದ ಪುಸ್ತಕ. ಉಣ್ಣೆಯ ಬಟ್ಟೆಯ ಮೇಲು ಹೊದಿಕೆ. ಮೊದಲಿನ ಹಾಗೂ ಕೊನೆಯ ಅನೇಕ ಪುಟಗಳು ಹರಿದು ಹೋಗಿವೆ. ಉಳಿದದ್ದು ೧೫೦ ಪುಟಗಳು. ಲಿಪಿ ದೇವನಾಗರಿ ಅಕ್ಷರಗಳು ಸುಂದರವಾಗಿಲ್ಲದಿದ್ದರೂ ಸ್ಪಷ್ಟವಾಗಿವೆ.

ಸಂಗ್ರಹದಲ್ಲಿ ದೊರೆಯುವ ಒಟ್ಟು ೨೦೬ ಪದಗಳಲ್ಲಿ ಮಹಿಪತಿರಾಯರ ೧೬೧ ಕೃತಿಗಳಿವೆ. ಅವರ ಅಪ್ರಕಟಿತ ಒಂದು ವಚನವೂ ಇದೆ. ಉಳಿದವುಗಳಲ್ಲಿ ತಂದೆ ಮಹಪತಿ, ಗುರುಮಹಿಪತಿಸ್ವಾಮಿ ರಾಮಚಂದ್ರಪ್ರಿಯ, 'ಗಿರಿಧರಸುತ, ಗುರುಕೃಷ್ಣ, ಪುರಂದರ ವಿಠಲ, ವಿಜಯವಿಠಲ, ಗೋಪಾಲ ವಿಠಲ, ರಘುಪತಿವಿಠಲ ಅಂಕಿತಗಳ ಹಾಗೂ ಅಂಕಿತವಿಲ್ಲದ ಕೀರ್ತನೆಗಳಿವೆ.

ಮಹಿಪತಿರಾಯರ 'ಕೊರವಂಜಿ ಪದ' ಪ ನಕಲಿನ ಅನಂತರ 'ರಾಕ್ಷಸಾಖ್ಯ ವತ್ಸರೆ, ಅಶ್ವೀಜ ದಕ್ಷಿಣಾಯನೇ ತೃತೀಯ ಕುಜವಾಸರೆ ಕೊರವಂಜಿ ಪದ ಸಮಾಪ್ತ' ಎಂದೂ ಅದರ ಅಡಿಯಲ್ಲಿ 'ಇದಂ ಪುಸ್ತಕಂ ಜಾಲವಾದಿ ಗ್ರಾಮದಲ್ಲಿ ಶ್ರೀ ಗುರುಮಹೀಪತಿ, ವಂಶ ಉದ್ಭವೀಕರಾದ ಗುರುರಾವ ಶ್ರೀನಿವಾಸ ನಾಯಕ ಚೌಧರಿ ಇವರು ಬರೆದು ಹಣಮಂತ ಶ್ರೀನಿವಾಸ ಹತ್ತರಕಿಹಾಳ ಇವರಿಂದ ಶುದ್ಧಿಲ್ಪಟ್ಟ ಮಿತಿ ಶ್ರಾವಣ ಶುದ್ಧ।। ೭ ರವಿವಾರ ಅಂಗೀರಸ ಸಂವತ್ಸರ' ಎಂದು ನಮೂದಿಸಲಾಗಿದೆ. ಈ ದಿನಗಳು ಕ್ರಮವಾಗಿ ಕ್ರಿ.ಶ. ೧೭೯೫ ಹಾಗೂ ೧೮೧೨ಕ್ಕೆ ಸರಿಹೊಂದುತ್ತವೆ. ಬರೆಯುವದಕ್ಕೂ, ಶುದ್ಧೀಕರಿಸುವುದಕ್ಕೂ ಮಧ್ಯ ಸುಮಾರು ೧೭ ವರುಷಗಳಿರುವದು ಗಮನಾರ್ಹವಾಗಿದೆ.

ಹಸ್ತಪ್ರತಿಯು ಸುಮಾರು ೨೦೦ ವರುಷಗಳಷ್ಟು ಹಳೆಯದು.

೫ ಪ್ರತಿ 'ಉ':- ೫೦x೧೫ ಸೆಂ.ಮಿ. ಉದ್ದಳತೆಯ ಉದ್ದನ್ನ ಪುಸ್ತಕ ತುಂಬ ದುಸ್ಥಿತಿಯಲ್ಲಿದೆ. ಪುಟ ಸಂಖ್ಯೆ ಇದೆ. ಪಾನಿಗೆ ಒಂದರಂತೆ ೫೦ ಪುಟಗಳು ಲಭ್ಯ ಇವೆ. ಮೊದಲನೆಯ ಪುಟ ಅರ್ಧ ಹರಿದಿದೆ. ದೇವನಾಗರಿ ಲಿಪಿ ಸುಂದರ ಸ್ಪಷ್ಟ ಅಕ್ಷರಗಳು.

ಇದರಲ್ಲಿ ಕೀರ್ತನೆಗಳಿಲ್ಲ. ಮಹಿಪತಿರಾಯರ ಮಕ್ಕಳು ಮೊಮ್ಮಕ್ಕಳು ಬರೆದ ಈ ಮೊದಲು ಹೇಳಿದ ಕಾವ್ಯಗಳು -ಆಖ್ಯಾನಗಳು ಇವೆ. ದೊರೆಯುವ ಅಂಕಿತಗಳು ಗಿರಿಧರತನಯ, ಗುರುಕೃಷ್ಣಪ್ರಭು, ಶ್ರೀಪತಿಪ್ರಭು, ಗುರುಕೃಷ್ಣಕಂದ, ಗುರುಮಹಿಪತಿ ಇತ್ಯಾದಿ. ಆಖ್ಯಾನಗಳು - ಅಶ್ವಮೇಧ ಕಥಾ, ಸಪ್ತಸತಿ ಕಥಾ, ಬಭ್ರುವಾಹನ ಕಥೆ,

ತಾಮ್ರಧ್ವಜನ ಕಥೆ, ಭಾಗವತ ಕೃಷ್ಣ ಕಥಾ ಮತ್ತು ಭಾವಾರ್ಥ ರಾಮಾಯಣದ ಆರು ಕಾಂಡಗಳು.

ಬಭ್ರುವಾಹನ ಕಥೆಯ ಕೊನೆಯಲ್ಲಿ ಕಾಲ ಸೂಚಿ ಇದೆ ಹಸ್ತಪ್ರತಿಯು ಕ್ರಿ.ಶ. ೧೮೫೮ರದ್ದು.

೬. ಪ್ರತಿ 'ಊ':- ೧೫x ೨೦ ಸೆಂ.ಮಿ. ಉದ್ದಳತೆಯ ಕಾಗದದ ಪುಸ್ತಕ ತುಂಬ ಹರಿದಿದೆ. ಮೊದಲಿನ ಕೆಲವು ಪುಟಗಳಿಲ್ಲ. ದೇವನಾಗರಿ ಲಿಪಿ. ಮಹಿಪತಿಸುತ ಹಾಗೂ ಗುರುಕೃಷ್ಣರ ಕೆಲವು ಆಖ್ಯಾನಗಳಿವೆ. ಕಾಲ ನಿರ್ದೇಶನವಿಲ್ಲ. ಸುಮಾರು ೧೫೦ ವರುಷಗಳಷ್ಟು ಹಳೆಯದಾದ ಹಸ್ತಪ್ರತಿ.

೭. ಪ್ರತಿ 'ಎ':- ೨೬x ೨೦ ಸೆಂ.ಮಿ.ಉದ್ದಳತೆಯ ಕಾಗದದ ಕಡತ, ಸುಸ್ಥಿತಿಯಲ್ಲಿದೆ. ಪುಟ ಸಂಖ್ಯೆ ಇಲ್ಲ. ಮೊದಲಿನ ಕೆಲವು ಪುಟಗಳು ಹರಿದಿವೆ. ಉಳಿದದ್ದು ೪೦ ಪುಟಗಳು. ದೇವನಾಗರಿ ಲಿಪಿ. ಒಟ್ಟು ದೊರೆಯುವ ೬೨ ಪದಗಳಲ್ಲಿ ೧೦ ಮಹಿಪತಿರಾಯರು ರಚಿಸಿದವುಗಳು. ಕಾಲಸೂಚಿ ನಿರ್ದೇಶನವಿಲ್ಲ. ೧೫೦ ವರುಷ ಹಳೆಯ ಹಸ್ತಪ್ರತಿ.

೮. ಪ್ರತಿ 'ಏ':-೩೦x೧೪ ಸೆಂ.ಮಿ. ಉದ್ದಳತೆಯ ಕಾಗದದ ಪುಸ್ತಕ. ತುಂಬ ಹರಿದಿದೆ. ೫೬ ಪುಟಗಳು ಲಭ್ಯ. ದೇವನಾಗರಿ ಲಿಪಿ. ಅಕ್ಷರಗಳು ಸಂದಿಗ್ಧ, ಕೆಲವಡೆ ಅಶುದ್ಧ. ಗುರುಮಹಿಪತಿ ಕೃತ ರಾಮಾಯಣ (ಅಪೂರ್ಣ) ಹಾಗು ಗುರುಕೃಷ್ಣಜ ರಚಿತ ಬಭ್ರುವಾಹನ ಕಥೆಗಳು ಇವೆ. ಕಾಲ ನಿರ್ದೇಶನ ಇಲ್ಲ. ಹಸ್ತಪ್ರತಿ ಸುಮಾರು ಒಂದು ನೂರು ವರುಷಕ್ಕಿಂತ ಹಳೆಯದು.

೯. ಪ್ರತಿ 'ಐ':- ೪೬x೧೫ಸೆಂ.ಮಿ. ಉದ್ದಳತೆಯ ಅತಿ ಜೀರ್ಣಾವಸ್ಥೆಯ ಕಾಗದದ ವಹಿ. ಪುಟ ಸಂಖ್ಯೆ ಇಲ್ಲ. ೫೦ ಪಾನುಗಳು ಇವೆ. ದೇವನಾಗರಿ ಲಿಪಿ. ಸ್ಪಷ್ಟ ಅಕ್ಷರಗಳು.

ಮಹಿಪತಿರಾಯರ ೫ ಕನ್ನಡ -ಮರಾಠಿ ಪದಗಳಿವೆ. ಉಳಿದದ್ದು, ಅಹಿರಾವಣ ಚರಿತ್ರೆ, ಸೀತಾ ಸ್ವಯಂವರ, ಸಿರಿಯಾಳ ಸೆಟ್ಟಿಕಥೆ, ಬಭ್ರುವಾಹನ ಕಥೆ, ಮಾರ್ಕಂಡೇಯ ಚರಿತ್ರೆಗಳು. ಇವುಗಳಲ್ಲಿ ಕೆಲವು ಅಪೂರ್ಣ ಗುರುಕೃಷ್ಣರ ಮರಾಠಿ ಪದಗಳು. ಅಪೂರ್ಣ ರಾಮಾಯಣ ಗಮನಾರ್ಹ. ಚಿದಾನಂದನ 'ಮಾಡಿದಯೆನ್ನ ಫಕೀರ' ಒಂದು ಪದ. ಮುಕ್ತೇಶ್ವರನ ಮರಾಠಿ ರಾಮಾಯಣದ ೨೫ ಪದಗಳು ವಿಶೇಷ. ಕಾಲಸೂಚಿಯ ಸ್ಪಷ್ಟ ಉಲ್ಲೇಖವಿಲ್ಲ. ಅಹಿರಾವಣ ಕಥೆಯ ಕೊನೆಗೆ

'ದೇವೆರಾಜ ಸುತ ಲಕ್ಷ್ಮೀಪತಿ ನಾಮಕಾನೆ ಇದಂ ಚರಿತ್ರಂ ... ಲಿಖಿತಂ....' ಇತ್ಯಾದಿ ಉಲ್ಲೇಖ ಹಸ್ತಪ್ರತಿಯು ಸುಮಾರು ಎರಡುನೂರು ವರುಷಗಳಷ್ಟು ಹಳೆಯದು.

೧೦. ಪ್ರತಿ 'ಓ':- ೨೨x೧೬ ಸೆಂ.ಮಿ. ಉದ್ದಳತೆಯ ತೀರ ಇತ್ತೀಚಿನ ಕಾಗದದ ಪುಸ್ತಕ ನೀರು ಬಿದ್ದು ಓದಲಾಗದಷ್ಟು ದುರವಸ್ಥೆ. ದೇವನಾಗರಿ ಲಿಪಿ. ಸ್ವಚ್ಛ ಸುಂದರ ಅಕ್ಷರಗಳು. ಮಹಿಪತಿರಾಯರ ಸುಮಾರು ಹತ್ತು ಕೃತಿಗಳನ್ನು ಗುರುತಿಸಬಹುದು. ಕಾಲನಿರ್ದೇಶನವಿಲ್ಲ.

೧೧. ಪ್ರತಿ 'ಓ':- ೨೦x ೧೪ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಪುಸ್ತಕ. ಪುಟಸಂಖ್ಯೆ ಇದೆ. ಪಾನಿಗೆ ಒಂದರಂತೆ ೧ ರಿಂದ ೪೦ ಪುಟಗಳು, ದೇವನಾಗರಿ ಲಿಪಿ. ಶುದ್ಧ ಸ್ಪಷ್ಟ ಅಕ್ಷರಗಳು.

ಗುರುಮಹಿಪತಿ ಕೃತ ಭಾವಾರ್ಥ ರಾಮಾಯಣದ ಏಳು ಕಾಂಡಗಳು ಉಪಲಬ್ಧ. ಗುರುಕೃಷ್ಣರ ಕೆಲವು ಪದಗಳು. 'ಭೀಮಸೇನ ವಿಲಾಸ'ದ ೫ ಪದಗಳು ಅಲ್ಲದೆ ಪುರಂದರ ವಿಠಲ, ಹಯವದನ, ವಿಜಯವಿಠಲ, ಜಗನ್ನಾಥ ವಿಠಲ, ಗೋಪಾಲ ವಿಠಲ, ಪ್ರಸನ್ವೆಂಕಟ ಹಾಗೂ ಪ್ರಾಣೇಶ ವಿಠಲರ ಕೆಲವು ಕೃತಿಗಳು. ವಾಲ್ಮೀಕಿ ರಾಮಾಯಣದ ಕೆಲವು ಶ್ಲೋಕಗಳು. ಸಂಸ್ಕೃತದ ಕೆಲವು ಸುಭಾಷಿತಗಳೂ ಉಂಟು. ಭಾವಾರ್ಥ ರಾಮಾಯಣದ ಮೊದಲಿನ ಏಳು ಸ್ತುತಿ ಪದ್ಯಗಳು - ಗಣಪತಿ, ಶಾರದೆ, ಸಚ್ಚಿದಾನಂದ, ಹಣಮಂತ ಹಾಗೂ ಮಹಿಪತಿಗಳ ಕುರಿತು ವಿಶೇಷ ಉಲ್ಲೇಖಾರ್ಹವಾಗಿದೆ. ಕಾಲಸೂಚಿ ನಿರ್ದೇಶನವಿಲ್ಲ. ೧೫೦ ಕ್ಕೂ ಹೆಚ್ಚು ವರುಷಗಳ ಹಳೆಯ ಪ್ರತಿ.

೧೨. ಪ್ರತಿ 'ಔ':- ೨೬x೧೬ ಸೆಂ.ಮಿ. ಉದ್ದಳತೆಯ ತೀರ ಇತ್ತೀಚಿನ ವಹಿ. ನೀರು ಬಿದ್ದು ಹಾಳಾಗಿದೆ. ಮಹಿಪತಿ, ಗುರುಮಹಿಪತಿ ಕೃತ ಕೆಲವು ರಚನೆಗಳನ್ನು ಓದಬಹುದು.

೧೩. ಪ್ರತಿ 'ಕ':- ೧೬x ೧೪ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಹಸ್ತಪ್ರತಿ ಪುಟಸಂಖ್ಯೆ ಇಲ್ಲ. ೨೦ ಪುಟಗಳು ಲಭ್ಯ. ದೇವನಾಗರಿ ಲಿಪಿ, ಭಿನ್ನ ಅಕ್ಷರಗಳು, ಮಹಿಪತಿ, ಮಹಿಪತಿನಂದನರ ಕೆಲವು ಕೃತಿಗಳು.

೧೪. ಪ್ರತಿ 'ಖ':- ಡೆಮಿ ಅಷ್ಟಪತ್ರ, ಇತ್ತೀಚಿನ ಕಾಗದ ೪೦ ಪುಟಗಳಲ್ಲಿ ಅರ್ಧ ದೇವನಾಗರಿ ಅರ್ಧ ಕನ್ನಡ ಲಿಪಿ. ಹೆಳವನಕಟ್ಟೆ ರಂಗ ಅಂಕಿತದ ಕೊರವಂಜಿ ಪದ ಹಾಗೂ ಉಳಿದ ದಾಸರ ಕೃತಿಗಳು.

೧೫. ಪ್ರತಿ 'ಗ':- ೨೦x ೧೬ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಹಸ್ತಪ್ರತಿ. ಪುಟಸಂಖ್ಯೆ ಇಲ್ಲ. ೨೦ ಪಾನುಗಳು ಲಭ್ಯ. ದೇವನಾಗರಿ ಲಿಪಿ. ಅಸ್ಪಷ್ಟ ಅಕ್ಷರಗಳು. ಮಹಿಪತಿರಾಯರ ಅವರ ಮಕ್ಕಳ ಹಾಗೂ ಪುರಂದರದಾಸರ ಕೆಲವು ಪದಗಳು. ಕಾಲಸೂಚಿ ನಿರ್ದೇಶನವಿಲ್ಲ. ಕೊನೆಯ ಪುಟದಲ್ಲಿ ಮೋಡಿ ಅಕ್ಷರಗಳಲ್ಲಿ ಹರಿದಾಸ ವೆಂಕಪ್ಪಯ್ಯ ಎಂದು ಹೆಸರು. ಅಲ್ಲದೆ ಮಹಿಪತಿರಾಯರ ವೃಂದಾವನ, ಶಂಖ, ಚಕ್ರಗಳ ಚಿತ್ರ. ೧೫೦ ವರುಷಗಳಷ್ಟು ಹಳೆಯದು.

೧೬. ಪ್ರತಿ 'ಚ':- ೨೦x೧೬ ಸೆಂ.ಮಿ. ಉದ್ದಳತೆಯ ಇತ್ತೀಚಿನ ಕಾಗದಗಳ ವಹಿ. ನೀರು ಬಿದ್ದು ಹಾಳಾಗಿದೆ. ಮಹಿಪತಿ, ಗುರುಮಹಿಪತಿ, ಗುರುಕೃಷ್ಣ ಮುದ್ರಿಕೆಯ ಕನ್ನಡ, ಮರಾಠಿ ಭಾಷೆಯ ಕೆಲವು ಕೀರ್ತನೆಗಳನ್ನು ಗುರುತಿಸಬಹುದು.

೧೭. ಪ್ರತಿ 'ಛ':- ೨೦x೧೪ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಕಟ್ಟು. ಪುಟ ಸಂಖ್ಯೆ ಇಲ್ಲ. ದೇವನಾಗರಿ ಲಿಪಿ. ಸ್ವಚ್ಛ ಅಕ್ಷರಗಳು, ಮಹಿಪತಿ, ಗುರುಮಹಿಪತಿ, ಗೋಪಾಲ ವಿಠಲರ ಕೃತಿಗಳು. ಗುರುಮಹಿಪತಿಕೃತ ಕಂಸಮರ್ದನ ಆಖ್ಯಾನ ಪೂರ್ತಿ ಇದೆ. ಸುಮಾರು ೧೨೦ ವರುಷಗಳಷ್ಟು ಹಳೆಯ ಹಸ್ತಪ್ರತಿ.

೧೮. ಪ್ರತಿ 'ಜ':- ೨೦x ೧೩ ಸೆಂ.ಮಿ. ಉದ್ದಳತೆಯ ಹಳೆಯ ಕಾಗದದ ಹಸ್ತಪ್ರತಿ. ೨೦ ಪುಟಗಳವರೆಗೆ ಪಾನಿಗೆ ಒಂದರಂತೆ ಪುಟಸಂಖ್ಯೆ ಇದೆ. ದೇವನಾಗರಿ ಲಿಪಿ ಸ್ಪಷ್ಟ ಅಕ್ಷರ. 'ಮಹಿಪತಿ' ಅಂಕಿತದ ೪ ಕೀರ್ತನೆಗಳು. ಉಳಿದವುಗಳಲ್ಲಿ 'ಗುರುಮಹಿಪತಿ' 'ಗುರುಕೃಷ್ಣ' ಅಭಿನವಜನಾರ್ಧನ ವಿಠಲ ಹಾಗೂ 'ಹಳ್ಳೂರೇಶ' ಮುದ್ರಿಕೆಯ ೨೦ ಕೀರ್ತನೆಗಳು, ಕೃಷ್ಣರಾಯರ ೩೩ ಪಟ್ಟಪದಿಗಳು ವಿಶೇಷ. ೧೫೦ ವರುಷಗಳಷ್ಟು ಹಳೆಯ ಹಸ್ತಪ್ರತಿ.

೧೯. ಪ್ರತಿ 'ಝ':- ೨೦x೧೦ ಸೆಂ.ಮಿ. ಅಳತೆಯ ಚಿಕ್ಕ ಹಸ್ತಪ್ರತಿ. ಪುಟ ಸಂಖ್ಯೆಗಳಿಲ್ಲ. ೪೦ ಪುಟಗಳು. ದೇವನಾಗರಿ ಲಿಪಿ. ಇಬ್ಬರು ಮೂವರ ಕೈ ಬರಹ ತುಕಾರಾಮನ ಅಭಂಗಗಳು ಕೆಲವು 'ಮಹಿಪತಿ' 'ಗುರುಮಹಿಪತಿ' ಅಂಕಿತದ ಕೀರ್ತನೆಗಳು. ಕಾಲಸೂಚಿ ನಿರ್ದೇಶನವಿಲ್ಲ. ಸುಮಾರು ೧೫೦ ವರುಷಗಳಷ್ಟು ಹಳೆಯ ಹಸ್ತಪ್ರತಿ.

೨೦. ಪ್ರತಿ 'ಟ':- ೨೫x೨೦ ಸೆಂ.ಮಿ. ಉದ್ದಳತೆಯ ಹಳೆಯ ಕಾಗದಗಳ ಹಸ್ತಪ್ರತಿ. ಮೇಲು ಹೊದಿಕೆ ಕೃಷ್ಣಾಜಿನದಿಂದ ಗಟ್ಟಿಮುಟ್ಟಾಗಿ ಕಟ್ಟಿದೆ. ಪಾನಿಗೆ ಒಂದರಂತೆ ೧೩೦ ಪುಟಗಳ ಸಂಖ್ಯೆ ದೇವನಾಗರಿ ಲಿಪಿ. ಸುಂದರ ಅಕ್ಷರಗಳು.

ಒಟ್ಟು ದೊರೆಯುವ ೨೭೮ ಕೀರ್ತನೆಗಳಲ್ಲಿ ಸಿಂಹಪಾಲು ಕೃಷ್ಣರಾಯರ (ಗುರು ಮಹಿಪತಿ) ಕೃತಿಗಳು. ಮಹಿಪತಿರಾಯರ ೫೮ ಕೃತಿಗಳು ಉಂಟು. ಅಲ್ಲದೆ ಗುರುಕೃಷ್ಣ, ಗಿರಿಧರಸುತ, ಪುರಂದರದಾಸ ಪ್ರಸನ್ವೆಂಕಟ, ವಿಜಯ ವಿಠಲ, ಗೋಪಾಲ ವಿಠಲ, ಜಗನ್ನಾಥ ವಿಠಲರ ಕೃತಿಗಳಿವೆ. ಜೊತೆಗೆ ೧೨ ಉಗಾಭೋಗಗಳಿವೆ. ಅಚಲಾನಂದ (೨), ಪುರಂದರ (೧೦), ವೈಕುಂಠ (೧), ವಿಜಯ (೨) ಯೋಗೀಂದ್ರ (೧), ಹಾಗೂ ಮುದ್ದುವಿಠಲ (೧) ರ ಉಗಾಭೋಗಗಳು.

ಹಸ್ತಪ್ರತಿಯ ಅರ್ಧಕ್ಕಿಂತ ಹೆಚ್ಚುಭಾಗ ರಾಯಚೂರಿನ ಅಪರಾಳ ತಮ್ಮಣ್ಣನ ಶ್ರೀ ಕೃಷ್ಣ ಪಾರಿಜಾತದಿಂದ ತುಂಬಿದೆ. ಅಲ್ಲಲ್ಲಿ ಬರುವ ಕಾಲಸೂಚಿ ನಿರ್ದೇಶನಗಳಿಂದ ಮತ್ತು ಶ್ರೀ ಕೃಷ್ಣ ಪಾರಿಜಾತದ ಪೂರ್ತಿ ಪಾಠದಿಂದ ಅಪರಾಳ ತಮ್ಮಣ್ಣನ ಕಾಲ ನಿರ್ಣಯ ಹಾಗೂ ಶ್ರೀ ಕೃಷ್ಣ ಪಾರಿಜಾತದ ಪಾಠಾಂತರಕ್ಕೆ ಉಪಯುಕ್ತವಾದ ಹಸ್ತಪ್ರತಿ.

೯೬ನೇ ಪುಟದಲ್ಲಿ 'ನೆನೆದು ನಮಿಸುವೆನು ವಾರಂ ವಾರ' ಕೀರ್ತನೆಯ (ಮಹಿಪತಿ ಗುರು ಅಂಕಿತ) ಇನ್ನೊಂದು ಪಾಠವಿದೆ. ಕ್ರಿ.ಶ. ೧೮೨೮ರಲ್ಲಿ ಕಾಖಂಡಕಿ ವೆಂಕಟೇಶ ಎಂಬವರು ಹರಿಕಥೆ ಮಾಡುತ್ತ ಅಡ್ಡಾಡುವಾಗ ಸಂಗ್ರಹಿಸಿದ ಹಸ್ತಪ್ರತಿ.

೨೧. ಪ್ರತಿ 'ಠ':- ೩೦x೨೦ ಸೆಂ.ಮಿ. ಉದ್ದಗಲತೆಯ ಹಳೆಯ ಕಾಗದದ ಹಸ್ತಪ್ರತಿ. ಮೇಲು ಹೊದಿಕೆ ಕೃಷ್ಣಾಜಿನದ್ದು, ಗಟ್ಟಿಮುಟ್ಟಾಗಿ ಕಟ್ಟಲಾಗಿದೆ. ಪುಟ ಸಂಖ್ಯೆ ಇದೆ. ಮೊದಲನೆಯ ಪುಟ ಇಲ್ಲ. ಎರಡನೆಯ ಪುಟದಿಂದ ೬೬ನೆಯ ಪುಟದವರೆಗೆ ಪುಟ ಸಂಖ್ಯೆ ಇದೆ. ಮುಂದಿನ ೯ ಪುಟಗಳಿಗೆ ಪುಟಸಂಖ್ಯೆ ಇಲ್ಲ. ಇನ್ನು ಕೆಲವು ಪುಟಗಳು ಹರಿದು ಹೋಗಿರುವ ಸಂಭವ ಇದೆ. ದೇವನಾಗರಿ ಲಿಪಿ. ಕರಿ ಮಸಿಯಲ್ಲಿ ಬರೆದ ಸ್ಫುಟವಾದ ಅಕ್ಷರಗಳು.

ಈ ಸಂಗ್ರಹದಲ್ಲಿ ಮಹಿಪತಿರಾಯರ ೫೦೬ ಪದಗಳು ಒಂದೆಡೆಯಲ್ಲಿ ದೊರೆಯುತ್ತವೆ. ಇಲ್ಲಿಯ ಬಹುತೇಕ ಪದಗಳೆಲ್ಲ ಮೈಸೂರು ವಿಶ್ವವಿದ್ಯಾಲಯದ ಸಂಗ್ರಹದಲ್ಲಿ ಪ್ರಕಟವಾಗಿವೆ. ಕೆಲವು ಕೃತಿಗಳು ಎಲ್ಲಿಯೂ ಉದ್ಧೃತವಾಗಿಲ್ಲ. ಪಾಠಾಂತರ ಹಾಗೂ ಹೆಚ್ಚಿನ ಅಭ್ಯಾಸಕ್ಕೆ ಉಪಯುಕ್ತವಾದ ಹಸ್ತಪ್ರತಿ.

ಕಾಲನಿರ್ದೇಶನದ ಸೂಚಿ ಇಲ್ಲ. ಸುಮಾರು ೨೦೦ ವರುಷಗಳಷ್ಟು ಹಳೆಯದಾದ ಹಸ್ತಪ್ರತಿ.

೨೨. ಪ್ರತಿ 'ಡ':- ೩೦x ೨೦ ·ಸೆಂ.ಮಿ. ಉದ್ದಗಲತೆಯ ಹಳೆಯ ಕಾಗದಗಳ

ಹಸ್ತಪ್ರತಿ. ಮೇಲು ಹೊದಿಕೆ ಇಲ್ಲ. ಪಾನಿಗೆ ಒಂದರಂತೆ ೩.೨ ಪುಟಗಳ ಸಂಖ್ಯೆ ಇದೆ. ಇದರಲ್ಲಿ ೨೧೦ ಕೃಷ್ಣರಾಯರ (ಮಹಿಪತಿಸುತ) ಪದಗಳಿವೆ. ೩೬ನೆಯ (ಪುಟಸಂಖ್ಯೆ ಇಲ್ಲ) ಪುಟದ ಬೆನ್ನಮೇಲೆ ಕ್ರಿ.ಶ. ೧೬೪೫ರಲ್ಲಿ ಜನಿಸಿದ ಅವಳಿಮಕ್ಕಳ ಜಾತಕ ಇದೆ. ಕೈಬರಹ 'ಠ' ಪ್ರತಿಯಂತಿದೆ. ಸುಮಾರು ೨೦೦ ವರುಷಗಳಷ್ಟು ಹಳೆಯ ಹಸ್ತಪ್ರತಿ.

೨೩. ಪ್ರತಿ 'ಪ':- ೨೦x ೧೬ ಸೆಂ.ಮಿ. ಉದ್ದಳತೆಯ ಹಸ್ತಪ್ರತಿ. ಪುಟ ಸಂಖ್ಯೆ ಇಲ್ಲ. ಮೊದಲಿನ ಕೆಲವು ಪುಟಗಳು ಹರಿದಿರುವ ಸಂಭವವಿದೆ. ದೇವನಾಗರಿ ಲಿಪಿ. ಅಸ್ಪಷ್ಟ ಅಕ್ಷರಗಳು. ಮಹಿಪತಿ, ಮಹಿಪತಿಸುತ, ಕೃಷ್ಣ ಅಂಕಿತದ ಕನ್ನಡ, ಮರಾಠಿ, ಹಿಂದಿ ಭಾಷೆಯ ಕೃತಿಗಳ ಸಂಗ್ರಹ. ಕಾಲಸೂಚಿ ನಿರ್ದೇಶನವಿಲ್ಲ. ಸುಮಾರು ೧೫೦ ವರುಷದ ಪ್ರತಿ.

೨೪. ಪ್ರತಿ 'ಫ':-೧೬x೧೪ ಸೆಂ. ಮಿ. ಉದ್ದಳತೆಯ ಚಿಕ್ಕ ಹಸ್ತಪ್ರತಿ. ಪುಟಸಂಖ್ಯೆ ಇಲ್ಲ. ೪೦ ಪುಟಗಳಿವೆ. ದೇವನಾಗರಿ ಲಿಪಿ ಸ್ವಚ್ಛ ಅಕ್ಷರಗಳು. ಮಹಿಪತಿ - ಗುರುಮಹಿಪತಿ ಅಂಕಿತದ ಕೃತಿಗಳ ಸಂಗ್ರಹ ಸುಮಾರು ೧೫೦ ವರುಷಗಳಷ್ಟು ಹಳೆಯ ಹಸ್ತಪ್ರತಿ.

೨೫. ಪ್ರತಿ 'ಬ':-೧೬ x೧೧ ಸೆಂ.ಮಿ. ಅಳತೆಯ ಕಿರುಪುಸ್ತಕ, ಪುಟ ಸಂಖ್ಯೆ ಇಲ್ಲ. ೫೦ ಪುಟಗಳು. ದೇವನಾಗರಿ ಲಿಪಿ. ಸ್ಪಷ್ಟ ಅಕ್ಷರಗಳು. 'ಗುರುಕೃಷ್ಣ' ವಿರಚಿತ 'ದಾನಾವರ್ತ ಕಥಾ' ಪೂರ್ತಿ ಇದೆ. ಕಾಲಸೂಚಿ ನಿರ್ದೇಶನವಿಲ್ಲ. ಹಸ್ತಪ್ರತಿ ಸುಮಾರು ೨೦೦ ವರುಷಗಳಷ್ಟು ಹಳೆಯದು.

ಹೀಗೆ ಈ ೨೫ ಹಸ್ತಪ್ರತಿಗಳೊಂದಿಗೆ ಸುಮಾರು ೫೦೦ ಬಿಡಿ ಕಾಗದಗಳೂ ದೊರೆತಿದ್ದು ಅವುಗಳಲ್ಲೂ ಹರಿದಾಸರ ಕೃತಿಗಳು ಉಂಟು.

## ೨.೨ ಇತರ ಹಸ್ತಪ್ರತಿಗಳು

ಈ ಹಸ್ತಪ್ರತಿಗಳ ವಿವರಗಳನ್ನು ಕೊಡುವ ಮುಖ್ಯ ಉದ್ದೇಶವೆಂದರೆ, ಮಹಿಪತಿರಾಯರ ಹಾಗೂ ಅವರ ಸಮಕಾಲಿನರ ಹಸ್ತಪ್ರತಿಗಳನ್ನು ಹುಡುಕುವಾಗ ಇವುಗಳು ದೊರೆತವು. ವಿಜಾಪುರ ಹಾಗೂ ಸುತ್ತಲಿನ ಪರಿಸರದಲ್ಲಿ ಮಹಿಪತಿರಾಯರ ಸಮಕಾಲೀನರು ರಚಿಸಿದ ಕೃತಿಗಳಲ್ಲದೆ ಇನ್ನು ಅನೇಕ ಹಳೆಯ ಹೊಸ ಸಾಹಿತ್ಯ ಇವುಗಳಲ್ಲಿ ದೊರೆಯುವುದು ವಿಶೇಷವಾಗಿದೆ. ಈ ಮೊದಲೆ (ಹಸ್ತಪ್ರತಿ 'ಟ') ಹೇಳಿದಂತೆ ಶ್ರೀಕೃಷ್ಣ ಪಾರಿಜಾತದ ಪೂರ್ತಿಪಾಠ ಅಭ್ಯಾಸಕ್ಕೆ ಅನುಕೂಲವಾಗುವಂತೆ,

ಕೆಲವು ಹಸ್ತಪ್ರತಿಗಳಲ್ಲಿ ಸಾವಿರಕ್ಕೂ ಮಿಕ್ಕಿ ಸರ್ವಜ್ಞನ ತ್ರಿಪದಿಗಳು, ಶರಣರ ವಚನಗಳು ಇರುವುದೂ ವಿಶೇಷವಾಗಿದೆ. ಆದ್ದರಿಂದ ದೊರೆತ ಎಲ್ಲ ಹಸ್ತಪ್ರತಿಗಳ ವಿವರವನ್ನು ಇಲ್ಲಿ ಕೊಡಲಾಗಿದೆ.

೨೬. ಪ್ರತಿ 'ಯ':-ಡೆಮಿ ಅಷ್ಟಪತ್ರ ಆಕಾರದ ಹಳೆಯ ಕಾಗದದ ಪುಸ್ತಕದಲ್ಲಿ ಪುಟಸಂಖ್ಯೆಗಳಿಲ್ಲ. ೧೦೧ ಪಾನುಗಳು ಲಭ್ಯ. ದೇವನಾಗರಿ ಲಿಪಿ.

ಈ ಸಂಗ್ರಹದಲ್ಲಿ ಮಹಿಪತಿರಾಯರ ಒಂದು ಕೃತಿ ಇದೆ. ಸರ್ವಜ್ಞನ ಸುಮಾರು ಒಂದು ಸಾವಿರದಷ್ಟು ತ್ರಿಪದಿಗಳಿವೆ. ಅಲ್ಲದೆ ಪ್ರಭುದೇವರು ಬಸವಣ್ಣ ಚೆನ್ನಬಸವಣ್ಣನವರ ವಚನಗಳೂ ಉಂಟು.

'ಶಿವರಾಮ' ಕೃತ 'ಸೋಮವಾರ ಶಿವಪೂಜಾ' ಮರಾಠಿಯಲ್ಲಿದೆ. 'ಬೋಧನ ಪ್ರಭು' ಅಂಕಿತದ ಸುಮಾರು ೨೦ ಪದಗಳು. ಅಲ್ಲದೆ ವಿವಿಧ ಸಂತರ ಮರಾಠಿ ಆಧ್ಯಾತ್ಮ ಗೀತೆಗಳಿವೆ. ಸುಮಾರು ೨೦೦ ವರುಷಗಳ ಹಳೆಯ ಹಸ್ತಪ್ರತಿ.

೨೭. ಪ್ರತಿ 'ರ':- ಡೆಮಿ ಅಷ್ಟಪತ್ರದ ಕೋರಿ ಕಾಗದದ ಪುಸ್ತಕ ವೊದಲಿನ ಹಾಗೂ ಕೊನೆಯ ಪುಟಗಳು ಇಲ್ಲ. ೧೦೦ ಪುಟಗಳು ಲಭ್ಯ. ದೇವನಾಗರಿ ಲಿಪಿ.

ಸಿಂದಗಿಯ ಜಕ್ಕಪ್ಪಯ್ಯ (ಶಂಕರ -ಅಂಕಿತ) ವಿರಚಿತ 'ರಾಮಚಂದ್ರ ಅನುಸಂಧಾನ' ದ್ವಿಭಾಷಾ ಕಾವ್ಯ ಕನ್ನಡ -ಮರಾಠಿ ಭಾಷೆಗಳಲ್ಲಿ ರಚಿತವಾಗಿದೆ. ಸಿಂದಗಿಯ ಸಂಗಮನಾಥನ ಶರಣು ಪದವೂ ಇದೆ.

ಇವುಗಳ ಹೊರತಾಗಿ, ಹೆಳವನಕಟ್ಟೆ ಗಿರಿಯಮ್ಮನ ಕೃಷ್ಣ ಕೊರವಂಜಿ ಪದ ರಂಗ ವಿಠಲ, ಪ್ರಸನ್ನ ವೆಂಕಟ, ಹಾಗೂ ಮಧ್ವೇಶ ವಿಠಲರ ಕೃತಿಗಳು ದೊರೆಯುತ್ತವೆ.

ಮರಾಠಿಯಲ್ಲಿ ಏಕಾಜನಾರ್ದನಿ ಅಂಕಿತದ 'ಕೃಷ್ಣದಾನವೃತ', ಅಕ್ಷರ ಮಾಲಿಕೆ, ಆರತಿ ಪದಗಳು ಉಂಟು. ಮರಾಠಿ ಭಾಷೆಯಲ್ಲಿ ಪಾರಿಜಾತ ಕಥೆ ಇದೆ. ಶಂಕರಾಚಾರ್ಯರ ಸಂಸ್ಕೃತ ಶಿವಾಷ್ಟಕ, ಹರನಾಮಾವಳಿ, ಗುರುತಿಸಬೇಕಾದ ಕೆಲವು ಕನ್ನಡ ಮರಾಠಿ ಪದಗಳು.

ಸುಮಾರು ೨೦೦ ವರುಷಗಳಷ್ಟು ಹಳೆಯದಾದ ಹಸ್ತಪ್ರತಿ.

೨೮. ಪ್ರತಿ 'ಲ' :- ಡೆಮಿ ಅಷ್ಟಪತ್ರ ೧೦೦ ವರುಷ ಹಳೆಯ ಹಸ್ತಪ್ರತಿಯಲ್ಲಿ

'ಶಂಕರ' ರಚಿತ ಕನ್ನಡ -ಮರಾಠಿ ಪದಗಳು, ಸುಮಾರು ೪೦ ಪುಟಗಳು ಲಭ್ಯ

೨೯. ಪ್ರತಿ 'ವ':- ಡೆಮಿ ಅಷ್ಟಪತ್ರ, ಕೋರಿ ಕಾಗದ ಅತ್ಯಂತ ಶಿಥಿಲಾವಸ್ಥೆ ಸುಮಾರು ೩೦-೩೫ ಪುಟಗಳು ಲಭ್ಯ. 'ಶಂಕರ' ಅಂಕಿತದ ಕನ್ನಡ, ಮರಾಠಿ, ಹಿಂದಿ ಭಾಷೆಯ ಕೃತಿಗಳು ಅಲ್ಲಲ್ಲಿ ಸ್ವರ ಪ್ರಸ್ತಾರ, ಸುಮಾರು ೨೦೦ ವರುಷ ಹಳೆಯದು.

೩೦. ಪ್ರತಿ 'ಶ':-ಡೆಮಿ ಅಷ್ಟಪತ್ರ - ಕೋರಿಕಾಗದ ಸುಮಾರು ೧೦೦ ಪುಟಗಳು ಲಭ್ಯ. ದೇವನಾಗರಿ ಹಾಗೂ ಕನ್ನಡ ಲಿಪಿ. ಶಂಕರ, ಶಿವರಾಮ ರಚಿತ ಕನ್ನಡ, ಮರಾಠಿ ಕೃತಿಗಳು. ಸುಮಾರು ೨೦೦ ವರುಷದ ಪ್ರತಿ.

೩೧. ಪ್ರತಿ 'ಷ':- ೧೧x ೧೨ ಸೆಂ. ಮಿ. ಅಳತೆಯ ಇತ್ತೀಚಿನ ಕಾಗದಗಳ ಪ್ರತಿ. ಮರಾಠಿ ಪದಗಳು.

೩೨. ಪ್ರತಿ 'ಸ':-೨೧x೯ ಸೆಂ.ಮಿ. ಅಳತೆಯ ಕಾಗದದ ಹಸ್ತಪ್ರತಿ. ದೇವನಾಗರಿ ಸ್ಪಷ್ಟ ಅಕ್ಷರಗಳು ಕನ್ನಡ ಮರಾಠಿ ಹಿಂದಿ ಕೃತಿಗಳು.

೩೩/೩೪ ಪ್ರತಿ 'ಹ' ಮತ್ತು 'ಳ':- ೨೨x೧೨ ಸೆಂ.ಮಿ. ಅಳತೆಯ ಕಾಗದದ ಎರಡು ಹಸ್ತಪ್ರತಿಗಳು. ದೇವನಾಗರಿ ಲಿಪಿ. ಸಿಂದಗಿಯ ಭೀಮಾಶಂಕರ ಮಠದ ಚರಿತ್ರೆ ಕನ್ನಡ -ಗದ್ಯ ರೂಪದಲ್ಲಿದೆ. ಸುಮಾರು ೧೫೦ ವರುಷಗಳಷ್ಟು ಹಳೆಯ ಹಸ್ತಪ್ರತಿ.

**೩೫. ಪ್ರತಿ 'ಕ್ಷ':**- ೨೧x೧೨ ಸೆಂ.ಮಿ. ಅಳತೆಯ ಕೋರಿ ಕಾಗದದ ಹಸ್ತಪ್ರತಿ, ಶಿಥಿಲಾವಸ್ಥೆ ದೇವನಾಗರಿ ಲಿಪಿ. ಪಾನಿಗೆ ಒಂದರಂತೆ ಪುಟ ಸಂಖ್ಯೆ -೪ ರಿಂದ ೯೮ ಪುಟಗಳು ಲಭ್ಯ. ವಿಜಾಪುರದ ರುಕ್ಮಾಂಗದ ಪಂಡಿತರ ಕನ್ನಡ -ಮರಾಠಿ ಪದಗಳ ಸಂಗ್ರಹ. ಜೊತೆಗೆ ಅಚಲಾನಂದ ವಿಠಲ, ಹಯವದನಾಂಕಿತ ಕನ್ನಡ ಕೃತಿಗಳು ಮತ್ತು ಕೆಲವು ಮರಾಠಿ ಅಭಂಗಗಳು. ಹಸ್ತಪ್ರತಿ ಸುಮಾರು ೨೫೦ ವರುಷಗಳಷ್ಟು ಹಳೆಯದು.

ಹೀಗೆ ದೊರೆತ ೩೫ ಹಸ್ತಪ್ರತಿಗಳಲ್ಲಿ ಮೊದಲಿನ ೨೬ ಹಸ್ತಪ್ರತಿಗಳು ವಿಜಾಪುರದ ಶ್ರೀ ದೇವಪ್ಪಯ್ಯ ಅಪ್ಪಯ್ಯ ಕಾಖಂಡಕಿ ಅವರಲ್ಲಿ, ಉಳಿದವುಗಳಲ್ಲಿ ೯ ಹಸ್ತಪ್ರತಿಗಳು ಸಿಂದಗಿಯ ಶ್ರೀ ಕೇಶವರಾವ ಬಿಂದೂರಾವ ಕುಲಕರ್ಣಿ ಹಾಗೂ ಕೊನೆಯ ಒಂದು ಹಸ್ತಪ್ರತಿ ವಿಜಾಪುರದ ಶ್ರೀ ನಾ.ಬ.ಜೋಶಿ ಅವರ ಹತ್ತಿರ ದೊರೆತವು.

## ೨.೩ ಅಪ್ರಕಟಿತ ಚಾರಿತ್ರಿಕ ಸಾಹಿತ್ಯ

೧. ಗುರುಮಾಲಿಕಾ:- ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ ಮರಾಠಿ ಸಂತರ ಚರಿತ್ರೆಯನ್ನು 'ಹರಿಭಕ್ತಿ ವಿಜಯ' ಎಂಬ ಹೆಸರಿನಲ್ಲಿ ಮಹಿಪತಿ ತಹಾರಾಬಾದಕರ ಎಂಬ ಕವಿ ಮರಾಠಿಯಲ್ಲಿ ಬರೆದು ಇಟ್ಟಿದ್ದಾನೆ. ಅದೇ ಜಾಡಿನಲ್ಲಿ ವಿಜಾಪುರ ಜಿಲ್ಲೆಯ ಸಂತರ ಚರಿತ್ರೆಯನ್ನು 'ರುಕ್ಮಜದಾಸ' ಎಂಬ ಕವಿ ಬರೆದನೆಂದು ಕಾಣುತ್ತದೆ. ದೊರೆತ ಹಸ್ತಪ್ರತಿಗಳಲ್ಲಿ ವಿಜಾಪುರದ ರುಕ್ಮಾಂಗದ ಪಂಡಿತರ ಚರಿತ್ರೆ ಪೂರ್ತಿ ಹಾಗೂ ಮಹಿಪತಿರಾಯರ ಕುರಿತು ಬರೆದ ಒಂದು ಅಧ್ಯಾಯ ದೊರೆತಿದೆ. ಈ ಕೃತಿಯ ಮೊದಲ ಉಲ್ಲೇಖ ಬರುವದು ಡಾ. ಅವಳೀಕರ ಅವರು ಬರೆದ 'A Chapter on Mahipati dasa' ಎಂಬ ಲೇಖನದಲ್ಲಿ ಅದು 'The Journal of the Karnataka University Voi III No. 2 June 1959 ದ ಸಂಚಿಕೆಯಲ್ಲಿ ಪ್ರಕಟವಾಗಿದೆ. ಡಾ. ಅವಳೀಕರ ಅವರು ಹೇಳುವಂತೆ, ಅವರಿಗೆ ಶ್ರೀ ಬೆಟಗೇರಿ ಕೃಷ್ಣಶರ್ಮರ ಮುಖಾಂತರ ದೊರೆತ ಹಸ್ತಪ್ರತಿಯಲ್ಲಿ ೨೨೧ ಓವಿಗಳಿವೆ. ಇತ್ತೀಚಿನ ಕಾಗದಗಳಲ್ಲಿ ಬರೆದದ್ದು ಎಂದು ಹೇಳುತ್ತಾರೆ. ತಮ್ಮ ಲೇಖನದಲ್ಲಿ ಕೆಲವು ನುಡಿಗಳನ್ನು ಉಲ್ಲೇಖಿಸಿದ್ದಾರೆ. ಆದ್ದರಿಂದ ಕೃತಿಯ ಪೂರ್ತಿ ಪಾಠವನ್ನು ಹುಡುಕುವ ಪ್ರಯತ್ನ ಮಾಡಿದಾಗ ಪುಣೆಯ ಗೋಖಲೆ ಸಂಸ್ಥೆಯಲ್ಲಿ ಸಂಶೋಧಕರಾದ ಶ್ರೀ. ಎ.ಆರ್. ಕುಲಕರ್ಣಿ ಅವರ ಹತ್ತಿರ ದೊರೆಯಿತು. ಅವರು ಅಥಣಿಯ ಶ್ರೀ ಮನೋಹರರಾವ ದೇಶಪಾಂಡೆ ಅವರ ಹತ್ತಿರದ ಹಸ್ತಪ್ರತಿಯಿಂದ ನಕಲು ಮಾಡಿಕೊಂಡಿದ್ದರು. ಅದರಲ್ಲೂ ೨೨೧ ಓವಿಗಳಿವೆ.//೧//

> 'ಶ್ರೀ ಪರಮಹಂಸ ಪರಿವ್ರಾಜಕಾಚಾರ್ಯ ಸದ್‌ಗುರು ರುಚಿರಾನಂದ ಶಿಷ್ಯೆ
> ರಚಿತ ಮಹಿಪತಿಗುರು ಪರಮಹಂಸ ಭಾಸ್ಕರ ಮುದ್ರಾಧಾರಣೆ
> ಬಾಧಾ ವಿಜಯಪುರ ಗಮನೋನ್ನಾಮ ಪ್ರಥಮೋಧ್ಯಾಯಾರಿತೇ।।
> ಶುಭಂ ಭವತು।। ರಾಜಾಧಿರಾಜ ಸದ್‌ಗುರು ಮಹಿಪತಿರಾಜ ಸಮರ್ಥರಿತೇ।।
> ಅಥ ದ್ವಿತೀಯೋಧ್ಯಾಯ ಪ್ರಾರಂಭ।। ಎಂದು ಕೊನೆಯಲ್ಲಿ ಹೇಳಿದೆ.

ಆದರೆ ದ್ವಿತೀಯ ಅಥವಾ ಮುಂದಿನ ಅಧ್ಯಾಯಗಳು ದೊರೆತಿಲ್ಲ. ೨೨೧ ಓವಿಗಳಲ್ಲಿ ಮಹಿಪತಿರಾಯರ ಜನನ ವೃತ್ತಾಂತ, ಬಾಲ್ಯ, ಯೌವನ ಹಾಗೂ ಭಾಸ್ಕರ ಸ್ವಾಮಿಗಳ ಹತ್ತಿರದ ಉಪದೇಶದ ವರೆಗಿನ ಕಥೆ ಹೇಳಲಾಗಿದೆ.

ಕವಿ ತನ್ನ ಹೆಸರನ್ನು 'ರುಕ್ಮಜದಾಸ' ಎಂದು ಹೇಳಿಕೊಳ್ಳುತ್ತಾನೆ.//೨// ಕೊನೆಯಲ್ಲಿ ರುಚಿರಾನಂದ ಶಿಷ್ಯ ಎಂದೂ ಹೇಳಿಕೊಂಡಿದ್ದಾನೆ. ರುಕ್ಮ ಹಾಗೂ ರುಚಿರಾನಂದ ಎಂಬ ಹೆಸರುಗಳು ವಿಜಾಪುರದ ಸಮಕಾಲಿನ ಸಂತ ಕವಿ ರುಕ್ಮಾಂಗದ ಪಂಡಿತರನ್ನು ಕರೆಯುವ ಹೆಸರುಗಳು. ಇವರೇ ಬರೆದ ರುಕ್ಮಾಂಗದ ಪಂಡಿತರ ಚರಿತ್ರೆಯಲ್ಲಿ ಕವಿಯ ಕಾಲವನ್ನು ಕ್ರಿ.ಶ. ೧೭೫೦ ಎಂದು ಗುರುತಿಸಬಹುದಾಗಿದೆ.

೨. ಮಹಿಪತಿ ಸ್ತೋತ್ರ:-

ಸಂಸ್ಕೃತದಲ್ಲಿ ರಚಿಸಿದ 'ಮಹಿಪತಿ ಸ್ತೋತ್ರ'ದ ಕರ್ತೃ ಸವದತ್ತಿ ರಾಮ ಎಂಬ ಕವಿ. ಇದರ ಮೊದಲ ಉಲ್ಲೇಖ ದೊರೆಯುವುದು ಶ್ರೀ ಮ.ಶ್ರೀ. ದೇಶಪಾಂಡೆ ಅವರ ಸ್ವಾನಂದ ಸಾಮ್ರಾಜ್ಯದಲ್ಲಿ. ಸ್ತೋತ್ರ ಅಪ್ರಕಟಿತವಾಗಿದ್ದು, ಪ್ರಚಲಿತದಲ್ಲೂ ಇಲ್ಲ. ಕಾಖಂಡಕಿಯ ವಯೋವೃದ್ಧ ಡಾ. ವೆಂಕಪ್ಪಯ್ಯ ಯಾದಪ್ಪಯ್ಯ ಹರಿದಾಸ ಇವರ ಮನೆಯಲ್ಲಿ ಒಂದು ಪ್ರತಿ ಇದೆ. ಸ್ತೋತ್ರದ ಕೊನೆಯಲ್ಲಿ 'ಶಕೆ ೧೮೫೫ ಶ್ರೀ ಮುಖನಾದ ಸಂವತ್ಸರ ಜೇಷ್ಠ ಶುಕ್ಲ ೩ ಮಂದವಾಸರೇ ಸಮಾಪ್ತಂ' ಎಂದು ಬರೆದಿದೆ. ಇದು ಬಹುಶ: ನಕಲು ಮಾಡಿಕೊಂಡ ದಿನವಾಗಿರಬೇಕು. ಕವಿಯ ಕಾಲವನ್ನು ಕ್ರಿ.ಶ. ಸು ೧೮೮೬ ಎಂದು ಶ್ರೀ ಮ.ಶ್ರೀ ದೇಶಪಾಂಡೆ ಅವರು ಹೇಳುತ್ತಾರೆ.//೩// ನಿತ್ಯ ಪರಾಯಣಕ್ಕೆ ಅನುಕೂಲವಾಗುವಂತೆ ಸ್ತೋತ್ರವು ರಾಯರ ಸಂಕ್ಷಿಪ್ತ ಚರಿತ್ರೆ, ಪವಾಡಗಳನ್ನು ಒಳಗೊಂಡಿದೆ.//೪//

೨.೪ ಚಾರಿತ್ರಿಕ ಅಂಶಗಳನ್ನೊಳಗೊಂಡ ಪ್ರಕಟಿತ ಸಾಹಿತ್ಯ

೧. ಮಹಿಪತಿರಾಯರ ಮರಿಮಕ್ಕಳಾದ 'ಶ್ರೀಪತಿ ತನುಜ'ರು ಬರೆದ ೨೧ ನುಡಿಗಳ 'ಕರುಣಿಸಯ್ಯ ದಯ ವಾರಿಧಿ ಮಹಾರಾಯ' ಎಂಬ ಕೃತಿಯು 'ಆದಿ ಕಿರುಚರಿತೆ' ಎಂದು ಪರಿಗಣಿತವಾಗಿದೆ. ಅವರ ಕೀರ್ತನೆಗಳ ಸಂಗ್ರಹದಲ್ಲಿ ಪ್ರಕಟವೂ ಆಗಿದೆ.//೫// 'ಶ್ರೀಪತಿ ತನುಜ'ರ ಕಾಲವನ್ನು ಕ್ರಿ.ಶ. ಸು. ೧೬೫೦ ಎಂದು ಗುರುತಿಸಲಾಗಿದೆ.

೨. ಮುಂಬಯಿ ಇಲಾಖೆಯ ಗ್ಯಾಝಿಟಿಯರ್ ಸಂಪುಟ XXIII ರಲ್ಲಿ ಪುಟ ೬೫೬ರಲ್ಲಿ ಕಾಖಂಡಕಿ ಗ್ರಾಮದ ಕುರಿತು ಸ್ಥಳ ಮಹಾತ್ಮೆಯನ್ನು ಉಲ್ಲೇಖಿಸುವಾಗ ಮಹಿಪತಿರಾಯರ ಕುರಿತು ಸಂಕ್ಷಿಪ್ತ ಚರಿತ್ರೆ ಇದೆ.//೬// ಸಂಪುಟದ ಪ್ರಕಟನ ವರುಷ ಕ್ರಿ.ಶ. ೧೮೮೪.

ಮಹಿಪತಿರಾಯರ ಕುರಿತು ಪ್ರಕಟಿತ ಉಳಿದ ಸಾಹಿತ್ಯದ ವಿವರವನ್ನು ಆಧಾರಗ್ರಂಥದ ಪಟ್ಟಿಯಲ್ಲಿ ಕೊಡಲಾಗಿದೆ.

ಇಂತು ಸಂಗ್ರಹಿಸಿದ ವಿಷಯಗಳ ಆಧಾರದಿಂದ ಈಗ ವಿಷಯವನ್ನು ಪ್ರವೇಶಿಸುತ್ತ ಪ್ರಬಂಧದ ಮೂಲ ಅಧ್ಯಯನವನ್ನು ಮುಂದಿನ ಪುಟಗಳಲ್ಲಿ ಮಾಡಲು ಪ್ರಯತ್ನಿಸಲಾಗಿದೆ.

★ ★ ★

## ಅಡಿ ಟಿಪ್ಪಣಿಗಳು

೧. ಅನುಬಂಧದಲ್ಲಿ ಪೂರ್ತಿ ಪಾಠವನ್ನು ಕೊಟ್ಟಿದೆ.

೨. ಗುರುಮಾಲಿಕೆ ಓವಿ ೨೨೧.

೩. ದೇಶಪಾಂಡೆ ಮನೋಹರರಾಯ: ಸ್ವಾನಂದ ಸಾಮ್ರಾಜ್ಯ ಪುಟ ೨೦-೨೧.

೪. ಅನುಬಂಧದಲ್ಲಿ ಸ್ತೋತ್ರದ ಪೂರ್ತಿಪಾಠವನ್ನು ಕೊಟ್ಟಿದೆ.

೫. ಅನುಬಂಧದಲ್ಲಿ ಆಧಿಕಿರುಚರಿತೆಯ ಪೂರ್ತಿ ಪಾಠವನ್ನು ಕೊಟ್ಟಿದೆ.

೬. ಅನುಬಂಧದಲ್ಲಿ ಗ್ಯಾಝಿಟಿಯರ್ ಉಲ್ಲೇಖಿದ ಪೂರ್ತಿ ಪಾಠವನ್ನು ಕೊಟ್ಟಿದೆ.

# ಅಧ್ಯಾಯ ಮೂರು

## ವಿಷಯ ಪ್ರವೇಶ

### ೩.೧ ಸಮಕಾಲೀನ ಸ್ಥಿತಿ:-

ಮಹಿಪತಿರಾಯರು ವಿಜಾಪುರ ಜಿಲ್ಹೆಯ ಕಾಖಂಡಕಿ ಗ್ರಾಮದಲ್ಲಿ ನೆಲೆಸಿದವರು. ಮಧ್ಯಯುಗೀನ ಕಾಲದ ಮುಸಲ್ಮಾನರ ಅರಸೊತ್ತಿಗೆಯಲ್ಲಿ ಬಾಳಿದವರು. ಅವರ ಬದುಕು ಹಾಗೂ ಕೃತಿಗಳ ಅವಲೋಕನದ ಮೊದಲು ಅವರು ಬಾಳಿ ಬದುಕಿದ ಅಂದಿನ ದೇಶ -ಕಾಲದ ಪರಿಸ್ಥಿತಿಯನ್ನು ಪರಿಶೀಲಿಸುವದು ಉಚಿತವೆನಿಸುತ್ತದೆ. ಯಾಕೆಂದರೆ, ''ಸಾಹಿತಿ ಪರಿಸರದ ಕೂಸು. ಕಾಲ, ದೇಶಗಳಿಗನುಗುಣವಾಗಿಯೇ ಸಾಹಿತ್ಯ ನಿರ್ಮಾಣಗೊಳ್ಳುತ್ತದೆ. ಕಾಲಿದಾಸನ ಪ್ರತಿಭೆಯ ಲೇಖಕ ಈ ಶತಮಾನದಲ್ಲಿ ಜನಿಸಿದರೂ ಆತ ಮತ್ತೆ 'ಶಾಕುಂತಲ' 'ಮೇಘದೂತ'ಗಳನ್ನು ಬರೆಯಲಾರ. ಗಾರ್ಕಿ, ಟಾಲಸ್ಟಾಯ್, ಪಾಸ್ಟರನಾಕ್ ಅವರು ರಶಿಯಾದಲ್ಲಿ ಹುಟ್ಟದೆ. ಇಂಗ್ಲಂಡ್, ಅಮೇರಿಕೆಗಳಲ್ಲಿ ಜನಿಸಿದ್ದರೆ, ಅವರಿಂದ ಈಗ ಬಂದಂಥ ಸಾಹಿತ್ಯ ಸೃಷ್ಟಿಯಾಗುತ್ತಿರಲಿಲ್ಲ. ಹರಿಹರನೇ ಹತ್ತನೆಯ ಶತಮಾನದಲ್ಲಿದ್ದರೆ ಅಂಥ ರಗಳೆಯನ್ನು ಬರೆಯುತ್ತಿದ್ದನೆ? ಕವಿ ಜನಿಸಿದ ದೇಶ, ಆತ ಬಾಳಿದ ಕಾಲ - ಇವು ಅವನ ಸಾಹಿತ್ಯದ ವಸ್ತು ಮತ್ತು ಅದರ ಸ್ವರೂಪವನ್ನು ನಿರ್ಧರಿಸುವಲ್ಲಿ ಮುಖ್ಯ ಕಾರಣವಾಗುತ್ತದೆ''//೧// ಎಂದು ಡಾ. ಕೆ.ವಿ. ಕಿತ್ತೂರ ಅವರು ಹೇಳುವ ಮಾತುಗಳನ್ನು ಗಮನಿಸಬೇಕು. ಮಹಿಪತಿರಾಯರು ಕನ್ನಡದಲ್ಲಿ ಬರೆದ 'ದ್ವೈತ -ಅದ್ವೈತ ಎಂದು ಹೊಡೆದಾಡದಿರೋ ಪ್ರಾಣಿ' ಎಂಬ ಪದ, ಹಾಗೂ ಮಿಶ್ರಭಾಷೆಯಲ್ಲಿ ಬರೆದ 'ಸಮಜೋ ಭಾಯಿ ಸಕುನಾಚಾರೋ ಖುದಾಕಾ। ತೆಲಗು ಕನ್ನಡ ತುರುಕಾರೆ ವಂದೇ ಸುಖ।। ಎಂದು ನಾಲ್ಕು ಭಾಷೆಗಳನ್ನು ಬಳಸಿ ಪದ್ಯಗಳನ್ನು ಬರೆಯಬೇಕಾದರೆ, ಅವರು ಬಾಳಿ -ಬದುಕಿದ ದೇಶದ ಪರಿಸ್ಥಿತಿಯನ್ನು ತಿಳಿಯಬೇಕು. ರಾಜಕೀಯ ಪರಿಸ್ಥಿತಿ ಹೇಗಿತ್ತು? ಸಾಮಾಜಿಕ ಬದುಕು ಹೇಗಿತ್ತು? ಧಾರ್ಮಿಕ ಆಚಾರ - ವಿಚಾರಗಳು ಹೇಗಿದ್ದವು? ಭಾಷೆ ಯಾವುದಿತ್ತು? ಸಾಹಿತ್ಯ ನಿರ್ಮಿತಿಯ ಪರಿಚಯವೂ ಅಗತ್ಯವಾಗುತ್ತದೆ. ಒಂದೊಂದನ್ನಾಗಿ ಇಲ್ಲಿ ಸಂಕ್ಷಿಪ್ತವಾಗಿ ನೋಡಬಹುದು.

#### ೩.೧.೧. ರಾಜಕೀಯ:

೧೪ನೆಯ ಶತಮಾನದ ಪ್ರಾರಂಭದಲ್ಲಿ ದಕ್ಷಿಣಭಾರತದಲ್ಲಿಯ ದೇವಗಿರಿಯ ಯಾದವರನ್ನು ಮುಸಲ್ಮಾನರು ಸೋಲಿಸಿ, ರಾಜ್ಯವನ್ನು ದಿಹಲಿಯ ಸಾಮ್ರಾಜ್ಯಕ್ಕೆ ಸೇರಿಸಿದರು. ಈ ಯಾದವರ ರಾಜ್ಯದಲ್ಲಿದ್ದ ತರ್ದವಾಡಿ-೧೦೦೦ ದ ವಿಜಾಪುರದ ಪ್ರದೇಶಕ್ಕೆ ಮಲಿಕ -ಕಾಫಿರನ ಮಗ ಕರೀಮುದ್ದೀನನು ಪ್ರಥಮ ರಾಜ್ಯಪಾಲನಾಗಿ ಬಂದು ಕ್ರಿ.ಶ. ೧೩೧೨ ರಲ್ಲಿ ಅಧಿಕಾರ ವಹಿಸಿಕೊಂಡನು. ಮುಂದಿನ ದಿನಗಳಲ್ಲಿ

ದಕ್ಷಿಣ ಭಾರತದ ತುಂಬ ಮುಸಲ್ಮಾನರ ಪ್ರವೇಶವಾಗಿ ಮಹ್ಮದ ತುಘಲಕನ ಹೊತ್ತಿಗೆ ಇಡೀ ದಕ್ಷಿಣ ಭಾರತವೆಲ್ಲ ಮುಸ್ಲಿಮರ ಅಧಿಪತ್ಯಕ್ಕೆ ಒಳಪಟ್ಟಿತು. ಕೆಲವೇ ದಿನಗಳಲ್ಲಿ ಅವನ ಅರಾಜಕತೆಯಿಂದ ಸರದಾರರು ಬಂಡೆದ್ದು ತಂತಮ್ಮ ಸ್ವಾತಂತ್ರ್ಯವನ್ನು ಸಾರಹತ್ತಿದರು. ದಕ್ಷಿಣದಲ್ಲಿ ಹೀಗೆ ಪ್ರಥಮವಾಗಿ ತನ್ನ ಸ್ವಾತಂತ್ರ್ಯವನ್ನು ಸಾರಿ ಕ್ರಿ.ಶ. ೧೩೩೫ ರಲ್ಲಿ ಜಲಾಲುದ್ದೀನ ಅಶನಖಾನನು ಮಧುರೆಯಲ್ಲಿ ತನ್ನ ಸ್ವತಂತ್ರ ಮುಸ್ಲೀಮ ರಾಜ್ಯವನ್ನು ಸ್ಥಾಪಿಸಿದನು. ಅದುವೆ ದಕ್ಷಿಣ ಭಾರತದ ಪ್ರಥಮ ಮುಸ್ಲಿಮ ರಾಜ್ಯ. ಈ ಹೊಸ ರಾಜ್ಯವು ಮಧ್ಯದಲ್ಲಿಯ ಹಿಂದುಗಳಿಗೆ ತಮ್ಮ ಅಸ್ತಿತ್ವವನ್ನು ಯೋಚಿಸಲು ಒಂದು ಹೊಸ ಸೂಚನೆಯಾಯಿತು. ಈಗ ಹಿಂದುಗಳು ಕೊನೆಯವರೆಗೂ ಮುಸಲ್ಮಾನರ ಅಧೀನದಲ್ಲಿರಬೇಕು. ಇಲ್ಲವೆ ಅವರ ಅಧಿಕಾರವನ್ನು ಕಿತ್ತೊಗೆದು ಸ್ವತಂತ್ರ ಹಿಂದೂ ರಾಜ್ಯವನ್ನು ಕಟ್ಟಬೇಕು. ಎರಡರಲ್ಲಿಯ ಒಂದರ ನಿರ್ಣಯ ಆಗಲೇಬೇಕಾಯಿತು. ಅದರ ಪರಿಣಾಮವಾಗಿಯೇ ಮರುವರುಷ ಅಂದರೆ ಕ್ರಿ.ಶ. ೧೩೩೬ ರಲ್ಲಿ ಕಂಪಲಿಯ ರಾಜ್ಯಪಾಲ ಸಂಗಮ ವಂಶದ ಹರಿಹರನು ತನ್ನ ಸ್ವಾತಂತ್ರ್ಯವನ್ನು ಘೋಷಿಸಿ ತುಂಗಭದ್ರೆಯ ತಟದಲ್ಲಿ ಒಂದು ಹೊಸ ಹಿಂದೂ ರಾಜ್ಯವನ್ನು ಸ್ಥಾಪಿಸಿದನು. ಅದುವೆ ವಿಜಯನಗರ ರಾಜ್ಯವೆನಿಸಿತು. ತೀರ ದಕ್ಷಿಣದಲ್ಲಿಯ ಮಾಬಾರದಲ್ಲಿಯ ಮುಸಲ್ಮಾನರ ರಾಜ್ಯ. ಮಧ್ಯದಲ್ಲಿಯ ಹಿಂದುಗಳ ವಿಜಯನಗರ ರಾಜ್ಯ, ದೇವಗಿರಿಯಲ್ಲಿ ಇನ್ನೊಂದು ಹೊಸ ರಾಜ್ಯಕ್ಕೆ ನಾಂದಿಯಾಯಿತು. ಮುಂದಿನ ಹತ್ತು ವರುಷಗಳಲ್ಲಿ ಕ್ರಿ.ಶ. ೧೩೪೭ ರಲ್ಲಿ ದೇವಗಿರಿಯೂ ಸ್ವತಂತ್ರವಾಗಿ ತನ್ನ ಹೊಸ ರಾಜಧಾನಿ ಕಲಬುರ್ಗಿಯಲ್ಲಿ ಬಹಮನಿ ರಾಜ್ಯವೆಂದು ಕರೆಸಿಕೊಂಡಿತು. ಈ ಬಹಮನಿ ರಾಜ್ಯದಲ್ಲಿ ವಿಜಾಪೂರವೂ ಒಂದು ಸುಬೆಯಾಗಿ ವಿಭಾಗವುಟ್ಟದ ರಾಜಧಾನಿಯಾಯಿತು. ನೂರೈವತ್ತು ವರುಷಗಳ ಆಡಳಿತದಲ್ಲಿ ಬಹಮನಿ ರಾಜ್ಯವು ಅನೇಕ ಏರಿಳಿತಗಳನ್ನು ಕಂಡಿತು.

೧೫ನೆಯ ಶತಮಾನದ ಉತ್ತರಾರ್ಧದಲ್ಲಿ ಬಹಮನಿ ರಾಜ್ಯವು 'ಬೀದರ' ರಾಜಧಾನಿಯಿಂದ ನಡೆಯುತ್ತಿತ್ತು. ಧೀರ-ಶೂರ-ಮುತ್ಸದ್ದಿ ಮಹಮೂದ ಗವಾನ ಮುಖ್ಯಮಂತ್ರಿಯಾಗಿದ್ದನು. ಆಂತರಿಕ ತಿಕ್ಕಾಟದಲ್ಲಿ ಆತನನ್ನು ಕ್ರಿ.ಶ. ೧೪೭೧ರಲ್ಲಿ ಕೊಂದರು. ಈ ವಧೆಯ ನಂತರ ಬಹಮನಿಯ ರಾಜ್ಯದಲ್ಲಿ ತುಂಬ ಗಲಭೆಯಾಯಿತು. ಅದು ವಿಕೋಪಕ್ಕೆ ಹೋಗಿ ಅಹ್ಮದನಗರದ ಭೈರಿ ನಿಜಾಮುಶಹನು ಬಂಡೆದ್ದು, ಬಹಮನಿ ರಾಜ್ಯದಿಂದ ಹೊರಬಿದ್ದು ಅಹ್ಮದನಗರದಲ್ಲಿ ತನ್ನ ಸ್ವಾತಂತ್ರ್ಯವನ್ನು ಘೋಷಿಸಿದನು. ಅಂದು ವಿಜಾಪುರದಲ್ಲಿ ರಾಜ್ಯಪಾಲನಾಗಿದ್ದ ತುರ್ಕ ವಂಶದ ಯುಸುಫಖಾನನು ಕೂಡ, ನಿಜಾಮುಶಾಹನ ದಾರಿಯಲ್ಲಿ ನಡೆದು ಕ್ರಿ.ಶ. ೧೪೮೯ರಲ್ಲಿ ತನ್ನ ಸ್ವಾತಂತ್ರ್ಯವನ್ನು ಸಾರಿದನು. ವಿಜಾಪುರದಲ್ಲಿ ಹೊಸ ಆದಿಲಶಾಹಿ ರಾಜ್ಯವನ್ನು ಪ್ರಾರಂಭಿಸಿದನು.

ರಾಜ್ಯಪಾಲ ಯುಸುಫಖಾನನು ರಾಜನಾಗಿ ಯುಸುಫ ಆದಿಲಖಾನನಾದ ಮೇಲೆ, ಸಹ್ಯಾದ್ರಿ ಪರ್ವತದ ಒಂದು ಕೋಟೆಯಲ್ಲಿ ಸ್ವತಂತ್ರವಾಗಿ ರಾಜ್ಯ ನಿರ್ವಹಿಸುತ್ತಿದ್ದ ಮುಕುಂದರಾವ ಎಂಬ ಮರಾಠಾ ಸರದಾರನನ್ನು ಸೋಲಿಸಿ, ಅವನ ತಂಗಿಯನ್ನು ಮದುವೆಯಾದನೆಂದು ಖ್ಯಾತ ಇತಿಹಾಸಕಾರ 'ಫಿರಿಸ್ತಾ' ಹೇಳುತ್ತಾನೆ. ಆತ ೧೬ನೆಯ ಶತಮಾನದ ಅಂತ್ಯದಲ್ಲಿದ್ದ ವಿಜಾಪುರ ಆಸ್ಥಾನದ ಇತಿಹಾಸಕಾರ. ಯುಸುಫ ಹಾಗೂ ಮುಕುಂದರಾಯನ ತಂಗಿ, ಇವರಿಬ್ಬರ ಸಂತತಿ ಮುಂದಿನ ದಿನಗಳಲ್ಲಿ ಸುಮಾರು ಎರಡು ಶತಕಗಳಷ್ಟು ಕಾಲ ವಿಜಾಪುರ ರಾಜಧಾನಿಯಿಂದ ಆದಿಲ್‌ಶಾಹಿ ರಾಜ್ಯವನ್ನು ಆಳಿತು.

ಯುಸುಫಖಾನನು ವಿಜಾಪುರದಲ್ಲಿ ತನ್ನ ಸ್ವತಂತ್ರ ರಾಜ್ಯವನ್ನು ಪ್ರಾರಂಭಿಸುವ ಹೊತ್ತಿಗೆ ತುಂಗಭದ್ರೆಯ ದಡದಲ್ಲಿನ ವಿಜಯನಗರ ಸಾಮ್ರಾಜ್ಯವು ತನ್ನ ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದಿತು. ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ರಂಗಗಳಲ್ಲಿ ತನ್ನದೇ ಆದ ವೈಶಿಷ್ಟ್ಯಗಳೊಂದಿಗೆ ಮೆರೆಯುತ್ತಿತ್ತು. ಸಾಹಿತ್ಯ, ಸಂಗೀತ ಶಿಲ್ಪಕಲೆಗಳು ಕೂಡ ಅಭಿವೃದ್ಧಿ ಹೊಂದಿದ್ದವು. ವಿಜಾಪುರ ರಾಜ್ಯವು ಸ್ವತಂತ್ರ ರಾಜ್ಯವಾಗಿದ್ದರೂ ಸಾಮ್ರಾಜ್ಯವಾಗಿರಲಿಲ್ಲ. ಅದೊಂದು ಪುಟ್ಟ ಸಂಸ್ಥಾನದಷ್ಟಿತ್ತು. ಯುಸುಫ, ಆತನ ಮಗ ಇಬ್ರಾಹಿಮ, ಮೊಮ್ಮಗ ಇಸ್ಮಾಯಿಲರು ಆಗೀಗ ಪರಸ್ಪರ ಶಾಹೀ ರಾಜರುಗಳೊಂದಿಗೆ ಹತ್ತೆಂಟು ಹಳ್ಳಿಗಳಿಗಾಗಿ ಬಡಿದಾಡುವಲ್ಲಿ, ಯಾವಾಗಲಾದರೊಮ್ಮೆ ವಿಜಯನಗರದವರೊಡನೆ ಕಾಲು- ಕೆದರಿ ಯುದ್ಧಮಾಡಿ ಒಂದು ಕೋಟೆಯನ್ನು ಗೆಲ್ಲುವಲ್ಲಿ ಅಥವಾ ಸೋಲುವಲ್ಲಿ ತೃಪ್ತಿ ಪಡುತ್ತಿದ್ದರು. ಗೆದ್ದಾಗ ಸಿಕ್ಕಷ್ಟನ್ನು ದೋಚಿಕೊಂಡು ಬಂದು ವಿಜಾಪುರದ ಭಂಡಾರವನ್ನು ತುಂಬಿಕೊಳ್ಳುತ್ತಿದ್ದರು.

ಮುಕ್ಕಾಲು ಶತಮಾನ ಹೀಗೆ ಕಂಟುತ್ತ ಸಾಗಿದ್ದ ಆದಿಲಶಾಹಿ ರಾಜ್ಯದ ದೈವ ತೆರೆದದ್ದು ಕ್ರಿ.ಶ. ೧೫೬೫ರ ರಕ್ಕಸಗಿ -ತಂಗಡಗಿ ಕಾಳಗದಲ್ಲಿ! ವಿಜಾಪುರದ ನಾಲ್ಕನೆಯ (ವಾಸ್ತವದಲ್ಲಿ ಐದನೆಯ) ಸುಲ್ತಾನ ಮೊದಲನೆಯ ಅಲಿ ಆದಿಲಶಹನ ಕಾಲದಲ್ಲಿ ಎಲ್ಲ ಶಾಹಿ ಮುಸಲ್ಮಾನ ರಾಜರುಗಳು ಒಂದಾಗಿ ವಿಜಯನಗರ ರಾಜ್ಯವನ್ನು ಸೋಲಿಸಿದರು. ಅಗಣಿತ ಸಂಪತ್ತು, ಅಪಾರ ಪ್ರದೇಶ ದೊರೆತಮೇಲೆ ವಿಜಾಪುರದ ಆದಿಲಶಾಹಿ ರಾಜ್ಯದ ಉಚ್ಛ್ರಾಯಕಾಲ ಪ್ರಾರಂಭವಾಯಿತು. ವಿಜಾಪುರ ನಗರ ಹಾಗೂ ರಾಜ್ಯವು ಅದ್ಭುತ ರೀತಿಯಲ್ಲಿ ಪ್ರಗತಿಯನ್ನು ಹೊಂದಿತು. ರಾಜಧಾನಿ ವಿಜಾಪುರ ಪಟ್ಟಣವು ಜಗತ್ತಿನ ಕೆಲವೇ ಪ್ರೇಕ್ಷಣೀಯ ನಗರಗಳಲ್ಲಿ ಒಂದಾಯಿತು.

ಮುಂದಿನ ನೂರಾಇಪ್ಪತ್ತು ವರುಷಗಳಲ್ಲಿ ವಿಜಾಪುರವನ್ನು ಆಳಿದವರು ನಾಲ್ವರು

ಸುಲ್ತಾನರು. ಅವರಲ್ಲಿ ಮೊದಲನೆಯ ಅಲಿ ಆದಿಲಶಹನ ಮಗ ಎರಡನೆಯ ಇಬ್ರಾಹಿಮ ಆದಿಲಶಹ (೧೫೮೦-೧೬೨೭), ಅವನ ಮಗ ಮಹ್ಮದ ಆದಿಲಶಹ (೧೬೨೬-೧೬೫೭). ಇವರಿಬ್ಬರ ಕಾಲದಲ್ಲಿ ಆದಿಲಶಾಹಿ ವೈಭವ ತುತ್ತತುದಿಯನ್ನು ಮುಟ್ಟಿತು. ಕ್ರಿ.ಶ. ೧೬೫೬ ರಲ್ಲಿ ಮಹ್ಮದ ಆದಿಲ್‌ಶಹನು ತೀರಿಕೊಂಡಾಗ ದಕ್ಷಿಣೋತ್ತರ ತಂಜಾವೂರದಿಂದ ಮುಂಬಯಿ, ಹಾಗೂ ಪಶ್ಚಿಮದಿಂದ ಪೂರ್ವಕ್ಕೆ ಗೋವೆಯಿಂದ ಕೃಷ್ಣೆ ತುಂಗೆಯರ ಸಂಗಮದವರೆಗೂ ಆದಿಲಶಾಹಿ ರಾಜ್ಯ ಹಬ್ಬಿಕೊಂಡಿತ್ತು. ಮಹ್ಮದನ ಮಗ ಎರಡನೆಯ ಅಲಿ ಆದಿಲಶಹನ ಕಾಲದಲ್ಲಿ ರಾಜ್ಯವು ಅವನತಿಗೆ ಪ್ರಾರಂಭವಾಗಿ ಅವನ ಮಗ ಸಿಕಂದರ ಆದಿಲಶಹನ ಕಾಲದಲ್ಲಿ ಕ್ರಿ.ಶ. ೧೬೮೬ರಲ್ಲಿ ವಿಜಾಪುರವು ಔರಂಗಜೇಬನ ಕೈವಶವಾಯಿತು. ಮೊಗಲ ರಾಜ್ಯಕ್ಕೆ ಸೇರಿಕೊಂಡಿತು. ಹೀಗೆ ಪ್ರಸ್ತುತ ಅಧ್ಯಯನದ ಪೂರ್ತಿಕಾಲ, ವಿಜಾಪುರ ಹಾಗೂ ಸುತ್ತಲಿನ ಪ್ರದೇಶವು ರಾಜಕೀಯವಾಗಿ ಆದಿಲಶಾಹಿ ಹಾಗೂ ಮೊಗಲ ಸಾಮ್ರಾಜ್ಯಗಳಲ್ಲಿ ಸೇರಿತ್ತು.

೩.೧.೨:- ಸಾಮಾಜಿಕ:-

ದೇವಗಿರಿಯ ಯಾದವರ ರಾಜ್ಯವು ಮುಸಲ್ಮಾನರ ರಾಜ್ಯಕ್ಕೆ ಅಧೀನವಾದಾಗ ಪಶ್ಚಿಮ ಘಟ್ಟಗಳಲ್ಲಿಯ ಕೆಲವು ಮರಾಠಾ ಸರದಾರರು ತಮ್ಮಷ್ಟಕ್ಕೆ ತಾವು ಸ್ವಾತಂತ್ರ್ಯವನ್ನು ಸಾರಿಕೊಂಡು ಸೀಮಿತ ಪ್ರದೇಶಗಳ ಅಧಿಪತಿಗಳಾಗಿದ್ದರು. ಮುಂದೆ ಬಹಮನಿ ಹಾಗೂ ಶಾಹಿ ರಾಜ್ಯಗಳು ಹುಟ್ಟಿಕೊಂಡಾಗ ಅವರಿಗೆ ಸ್ವಾತಂತ್ರ್ಯ ಉಳಿಯಲಿಲ್ಲ. ಈ ಮರಾಠಿ ಸರದಾರರು ಅಲ್ಲಿ ಇಲ್ಲಿ ಆಶ್ರಯ ಪಡೆಯಬೇಕಾಯಿತು. ಉತ್ತರದ ದಾಳಿಗಳನ್ನು ಎದುರಿಸಲು ದಕ್ಷಿಣದ ಮುಸಲ್ಮಾನರಿಗೆ ಈ ಮರಾಠಿ ಸರದಾರರ ಸಹಾಯದ ಅಗತ್ಯವೂ ಇದ್ದಿತು. ಅಂತೆಯೇ ಆದಿಲಶಾಹಿ ರಾಜ್ಯದಲ್ಲಿ ಮರಾಠಿ ಸರದಾರರು ರಾಜ್ಯದ ವಿವಿಧ ಆಡಳಿತಗಳಲ್ಲಿ ಸಂಬಂಧಪಟ್ಟವರಾಗಿದ್ದರು. ಹಾಗೆ ನಿಖರವಾಗಿ ಹೇಳುವದಾದರೆ ಉತ್ತರದಲ್ಲಿ ಮೊಗಲರಿಗೆ ರಜಪೂತರು ಇದ್ದಂತೆ ಒಂದಿಷ್ಟು ಕಾಲ ಆದಿಲಶಾಹಿಗಳಿಗೆ ಮರಾಠಿಗರು ಬೆನ್ನೆಲುಬಾಗಿದ್ದರು. ಶಿವಾಜಿಯ ಉಚ್ಛ್ರಾಯ ಕಾಲದವರೆಗೂ ಮರಾಠಿಗರ ಈ ನಂಬಿಗಸ್ಥ ಸಹಾಯ ಆದಿಲಶಾಹಿಗಳಿಗೆ ಇದ್ದುದನ್ನು ಕಾಣುತ್ತೇವೆ. ತಮ್ಮ ರಾಜ್ಯದ ಅಸ್ತಿತ್ವಕ್ಕಾಗಿ ಈ ಸಹಾಯ ಅವಶ್ಯವೆಂಬುದನ್ನು ಆದಿಲಶಾಹಿಗಳೂ ಕಂಡುಕೊಂಡಿದ್ದರು. ಆದಿಲಶಾಹಿ ರಾಜ್ಯದ ಸ್ಥಾಪಕ ಯುಸುಫಖಾನನು ಮರಾಠಿ ಸರದಾರ ಮುಕುಂದರಾಯನ ತಂಗಿಯನ್ನು ಮದುವೆಯಾಗಿದ್ದನಷ್ಟೆ. ಉತ್ತರದಲ್ಲಿ ಮೊಗಲರ ಸಾಮ್ರಾಜ್ಯ ಸ್ಥಾಪನೆಯ ಪೂರ್ವದಲ್ಲಿಯೇ ಇಂಥ ಶರೀರ ಸಂಬಂಧವು ಬೆಳೆದಿತ್ತು ಎಂಬುದು ಗಮನಾರ್ಹವಾಗಿದೆ. ಆಮೇಲಿನ ವರುಷಗಳಲ್ಲಿ ಮೊಗಲರ ಅಕಬರ ಬಾದಶಹನು ಇದೇ ಸಂಪ್ರದಾಯವನ್ನು ಮುಂದುವರೆಸಿ ರಜಪೂತ ಕನ್ಯೆಗಳನ್ನು

ಮದುವೆಯಾದುದನ್ನು ಇಲ್ಲಿ ನೆನೆಯಬಹುದು. ಈ ದೇಶದಲ್ಲಿ ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳಲು ಇಂಥ ಮದುವೆಗಳು ತುಂಬ ಸಹಾಯವಾಗುತ್ತವೆಂಬುದನ್ನು ಯುಸುಫಖಾನನು ಎಲ್ಲರಿಗಿಂತ ಮೊದಲಿಗೆಯೇ ಕಂಡುಕೊಂಡಿದ್ದನು. ಹೀಗಾಗಿ ಮುಂದಿನ ದಿನಗಳಲ್ಲಿ ಮರಾಠಿಗರು ಸ್ವ-ಇಚ್ಛೆಯಿಂದ ರಾಜ್ಯದಾಡಳಿತದಲ್ಲಿ ಪಾಲುಗೊಂಡರು. ರಾಜ್ಯವು ಸುವ್ಯವಸ್ಥಿತವಾಗಿ ನಡೆವಲ್ಲಿ ಸಹಾಯರಾದರು. ಅದಕ್ಕೆ ನಮ್ಮ ಪೂರ್ವದ 'ನಾ ವಿಷ್ಣು: ಪೃಥ್ವೀಪತಿ' ಎಂಬ ನಂಬಿಕೆಯೂ ಕಾರಣವಾಗಿರಬೇಕು. ರಾಜನು ಯಾವನೇ ಆಗಿರಲಿ ಸಿಂಹಾಸನವೇರಿದರೆ ಸಾಕು ಅವನಲ್ಲಿ ವಿಷ್ಣುವಿನ ಅಂಶವಿರುತ್ತದೆಂಬ ನಂಬಿಗೆಯು ಹಿಂದುಗಳು ಮುಸ್ಲಿಮ ಬಾದಶಹರನ್ನು ಒಪ್ಪಿಕೊಳ್ಳಲು ಹಾಗೂ ರಾಜ್ಯಕ್ಕೆ ವಿಶ್ವಾಸದಿಂದ ಇರಲು ಕಾರಣವಾಗಿರಬೇಕು. ಇದು ಮರಾಠಾ ಸರದಾರರ ಹಾಗೂ ಮುಗ್ಧ ಜನಸಾಮಾನ್ಯರ ವಿಷಯವಾದರೆ, ಆಳಲು ಬಂದವರಿಗೆ ಸ್ಥಳೀಯರ ಸಹಕಾರವು ತಮ್ಮ ರಾಜ್ಯ ಉಳಿದುಕೊಂಡು ಬರಲು ಅವಶ್ಯವಾಗಿತ್ತು. ಅಂತೆಯೇ ಅನ್ಯ ಭಾಷೆಯ ಧರ್ಮದ ಒಂದು ಜನಾಂಗ ಇಲ್ಲಿ ಕಾಲಿಟ್ಟಾಗ ಇಲ್ಲಿಯ ಭಾಷೆ ಹಾಗೂ ಧರ್ಮದೊಂದಿಗೆ ಹೊಂದಿಕೊಂಡು ಹೋಗುವುದನ್ನು ಅವರು ಕಲಿಯಬೇಕಾಯಿತು. ಜಾಣಾಕ್ಷ ಯುಸುಫಖಾನನು ಮುಕುಂದರಾಯನ ತಂಗಿಯನ್ನು ಮದುವೆಯಾದನಲ್ಲದೆ ತನ್ನ ಆಸ್ಥಾನದಲ್ಲಿ ಹಾಗೂ ಆಯಕಟ್ಟಿನ ಸ್ಥಳಗಳಲ್ಲಿ ಹಿಂದುಗಳಿಗೆ ಅನೇಕ ಮಹತ್ವದ ಸ್ಥಾನಗಳನ್ನು ಕೊಟ್ಟಿದ್ದನ್ನು ಕಾಣುತ್ತೇವೆ. ಅನೇಕ ಮರಾಠಿ ಮನೆತನಗಳು ಆದಿಲಶಾಹಿ ರಾಜ್ಯದಲ್ಲಿ ಅಧಿಕಾರ ಹಾಗೂ ಪ್ರಭಾವಗಳನ್ನು ಹೊಂದಿದವರಾಗಿದ್ದರು. ಅವರುಗಳಲ್ಲಿ ಹೆಸರಾಂತ ಮರಾಠಿ ಸರದಾರ, ಶಿವಾಜಿಯ ತಂದೆ, ಶಹಾಜಿ ಭೋಸಲೆ ಕೂಡ ಒಬ್ಬನಾಗಿದ್ದಾನೆ. ಮಹ್ಮದ ಆದಿಲಶಹನ ಕಾಲದಲ್ಲಿ ವಿಜಾಪುರಕ್ಕೆ ಬಂದ ಈತ ಬಹು ಬೇಗನೇ ಮೇಲಕ್ಕೇರಿದನಲ್ಲದೆ, ದಕ್ಷಿಣದ ವಿಜಯಗಳಲ್ಲಿ ಈತನ ಪಾತ್ರವು ಬಹು ಮುಖ್ಯವಾಗಿತ್ತು. ಕೊನೆಯಲ್ಲಿ ದಕ್ಷಿಣದ ಸುಬೇದಾರನಾಗಿಯೂ ಇದ್ದನು. ಅದರಂತೆ ಫಲ್ಟನದ ನಿಂಬಾಳಕರ, ಮುಧೋಳದ ಘೋರಪಡೆ, ಮೋರೆ, ಮಾನೆ, ಘಾಟಗೆ, ರಾಸ್ತೆ, ದಫ್ತರೀ, ಸಾವಂತ ಹಾಗೂ ದೇಶಮುಖರ ಹೆಸರುಗಳು ಆದಿಲಶಾಹಿ ರಾಜ್ಯದ ಪ್ರಾರಂಭದಿಂದಲೇ ಕೇಳಿಬರುತ್ತವೆ.

ಹೀಗೆ ಅಧಿಕಾರದಲ್ಲಿ ಒಂದೆಡೆ ಮರಾಠಿ ಸರದಾರರು ಸಹಾಯರಾಗಿದ್ದರೆ ಆಡಳಿತದಲ್ಲಿ ಸ್ಥಳೀಯ ಕನ್ನಡ, ಮರಾಠಿ ಹಾಗೂ ತೆಲಗು ಭಾಷೆಯ ಹಿಂದುಗಳು ಬಹುಮುಖ್ಯ ಪಾತ್ರಗಳನ್ನು ವಹಿಸಿದ್ದರು. ಗ್ರಾಮಾಂತರ ಜನತೆಯ ಸಂಪರ್ಕ ಹೊಂದಲು ಸ್ಥಳೀಯ ಭಾಷೆಯ ಜನರ ಸಹಕಾರವೂ ಆಳುವವರಿಗೆ ಅವಶ್ಯವಾಗಿದ್ದಿತು. ರಾಜ್ಯ ನಿರ್ವಹಣೆಗೆ ಕಂದಾಯ ವಸೂಲಿ ಬಹು ಮಹತ್ವದ್ದಷ್ಟೆ. ಅದನ್ನು ನಿರ್ವಹಿಸಲು ಬಹುತೇಕ ಜನ ಹಿಂದು ಬ್ರಾಹ್ಮಣರಿದ್ದರು. ಕಾರಕೂನ, ಕುಲಕರ್ಣಿಗಳಾಗಿದ್ದ ಅವರು ಕಂದಾಯ ವಸೂಲಿಯಲ್ಲಿ ಸಹಾಯಕರಾಗಿದ್ದರು. ಇವರುಗಳಲ್ಲಿ ಜಾಣರಾದವರು

ರಾಜಧಾನಿಗೆ ಬಂದು ವಕೀಲರಾಗಿಯೋ, ಇಲ್ಲವೆ ರಾಯಭಾರಿಗಳಾಗಿಯೋ ಕಾರ್ಯ ನಿರ್ವಹಿಸಿದ್ದನ್ನು ಕಾಣುತ್ತೇವೆ. ವಿಶೇಷತ: ವಸೂಲಿಯ ಲೆಕ್ಕ ಪತ್ರಗಳನ್ನು ಇಡುವಲ್ಲಿ ಹಾಗೂ ತಪಶೀಲುಗಳನ್ನು ಬರೆಯುವಲ್ಲಿ ನುರಿತವರಾದದ್ದರಿಂದ ಇವರಲ್ಲಿಯ ಅನೇಕ ಜನರು ರಾಜ್ಯಮಟ್ಟದ, ಪ್ರಾಂತ, ವಿಭಾಗ ಮಟ್ಟದ ಖಜಾನೆಗಳಲ್ಲಿ ಹಾಗೂ ಕಂದಾಯ ಇಲಾಖೆಗಳಲ್ಲಿ ಮೇಲಿನ ಸ್ಥಾನವನ್ನು ಹೊಂದಿದವರಾಗಿದ್ದರು. ಇಂಥ ಉನ್ನತ ಮಟ್ಟದ ಸ್ಥಾನವನ್ನು ಪಡೆದವರಲ್ಲಿ, ಮೂಲತ: ಐಗಳಿಯ ಕುಲಕರ್ಣಿಗಳಾದ ಮಹಿಪತಿರಾಯರು ಖಜಾನೆಯ ಅಧಿಕಾರಿಗಳಾಗಿದ್ದರೆಂದೂ ನಂಬಲಾಗಿದೆ. ಅವರೆ ಮುಂದೆ ಕಾಖಂಡಕಿಯ ಮಹಿಪತಿರಾಯರೆಂದು ಪ್ರಸಿದ್ಧರಾದವರು.

### ೩.೧.೩: ಧಾರ್ಮಿಕ:

ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಿದರೆ ಆದಿಲಶಾಹಿ ರಾಜ್ಯದ ಆಡಳಿತದಲ್ಲಿ ಕೇವಲ ಮುಸಲ್ಮಾನರ ಕೈವಾಡವಿರಲಿಲ್ಲ ಎಂಬುದು ಗೊತ್ತಾಗದೆ ಇರದು. ಹಿಂದುಗಳು ಕೂಡ ಪ್ರಭಾವಯುತರಾಗಿದ್ದರು. ಆದ್ದರಿಂದ ಆಳುವ ಸುಲ್ತಾನರಿಗೆ ಮತ್ತು ಮುಸಲ್ಮಾನ ಅಧಿಕಾರಿಗಳಿಗೆ ತಮ್ಮ ಜಾತ್ಯಂಧತೆಯನ್ನಾಗಲೀ, ಧಾರ್ಮಿಕ ಅಸಹಿಷ್ಣುತೆಯನ್ನಾಗಲೀ ನೇರವಾಗಿ ತೋರಿಸಲು ಅವಕಾಶಗಳು ಕಡಿಮೆಯಾಗಿದ್ದವು. ಮಹ್ಮದ ಆದಿಲಶಹನ ಹೊರತಾಗಿ ಉಳಿದ ಎಲ್ಲ ಆರು ಜನ ಬಾದಶಹರು 'ಹಿಂದು' ಧರ್ಮದ ಕುರಿತು ಸಹಾನುಭೂತಿಯುಳ್ಳವರಾಗಿದ್ದರು. ಮೊದಲನೆಯ ಇಬ್ರಾಹಿಮ ಆದಿಲಶಹನು (೧೫೩೪-೧೫೫೭) ಕಟ್ಟಾ ಸುನ್ನಿ ಪಂಥದವನಾಗಿದ್ದರೂ ಹಿಂದುಗಳ ಕುರಿತು ಒಲವನ್ನು ತೋರಿಸುತ್ತಿದ್ದನು. ಪರದೇಶೀ ಮುಸಲ್ಮಾನರಿಗಿಂತ ಸ್ಥಳೀಯ ಹಿಂದುಗಳನ್ನು ಮೆಚ್ಚಿದ್ದನು. ಅವನ ಮಗ ಮೊದಲನೆಯ ಅಲಿ ಆದಿಲಶಹನು (೧೫೫೭-೧೫೭೯) ಹಿಂದು ಸನ್ಯಾಸಿಗಳನ್ನು ಮತ್ತು ಪಂಡಿತರನ್ನು ಆದರಿಸುತ್ತಿದ್ದನು. ಅವರೊಂದಿಗೆ ಅಧ್ಯಾತ್ಮದ ವಿಷಯಗಳಲ್ಲಿ ಚರ್ಚೆ ಮಾಡುತ್ತಿದ್ದನು. ಅವರಿಗೆ ಉದಾರ ದೇಣಗೆಗಳನ್ನಿತ್ತ ಉಲ್ಲೇಖಗಳೂ ದೊರೆಯುತ್ತವೆ. ಎರಡನೆಯ ಇಬ್ರಾಹಿಮ ಆದಿಲಶಹನ (೧೫೮೦-೧೬೨೬) ಕುರಿತಂತೂ ಆತ ಹಿಂದು ಧರ್ಮವನ್ನು ಸ್ವೀಕರಿಸಿದ್ದನೆಂಬ ವದಂತಿಗಳೇ ಹುಟ್ಟಿದ್ದವು. ಆತ ಹಿಂದುಗಳ ವಿದ್ಯಾದೇವತೆಯಾದ ಸರಸ್ವತಿಯ ಆರಾಧಕನಾಗಿದ್ದನು. ಅರಮನೆಯಲ್ಲಿ ಸರಸ್ವತಿಯ ವಿಗ್ರಹವನ್ನು ಪೂಜಿಸುತ್ತಿದ್ದನೆಂದೂ ಹೇಳಲಾಗುತ್ತದೆ. ಅವನಿಗೆ ಜಗದ್ಗುರು ಎಂಬ ಉಪಾಧಿಯೂ ಇದ್ದಿತು.

ಆದಿಲಶಾಹಿ ರಾಜ್ಯದಲ್ಲಿಯ ಅನೇಕ ಹಿಂದು ಗುಡಿ ಗುಂಡಾರಗಳಿಗೆ ಬಾದಶಹರು ಉದಾರವಾಗಿ ನೀಡಿದ ದತ್ತಿಗಳ ನಿದರ್ಶನಗಳು ಇಂದಿಗೂ ಹೇರಳವಾಗಿ ದೊರೆಯುತ್ತವೆ. ಹಿಂದೂ ಸರದಾರರು ನೀಡಿದ ದಾನ -ಧರ್ಮಗಳನ್ನು ಕೂಡ ಬಾದಶಹರು ಊರ್ಜಿತಗೊಳಿಸಿದ ಉದಾಹರಣೆಗಳೂ ಇವೆ. ಪಂಡಿತ ಮಾನ್ಯರು,

ಪುರೋಹಿತರು, ಜೋಶಿ, ದೀಕ್ಷಿತರೇ ಮೊದಲಾದ ಹಿಂದುಗಳಿಗೆ ತಮ್ಮ ಧಾರ್ಮಿಕ ವಿಧಿಗಳನ್ನು ಮುಂದುವರಿಸಿಕೊಂಡು ಹೋಗಲು ಸಮ್ಮತಿಯನ್ನಿತ್ತಿದ್ದರು. ಅವರ ಆನುವಂಶಿಕ ಹಕ್ಕುಗಳನ್ನು ಭೂಮಿ -ಸೀಮೆಗಳನ್ನು ಮುಂದುವರಿಸಿದ್ದರು. ಆದಿಲಶಾಹಿ ಬಾದಶಹರು ನೀಡಿದ ಅನೇಕ ಫರ್ಮಾನುಗಳು ಇಂದಿಗೂ ಅಲ್ಲಿ ಇಲ್ಲಿ ದೊರೆಯುತ್ತವೆ. ಕೊಂಕಣದ ಜೋಯಿಸರೊಬ್ಬರಿಗೆ ಅವರ ಜೋಯಿಸತನವನ್ನು ಮುಂದುವರಿಸಿಕೊಂಡು ಹೋಗಲು ವಿಜಾಪುರದ ಬಾದಶಹನು ವಾರ್ಷಿಕ ಅನುದಾನವನ್ನು ನೀಡಿದ ಉಲ್ಲೇಖ ಸಿಗುತ್ತದೆ. ಅದರಂತೆ ಸಿಂದಗಿಯ ಭೀಮಾಶಂಕರರ ಮಠಕ್ಕೆ ಹಾಕಿಕೊಟ್ಟ ಸನದು ಇಂದಿಗೂ ಮಠದಲ್ಲಿ ಉಪಲಬ್ಧವಿದೆ.

ರಾಜಕೀಯ ಹಾಗೂ ಸಾಮಾಜಿಕ ಸ್ತರಗಳು ಬದಲಾದಂತೆ, ಧಾರ್ಮಿಕ ಸ್ತರಗಳು ಬದಲಾವಣೆಗೆ ಒಳಪಡಲಿಲ್ಲ. ಅದಕ್ಕೆ ಬಹುಶ: ಇಲ್ಲಿಯ ಬಾದಶಹರಲ್ಲಿದ್ದ ತಮ್ಮ ಇಸ್ಲಾಮ ಮತದ ಆಂತರಿಕ (ಶಿಯಾ -ಸುನ್ನಿ) ಭಿನ್ನಾಭಿಪ್ರಾಯಗಳೂ ಕಾರಣವಿದ್ದೀತು. ಇಲ್ಲಿ ನಡೆದ ಧಾರ್ಮಿಕ ಬಂಡಾಯಗಳು ಸಾಮಾನ್ಯವಾಗಿ ಶಿಯಾ-ಸುನ್ನಿ ಪಂಥಗಳ ಮಧ್ಯ ಎಂದು ಇತಿಹಾಸದ ಪುಟಗಳು ಹೇಳುತ್ತವೆಯೇ ಹೊರತು ಹಿಂದು-ಮುಸ್ಲಿಮರ ನಡುವೆ ನಡೆದ ಅಂಥ ಯಾವ ಮಹತ್ವದ ಬಂಡಾಯಗಳ ಉಲ್ಲೇಖಗಳು ಸಿಕ್ಕದಿರುವುದು ಗಮನಾರ್ಹವಾಗಿದೆ. ಮುಸ್ಲಿಮರು ಇಲ್ಲಿ ಬಂದದ್ದು ಮುಖ್ಯವಾಗಿ ರಾಜ್ಯ ಸ್ಥಾಪನೆಯ ಉದ್ದೇಶದಿಂದ ಅನಂತರ ಅವರ ರಾಜ್ಯ ಸ್ಥಿರವಾದಾಗ ಅವರ ಆಶ್ರಯವನ್ನು ಅರಿಸಿಕೊಂಡು ಬಂದ ಇತರರು ವಿಶೇಷತ: ಇಸ್ಲಾಮು ಧರ್ಮಪ್ರಸಾರಕರು ಅವಕಾಶ ಸಿಕ್ಕಾಗಲೆಲ್ಲ ತಮ್ಮ ಧರ್ಮದ ಪ್ರಸಾರವನ್ನು ಮಾಡದೆಯೂ ಇರಲಿಲ್ಲ. ಅದರ ಪರಿಣಾಮವಾಗಿ ಬಹುತೇಕ ಕೆಳವರ್ಗದ ಜನ ಮತಾಂತರಗೊಂಡ ಉಲ್ಲೇಖಗಳು ದೊರೆಯುತ್ತವೆ.-ಅದನ್ನು ತಪ್ಪಿಸಲು ಇಲ್ಲಿಯ ಹಿಂದುಗಳು ಹೆಣಗಾಡಿದ ಸಂದರ್ಭಗಳೂ ಉಂಟು.

. ವಾಸ್ತವದಲ್ಲಿ ಇಲ್ಲಿ ಮುಸ್ಲಿಮರು ಬರುವ ಮೊದಲು ಶೈವ ವೈಷ್ಣವ ಧರ್ಮಗಳು ಊರ್ಜಿತ ಸ್ಥಿತಿಯಲ್ಲಿದ್ದವು. ಮುಸ್ಲೀಮರ ಜೊತೆಗೆ ಇಸ್ಲಾಮ ಧರ್ಮದ ಪ್ರವೇಶವಾಯಿತು. ಮರಾಠಿಗರ ಪ್ರಭಾವದಿಂದ ಅವರ 'ಜ್ಞಾನೇಶ್ವರಿ' ಇಲ್ಲಿಗೆ ಬಂದಿತು. ಜ್ಞಾನೇಶ್ವರಿಯ ಆಗಮನದಿಂದ ಇಲ್ಲಿ 'ನಾಥ' ಸಂಪ್ರದಾಯಕ್ಕೆ ನೆಲೆ ಸಿಕ್ಕಿತು. ಕಾರಂಜಾದಲ್ಲಿ ಹುಟ್ಟಿ ಬೆಳೆದ ನರಸಿಂಹ ಸರಸ್ವತಿಗಳು ಗಾಣಗಾಪುರದಲ್ಲಿ ಬಂದುನೆಲೆಸಿದ್ದರು. ಅವರ ಪ್ರಭಾವದಿಂದ ವಿಜಾಪುರದ ಅರಮನೆಯ ಆವರಣದಲ್ಲಿ ನರಸಿಂಹ ದತ್ತ ಮಂದಿರವು ನಿಂತಿದ್ದು ಕೂಡ ಈ ಅವಧಿಯಲ್ಲಿಯೆ. ನಾಥ ಸಂಪ್ರದಾಯದ ಒಂದು ಪ್ರತ್ಯೇಕ ಮಠವು ಸಿಂದಗಿಯಲ್ಲಿ ಭೀಮಾಶಂಕರಮಠ ಎಂದು ಪ್ರಾರಂಭವಾದದ್ದು ಕೂಡ ಈ ಸಮಯದಲ್ಲಿಯೇ ಎಂಬುದನ್ನು ನೆನೆಯಬೇಕು. ಹೀಗೆ ಹಿಂದೂ ಧರ್ಮಕ್ಕೆ ಹೆಚ್ಚಿನ ಅವಕಾಶಗಳು ಇರಲಿಲ್ಲವೆಂದು ತಿಳಿದರೂ ಅದು

ಜೀವಂತವಾಗಿದ್ದಿತು ಮತ್ತು ಆಗೀಗ ಸಮಯ ದೊರೆತಾಗ ಪ್ರಭಾವೀ ಹಿಂದುಗಳ ಮುಖಾಂತರ ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳಲು ಪ್ರಯತ್ನಿಸುತ್ತಿತ್ತೆಂದು ಹೇಳಬಹುದು. ಇದಕ್ಕೆ ಪ್ರತಿಯಾಗಿ ರಾಜ್ಯ ಮುಸಲ್ಮಾನರದ್ದು, ಆಳುವವರು ಮುಸಲ್ಮಾನರು ಆಳುವವನ ಧರ್ಮದ ಉಳಿವು ಹಾಗೂ ಸಾಧ್ಯವಾದಾಗ ಅದರ ಪ್ರಸಾರ ಸಹಜ ಸಮ್ಮತವಾಗಿತ್ತು. ರಾಜಕೀಯ ಶಾಂತಿ ನೆಲೆಸಿದಾಗ ಜಗತ್ತಿನ ವಿವಿಧ ಮೂಲೆಗಳಿಂದ ಇಸ್ಲಾಮ ಧರ್ಮ ಪ್ರಸಾರಕ್ಕಾಗಿ ಮೌಲ್ವಿಗಳು, ಕಾಜಿಗಳು ಹಾಗೂ ಸೂಫಿ ಸಾಧುಸಂತರು ಅಗಾಧ ಪ್ರಮಾಣದಲ್ಲಿ ಇಲ್ಲಿಗೆ ಬಂದುದನ್ನೂ ಕಾಣುತ್ತೇವೆ. ಭಕ್ತಿ ಮಾರ್ಗದ ಸೂಫಿ ಸಂತರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲಿ ಬಂದು ನೆಲೆಸಿದ್ದು ಮಹತ್ವದ್ದಾಗಿದೆ. ಒಂದು ಅಂದಾಜಿನಂತೆ, ಜಗತ್ತಿನ ಯಾವುದೇ ಭಾಗದಲ್ಲಿ ಒಂದೇ ಧರ್ಮಕ್ಕೆ ಸಂಬಂಧ ಪಟ್ಟ ಅತಿ ಹೆಚ್ಚು ಸಾಧು -ಸಂತರು ವಾಸಿಸುತ್ತಿದ್ದುದರ ಉಲ್ಲೇಖಗಳಿಲ್ಲ. ಆದರೆ ವಿಜಾಪುರ ನಗರ ಒಂದರಲ್ಲಿಯೇ ಸುಮಾರು ಮುನ್ನೂರು ನಲವತ್ತು ಸೂಫಿ ಸಾಧು ಸಂತರ ಸಮಾಧಿಗಳಿವೆ. ಅಧಿಕ ಸಂಖ್ಯೆಯ ಸೂಫಿ ಸಂತರ ಆಗಮನಕ್ಕೆ ಬಹುಶ: ಇಲ್ಲಿಯ ಧಾರ್ಮಿಕ ಶಾಂತಿಯೂ ಕಾರಣವಾಗಿದ್ದೀತು. ಜೊತೆಗೆ ಅವರ ಸಾಧನೆಯ ಕೊನೆಯ ಹಂತ ಬೇರೆಯಾಗಿದ್ದರೂ ಮಾರ್ಗ ಸಾಮ್ಯದಿಂದಲೋ ಏನೋ ಸ್ಥಳೀಯರ ಜೊತೆಗೆ ಹೊಂದಿಕೊಳ್ಳಲು ಸಾಧ್ಯವಾಗಿರಬೇಕು. ಅಂತಲೇ ಇಂದಿಗೂ ಹಲವಾರು ಸೂಫಿ ಸಂತರ ಸಮಾಧಿಗಳಿಗೆ ಹಿಂದುಗಳೂ ನಡೆದುಕೊಳ್ಳುವದನ್ನು ಕಾಣುತ್ತೇವೆ. ಹಿಂದುಗಳ ಮಂದಿರಗಳಿಗೆ ಮುಸ್ಲಿಮರು ನಡೆದುಕೊಳ್ಳುವ ಉಲ್ಲೇಖಗಳೂ ದೊರೆಯುತ್ತವೆ.//೨//

'ಕಾಯಕವೇ ಕೈಲಾಸ' ಎಂದು ಹೇಳುವ ಬಸವಣ್ಣನವರ ವೀರಶೈವ ಧರ್ಮ ಮತ್ತು ಅವರ ವಚನಗಳು, ಅನಂತರ ಬಂದ ದಾಸ ಸಾಹಿತ್ಯ ವಿಶೇಷತ: ಪುರಂದರ ಕನಕದಾಸರ ಕೀರ್ತನೆಗಳು ಇಲ್ಲಿಯ ಜನರಿಗೆ ಪರಿಚಿತವೇ ಆಗಿದ್ದವು. ಅಂತಲೇ ಸೂಫಿ ಪಾಥವು ಇಲ್ಲಿ ಅಷ್ಟೊಂದು ವಿರೋಧವನ್ನು ಎದುರಿಸಲಿಲ್ಲ. ಪರಸ್ಪರ ಅನ್ಯೋನ್ಯವಾಗಿದ್ದ ಹೇರಳ ಉದಾಹರಣೆಗಳು ದೊರೆಯುತ್ತವೆ. ಇಷ್ಟಾಗಿಯೂ ಆಳರಸರ ಮೇಲೆ ಆಗುವ ಹಿಂದೂ ಧರ್ಮದ ಪ್ರಭಾವವನ್ನು ಕಡಿಮೆಗೊಳಿಸಲು ಸ್ಥಳೀಯ ಮುಸ್ಲಿಮರು ಪ್ರಯತ್ನಮಾಡಿದ ಉದಾಹರಣೆಗಳೂ ಸಿಗುತ್ತವೆ. ಅದಕ್ಕಾಗಿ ಹಿಂದು -ಮುಸ್ಲಿಮರ ಮಧ್ಯೆ ಪವಾಡಗಳ ಪೈಪೋಟಿ ನಡೆದದ್ದನ್ನೂ ಕಾಣುತ್ತೇವೆ. ಮುಸ್ಲೀಮರ ಹಸ್ತಪ್ರತಿಗಳಲ್ಲಿ ಬರುವ ಅಂಥ ಒಂದು ದೃಷ್ಟಾಂತ ಹೀಗಿದೆ.

ವಿಜಾಪುರದ ರುಕ್ಮಾಂಗದ ಪಂಡಿತರು ಎರಡನೆಯ ಇಬ್ರಾಹಿಮ ಆದಿಲಶಹನ ಮೇಲೆ ಪ್ರಭಾವ ಬೀರಿ, ಆತ ಅರಮನೆಯಲ್ಲಿ ಸರಸ್ವತಿಯ ಪೂಜೆಯನ್ನು ಮಾಡುವಂತೆ ಮನ ಒಲಿಸಿದರು. ಎರಡನೆಯ ಇಬ್ರಾಹಿಮನು ಸರಸ್ವತಿಯ ಕುರಿತು ತನ್ನ ಏಕೈಕ ಕಾವ್ಯ 'ಕಿತಾಬ-ಇ-ನೌರಸ'ದ ಮೊದಲ ಪದ್ಯದಲ್ಲಿಯೇ ಅವಳನ್ನು ಸ್ತುತಿಸಿದ್ದಾನೆ.

ನೌರಸ ಸೂರ ಜುಗ ಜಗಜ್ಯೋತಿ ಆ ನುಡ ಸರ್ವಗುಣಿ
ಯೋ ಸತತ ಸರಸುತೀ ಮಾತಾ ಇಬರಾಹೀಮ ಪರಸಾದ ಭಈ ದೂನೀ ||೧||

ಎಂದು ಸರಸ್ವತಿಯನ್ನು ತಾಯಿ ಎಂದು ಕರೆದಿದ್ದಾನೆ. ಅವನ ಈ ಸರಸ್ವತಿಯ ಹುಚ್ಚನ್ನು ಬಿಡಿಸಲು ಮುಸ್ಲಿಮರು ಅಜಮೇರದಿಂದ ಅಬುಲ್ ಹಸನ್ ಕಾದಿರಿ ಅವರನ್ನು ಬರಮಾಡಿಕೊಂಡ ಕಥೆಯೂ ಇದೆ.//೩//

ವಾಸ್ತವದಲ್ಲಿ ಈ ಕಾಲದ ಇಲ್ಲಿಯ ಹಿಂದುಗಳಿಗೆ ಧಾರ್ಮಿಕವಾಗಿ ಬಹು ಸೂಕ್ಷ್ಮ ಪರಿಸ್ಥಿತಿ ಇತ್ತು. ಇಂಥ ಪರಿಸ್ಥಿತಿಯಲ್ಲಿ ಕೂಡ ಹಿಂದು ಸಾಧು-ಸಂತರು, ದಾಸರು, ಯೋಗಿಗಳು ತಾವು ಬದುಕಿ ಉಳಿದು ಹಿಂದೂ ಧರ್ಮವನ್ನು ಜೀವಂತವಾಗಿ ಇಡುವಲ್ಲಿ ಸಫಲರಾಗಿದ್ದಾರೆ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಜೊತೆಗೆ ಮುಸ್ಲೀಮರನ್ನು ತಮ್ಮತ್ತ ಆಕರ್ಷಿಸುವಲ್ಲಿ ಆಗೀಗ ಯಶಸ್ಸನ್ನು ಕಂಡಿದ್ದಾರೆ ಎಂಬುದೂ ಗಮನಾರ್ಹವಾಗಿದೆ. ಧಾರ್ಮಿಕರಂಗದಲ್ಲಿ ಕ್ರಾಂತಿಯಾಗಿರದಿದ್ದರೂ ಈ ವಲಯಯವನ್ನು ಒಂದು ರೀತಿಯಲ್ಲಿ ಸಮತೋಲವಾಗಿ ಇಡುವಲ್ಲಿ ಸಫಲರಾಗಿದ್ದಾರೆ. ಅದಕ್ಕಾಗಿ ಅವರು ಬಳಸಿದ ದಾರಿ ಈ ಮೊದಲಿನ ಭಕ್ತಿ ಮಾರ್ಗವೇ ಆಗಿತ್ತು. ಹಿಂದಿನ ಶರಣರ -ದಾಸರ ಪರಂಪರೆಯನ್ನು ಕಾಯ್ದುಕೊಂಡು ಅದು ಮುಂದುವರೆಯುವಲ್ಲಿ ವಿಜಾಪುರದ ರುಕ್ಮಾಂಗದ ಪಂಡಿತರು, ಕಾಖಂಡಕಿಯ ಮಹಿಪತಿರಾಯರು, ಅವರ ಮಕ್ಕಳು, ಮೊಮ್ಮಕ್ಕಳು, ಸಿಂದಗಿಯ ಭೀಮಾಶಂಕರರು ಮತ್ತು ಅವರ ಮಕ್ಕಳು, ಅಗರಖೇಡದ ಅಜ್ಜರು, ಗಲಗಲಿಯ ಅವ್ವನವರು ಮತ್ತು ಪ್ರಯಾಗಬಾಯಿ ಮೊದಲಾದ ಸ್ತ್ರೀಪುರುಷರೆಲ್ಲ ಕಾರಣರಾಗಿದ್ದಾರೆ. ಈ ಒಬ್ಬೊಬ್ಬರೂ ವೈಯಕ್ತಿಕವಾಗಿ ತಮ್ಮ ಸಾಧನೆಯನ್ನು ಮುಂದುವರೆಸಿಕೊಂಡು ಜನಸಾಮಾನ್ಯರಲ್ಲಿ ಧರ್ಮ ಜಾಗೃತಿಯನ್ನು ಉಂಟು ಮಾಡಿದರು.

### ೩.೧.೪: ಭಾಷೆ ಮತ್ತು ಸಾಹಿತ್ಯ:

ವಿಜಾಪುರ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶವು ಎಂದಿನಿಂದಲೂ ಕರ್ನಾಟಕದ ಒಂದು ಭಾಗವಾಗಿದೆ. ಆದ್ದರಿಂದ ಭಾಷೆ 'ಕನ್ನಡ' ವಾಗಿರುವುದೂ ಅಷ್ಟೇ ಸಹಜವಾಗಿದೆ. ಈ ಪ್ರದೇಶದಲ್ಲಿ ಹುಟ್ಟಿದ ಅನೇಕ ಕವಿಗಳು, ವಚನಕಾರರು ಶ್ರೇಷ್ಠ ಸಾಹಿತ್ಯವನ್ನು ನಿರ್ಮಿಸಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ. ಆದಿಲಶಾಹಿ ಪೂರ್ವದ ಕವಿ ರನ್ನ, ನಾಗಚಂದ್ರ (ಅಭಿನವ ಪಂಪ), ಭಕ್ತಿ ಭಂಡಾರಿ ಬಸವಣ್ಣ ಮೊದಲಾದವರು ಇಲ್ಲಿಯ ಕೆಲವು ಶ್ರೇಷ್ಠರು.

ಆದಿಲಶಾಹಿ ರಾಜ್ಯ ಸ್ಥಾಪನೆಯೊಂದಿಗೆ ಪರ್ಶಿಯನ್ ಭಾಷೆ ಇಲ್ಲಿಯ ರಾಜಭಾಷೆಯಾಯಿತು. ಆಗ ಒಂದು ವಿದೇಶೀ ಭಾಷೆಗೆ ಇಲ್ಲಿ ಉತ್ತೇಜನ ದೊರಕಿತು.

ಪರ್ಶಿಯನ್ ಭಾಷೆ ರಾಜಭಾಷೆಯಾಗಿ ಆಸ್ಥಾನದಲ್ಲಿ ಅದಕ್ಕೆ ಆಶ್ರಯ ಹಾಗೂ ಮನ್ನಣೆ ದೊರೆತರೂ ಆ ಭಾಷೆಯನ್ನು ಬಳಸಲು ಇಲ್ಲಿ ಸಾಕಷ್ಟು ಜನರು ಇರಲಿಲ್ಲ. ಪರದೇಶಗಳಿಂದ ಆಮದು ಮಾಡಿಕೊಂಡ ಕೆಲವೇ ಜನರು ಅದನ್ನು ಉಪಯೋಗಿಸುತ್ತಿದ್ದರು. ಸೈನ್ಯದಲ್ಲಿ ಹಾಗೂ ಆಡಳಿತದ ವಿವಿಧ ಹುದ್ದೆಗಳಲ್ಲಿ ಮತಾಂತರಗೊಂಡ ಉತ್ತರ ಹಿಂದೂಸ್ತಾನದ ಹಾಗೂ ಸ್ಥಳಿಯರು ಸೇರಿಕೊಂಡಾಗ ಅವರಿಗೆ ಪರ್ಶಿಯನ್ ಆಗಲಿ ಅರೇಬಿಕ್ ಭಾಷೆಯಾಗಲಿ ಬರುತ್ತಿರಲಿಲ್ಲ. ಉತ್ತರ ಭಾರತದಿಂದ ಬಂದವರು ತಾವು ಬಳಸುತ್ತಿದ್ದ ದೆಹಲಿ -ಡೆಹರಾಡೂನಗಳ ಸುತ್ತಮುತ್ತ ಪ್ರಚಲಿತದಲ್ಲಿದ್ದ 'ಖಡೀಬೋಲಿ' ಭಾಷೆಯನ್ನು ಬಳಸುತ್ತಿದ್ದರು.

ಯುಸುಫನ ಹೆಂಡತಿ ಮರಾಠಿ ಸರದಾರನ ತಂಗಿಯಾದದ್ದರಿಂದ ಜನಾನಾದಲ್ಲಿ ಮರಾಠಿ ಭಾಷೆಯ ಪ್ರವೇಶವಾಗಿತ್ತು. ಹೀಗೆ ಮೂಲವಾಗಿ ಇದ್ದ ಕನ್ನಡ ಪ್ರದೇಶದಲ್ಲಿ, ಪರ್ಶಿಯನ್, ಖಡೀಬೋಲಿ, ಹಾಗೂ ಮರಾಠಿ ಮೂರು ಭಾಷೆಗಳ ಆಗಮನವಾಯಿತು. ರಕ್ಕಸಗಿ-ತಂಗಡಗಿ ಕಾಳಗದಲ್ಲಿ ವಿಜಯನಗರ ಸಾಮ್ರಾಜ್ಯವು ಸೋಲನ್ನು ಅನುಭವಿಸಿದಾಗ ಕೆಲವು ತೆಲಗು ಭಾಷೆಯ ಪ್ರದೇಶಗಳೂ ಆದಿಲಶಾಹಿ ರಾಜ್ಯಕ್ಕೆ ಸೇರಿಕೊಂಡವು. ಈಗ ರಾಜಧಾನಿಯಲ್ಲಿ ತೆಲಗು ಭಾಷೆಯ ಪ್ರವೇಶವೂ ಆಯಿತು.

ಆದಿಲಶಾಹಿ ಸೈನ್ಯದಲ್ಲಿದ್ದ ಪರ್ಶಿಯನ್, ಖಡೀಬೋಲಿ, ಮರಾಠಿ ಕನ್ನಡ ಹಾಗೂ ತೆಲಗು ಸೈನಿಕರು ಪರಸ್ಪರ ಸಂಭಾಷಣೆಯಲ್ಲಿ ಹರಕು -ಮುರುಕಾಗಿ ಎಲ್ಲ ಭಾಷೆಗಳನ್ನು ಬಳಸುತ್ತಿದ್ದರು. ಈ ಎಲ್ಲ ಭಾಷೆಗಳ ಸಮ್ಮಿಲನದಿಂದ ಕೆಲವು ದಿನಗಳಲ್ಲಿ ಒಂದು ಹೊಸಭಾಷೆಯೇ ರೂಪುಗೊಂಡಿತು. ದಕ್ಷಿಣ ಭಾರತದಲ್ಲಿಯೇ ಉಪಯೋಗಿಸುತ್ತಿದ್ದ ಈ ಭಾಷೆಗೆ ಉತ್ತರದವರು 'ದಖಿಣಿ' ಎಂದರು. ಸೈನ್ಯದಲ್ಲಿ ಉಪಯೋಗಿಸುತ್ತಿದ್ದುದರಿಂದ ಕೆಲವರು ಇದನ್ನು 'ಜಬಾನೆ -ಉರ್ದು-ಮೊಆಲ್ಲಾ' ಎಂದರು. ಹಲವಾರು ವರುಷಗಳ ನಂತರ ಈ ಹೆಸರು ತುಂಬ ಉದ್ದವಾಯಿತೆಂದು ಮೊದಲಿನ ಹಾಗೂ ಕೊನೆಯ ಶಬ್ದಗಳನ್ನು ಕತ್ತರಿಸಿ ಕೇವಲ 'ಉರ್ದು' ಎಂದು ಕರೆಯಹತ್ತಿದರು. ಹದಿನೆಂಟು ಹತ್ತೊಂಬತ್ತನೆಯ ಶತಮಾನದಲ್ಲಿ ಈ ದಖಿಣಿ ಅಥವಾ ಉರ್ದು ಭಾಷೆಯ ಮೇಲೆ ಪರ್ಶಿಯನ್ ಪ್ರಭಾವ ಹೆಚ್ಚಾದಾಗ ಅದು ಇಂದಿನ 'ಉರ್ದು' ಎನಿಸಿಕೊಂಡಿದ್ದರೆ ಸಂಸ್ಕೃತ ಹಾಗೂ ಆರ್ಯ ಭಾಷೆಗಳ ಪ್ರಭಾವ ಅಧಿಕವಾಗಿದ್ದ ಭಾಷೆ 'ಹಿಂದವಿ' ಅಥವಾ 'ಹಿಂದಿ' ಎಂದು ಗುರುತಿಸಿಕೊಂಡಿದೆ ಎಂದು ವಿದ್ವಾಂಸರ ಮತವಾಗಿದೆ.

ಭಾಷೆಗಳ ಕತೆ ಹೀಗಾದರೆ ಸಾಹಿತ್ಯದ ವಾರ್ತೆ ಇನ್ನೂ ರೋಚಕವಾಗಿದೆ.

ವಿಜಾಪುರದ ಬಾದಶಹರೆಲ್ಲರೂ ಅಕ್ಷರಪ್ರಿಯರು. ಆದ್ದರಿಂದ ಇಲ್ಲಿ ಬಳಸುತ್ತಿದ್ದ ಬಹುತೇಕ ಭಾಷೆಗಳೆಲ್ಲದರಲ್ಲೂ ಅಪರೂಪದ ಸಾಹಿತ್ಯ ನಿರ್ಮಾಣವಾಗಿದೆ.

ಯುಸುಫ ಖಾನ ಸ್ವತ: ಕಾವ್ಯ ಪ್ರೇಮಿ. ಕೃತಿಗಳನ್ನು ರಚಿಸುತ್ತಿದ್ದನೆಂದು ಇತಿಹಾಸಕಾರ ಫಿರಿಸ್ತಾ ಹೇಳುತ್ತಾನೆ. ಮತ್ತು ಪರ್ಶಿಯದಿಂದ ಹೆಸರಾಂತ ಕವಿ ಸಾಹಿತಿಗಳನ್ನು ವಿಜಾಪುರಕ್ಕೆ ಕರೆಸಿಕೊಂಡಿದ್ದನು. ಅದರಂತೆ ಅವನ ಮಗ ಇಸ್ಮಾಯಿಲ್ ಕೂಡ ಕಾವ್ಯ ಸಂಗೀತಗಳಲ್ಲಿ ನಿರತನಾಗಿರುತ್ತಿದ್ದನು. ಆಧ್ಯಾತ್ಮದಿಂದ ಆಕರ್ಷಿತನಾಗಿದ್ದ ಮೊದಲನೆಯ ಅಲಿ ಆದಿಲಶಹನು ಸನ್ಯಾಸಿಯಂತೆ ಬಟ್ಟೆ ತೊಡುತ್ತಿದ್ದ. ಹಿಂದು -ಮುಸ್ಲಿಮ ಸಂತರೊಂದಿಗೆ ಚರ್ಚೆಯಲ್ಲಿ ನಿರತನಾಗಿರುತ್ತಿದ್ದ. ಅವನ ಹೆಂಡತಿ ಚಾಂದಬೀಬಿ ಸುಪ್ರಸಿದ್ಧ ಕಲಾವಿದೆ, ಕವಯಿತ್ರಿ.

ಎರಡನೆಯ ಇಬ್ರಾಹಿಮ ಆದಿಲಶಹನ ಆಸ್ಥಾನದಲ್ಲಿ ಮುನ್ನೂರು ಜನ ಹಿಂದು ಕವಿ -ಸಾಹಿತಿ- ಸಂಗೀತಗಾರರು ಇದ್ದರೆಂದು ಪ್ರತೀತಿ ಇದೆ. ಆತ ಸ್ವತ: ಕೃತಿಕಾರ ಅವನ ಕಾವ್ಯ 'ಕಿತಾಬ-ಇ-ನೌರಸ' ಉತ್ತರಾದಿ ಸಂಗೀತವನ್ನು ಪರಿಚಯಿಸುವ ಹಿಂದು ದೇವ -ದೇವತೆಗಳ ಆವಾಹನೆಯನ್ನು ಮಾಡಿದ ದಖಣಿ ಭಾಷೆಯ ಕೃತಿ.

ಮೊದಲನೆಯ ಇಬ್ರಾಹಿಮ್ ಆದಿಲಶಹನ (೧೫೩೪-೧೫೫೭) ಕಾಲದಿಂದಲೇ ದಖಣಿ ಭಾಷೆಗೆ ರಾಜಾಶ್ರಯ ದೊರೆಯಿತು. ಆತನ ಕಾಲದಲ್ಲಿ ಧರ್ಮ ಪ್ರಚಾರಕ್ಕೆಂದೇ ಬಂದ ಶಾಹ ಮಿರಾಂಜಿಯು ದಖಣಿ ಭಾಷೆಯಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಅವನ 'ಖುಶನಾಮಾ' ಎಂಬ ಕಾವ್ಯ ಬಹು ಪ್ರಸಿದ್ಧವಾಗಿದೆ. ಇಲ್ಲಿಯ 'ಖುಶ್', ನಿಷ್ಕಾಮ, ವಿರಕ್ತೆ ಹಾಗೂ ದೈವಭಕ್ತ ತರುಣ ಯುವತಿಯ ಹೆಸರು. ಖುಶ್ ಎಂದರೆ ಸಂತೋಷ, ಸಂತುಷ್ಟಿ ಎಂಬ ಅರ್ಥವೂ ಉಂಟು. ಈ ಖುಶ್‌ದ ಇತಿಹಾಸವೇ 'ಖುಶ್‌ನಾಮಾ' ಕಾವ್ಯದ ವಿಷಯ. ಕಾವ್ಯದಲ್ಲಿ ಒಂದೆಡೆ ಈ ಜಗದ ವಿಷಮತೆಯನ್ನು ವೈಚಿತ್ರ್ಯವನ್ನು ಚಿತ್ರಿಸುತ್ತ ಕವಿ ಹೀಗೆ ಹೇಳುತ್ತಾನೆ.

'ಏಕಸ ಮಾಟೀ ಮೋಲೀ ದೇವೆ ಏಕಸ ಮಾಟೀ ಬಾಜ!
ಕೀತೋ ಭೀಕ ಮಾಂಗಾವೆ ಕೀತೋ ದೇವೇ ರಾಜ।।

ಎಂದು ಮುಂದುವರಿಸುತ್ತ ಈ ಒಂದೇ ನೆಲದಲ್ಲಿ ಹುಟ್ಟಿದ ಒಬ್ಬ ಭಿಕ್ಷೆ ಬೇಡುತ್ತಾನೆ ಇನ್ನೊಬ್ಬ ರಾಜ್ಯವಾಳುತ್ತಾನೆ. ಎಂದು ಅನೇಕ ಉದಾಹರಣೆಗಳನ್ನು ಕೊಡುತ್ತ ಈ ವಿಷಮತೆಯನ್ನು ದೇವರೇ ನಿರ್ಮಾಣ ಮಾಡಿರುವನೆಂದೂ ಆತನ ಶಕ್ತಿ 'ಕರ್ತುಮ್-ಕರ್ತುಮನ್ಯಥಾ' ಕರ್ತುಮ್' ಎಂಬಂತೆ ಇದೆ ಎಂದು ಹೇಳುತ್ತಾನೆ. ಈ ಭಾವನೆ ಭಾರತೀಯ ತತ್ವಜ್ಞಾನದ ತಳಹದಿಯಿಂದ ಬಂದುದೆಂದು ಬೇರೆ ಹೇಳಬೇಕಾಗಿಲ್ಲ.

ಪರ್ಶಿಯನ್ ಆಸ್ಥಾನದ ಭಾಷೆಯಾದದ್ದರಿಂದ ಅದು ಬೆಳೆಯುವುದು ಸಹಜವಾಗಿತ್ತು. ಪರ್ಶಿಯನ್ ಭಾಷೆಯಲ್ಲಿ ಜಾಗತಿಕ ಮಟ್ಟದ ಗದ್ಯ ಪದ್ಯ ಸಾಹಿತ್ಯವು ಇಲ್ಲಿ ನಿರ್ಮಾಣವಾಗಿದೆ. ಮಹ್ಮದ ಕಾಸೀಮ ಫಿರಿಶ್ತಾನ ಇತಿಹಾಸ ಗ್ರಂಥ 'ಗುಲ್ಶನೇ-ಇಬ್ರಾಹಿಮೀ' ಇತಿಹಾಸದಷ್ಟೇ ಶ್ರೇಷ್ಠ ಮಟ್ಟದ ಗದ್ಯಗ್ರಂಥವೆಂದು ಇಂದಿಗೂ ಪರಿಗಣಿತವಾಗಿದೆ. ಅವನ ಸಮಕಾಲೀನ ಶ್ರೇಷ್ಠ ಕವಿ 'ಜುಹುರಿ'ಯ ಕಾವ್ಯ ಇಂದಿಗೂ ವಿಶ್ವದಾದ್ಯಂತ ಅಭ್ಯಾಸಗೊಳ್ಳುತ್ತಲಿದೆ. ಜೊತೆಗೆ ಇಲ್ಲಿಯೇ ಹುಟ್ಟಿ ಬೆಳೆದು ಪುಷ್ಟಿಗೊಂಡ ದಖಿಣಿ ಭಾಷೆಯಲ್ಲಿ ನೂರಾರು ಕೃತಿಗಳು ಇಲ್ಲಿ ರಚಿತವಾಗಿವೆ. ಆಧ್ಯಾತ್ಮ -ಇತಿಹಾಸ -ಶೃಂಗಾರ ಕೃತಿಗಳು ದಖಿಣಿ ಭಾಷೆಯಲ್ಲಿ ಇಲ್ಲಿ ರಚಿತಗೊಂಡಷ್ಟು ಬೇರೆಲ್ಲೂ ದೊರೆಯುವುದಿಲ್ಲ. ಈ ಮೊದಲೇ ಹೇಳಿದ ಶಾಹಮಿರಾಂಜಿಯ 'ಖುಶ್‌ನಾಮಾ'ದ ಜೊತೆಗೆ ಮುಲ್ಲಾ ನುಸ್ರತಿಯ 'ಗುಲ್ಶನೇ-ಇಶ್ಕ' ಹಾಗೂ 'ಸಿಕಂದರನಾಮಾ', ಅಬ್ದುಲ್ಲಾ ದೇಹಲವಿಯ 'ಇಬ್ರಾಹಿಮನಾಮಾ' ಹಾಗೂ ಮಹ್ಮದ ಬಹರಿಯ 'ಮನಲಗನ' ಇತ್ಯಾದಿ ಕೆಲವು ಕೃತಿಗಳನ್ನು ಇಲ್ಲಿ ಹೆಸರಿಸಬಹುದು.

ಕನ್ನಡ ಹಾಗೂ ಮರಾಠಿ ಭಾಷೆಗಳಿಗೆ ರಾಜಾಶ್ರಯವಿದ್ದ ಸ್ಪಷ್ಟ ಉಲ್ಲೇಖಗಳು ದೊರೆಯದಿದ್ದರೂ ಎರಡನೆಯ ಇಬ್ರಾಹಿಮ ಆದಿಲಶಹನು 'ಅಂತೂಪಂಡಿತ'ನೊಡನೆ ಆಸ್ಥಾನದಲ್ಲಿ ಮರಾಠಿ ಭಾಷೆಯಲ್ಲಿಯೇ ಮಾತನಾಡುತ್ತಿದ್ದನೆಂದು ಮೊಗಲ ರಾಯಭಾರಿ ಅಸದ ಬೇಗನು ತನ್ನ ನೆನಪುಗಳಲ್ಲಿ ಬರೆದಿಟ್ಟಿದ್ದಾನೆ //೪//.

ಮರಾಠಿಯ ವಾಮನ ಪಂಡಿತ, ತುಕಾರಾಮ ಹಾಗೂ ರಾಮದಾಸರ ಸಾಹಿತ್ಯ ಸೃಷ್ಟಿ ಪ್ರಾರಂಭವಾದದ್ದು ವಿಜಾಪುರದಿಂದ. ಅದರಂತೆ ಕನ್ನಡ ಭಾಷೆಯಲ್ಲಿ ಕೃತಿಗಳನ್ನು ರಚಿಸಿದ ಕವಿಗಳ ಒಂದು ದೊಡ್ಡ ಪಟ್ಟಿಯನ್ನೇ ಉದಾಹರಿಸಬಹುದು. ರುಕ್ಮಾಂಗದ ಪಂಡಿತ, ಮಹಿಪತಿ, ಕೃಷ್ಣದಾಸ, ಯತಿರಾಯ, ಶ್ರೀಪತಿ, ಶ್ರೀಪತಿ ತನುಜ, ಭೀಮಾಶಂಕರ, ಜಕ್ಕಪ್ಪಯ್ಯ, ಶಿವರಾಮ, ಚಿದಾನಂದ, ಮುದ್ಗಲ್ ಕೃಷ್ಣದಾಸ, ಗಲಗಲಿ ಅವ್ವ, ಪ್ರಯಾಗಾ ಬಾಯಿ ಇತ್ಯಾದಿ ಸ್ತ್ರೀಪುರುಷರು ಕನ್ನಡದಲ್ಲಿ ಸಾಹಿತ್ಯವನ್ನು ರಚಿಸಿದ್ದಾರೆ. ಅವರೆಲ್ಲರನ್ನೂ ಇಂದು ಮಹಾನುಭಾವರೆಂದು ಗುರುತಿಸಿದರೂ ಅವರು ಅಪರೂಪದ ಸಾಹಿತ್ಯವನ್ನು ಸೃಷ್ಟಿಸಿದ್ದರೆಂಬುದು ಇದೀಗ ಗೊತ್ತಾಗಿದೆ. ದೊರೆತ ಹಸ್ತಪ್ರತಿಗಳಲ್ಲಿ ಈ ಮೇಲೆ ಹೇಳಿದ ಎಲ್ಲರ ಕೃತಿಗಳಲ್ಲದೆ, ಗುರುತಿಸಬೇಕಾದ ಇನ್ನೂ ಹಲವಾರು ಕೃತಿಗಳು ದೊರೆತಿವೆ.

ದೇಶೀ ಭಾಷೆಗಳಲ್ಲಿಯ ಸಾಹಿತ್ಯದ ಒಂದು ವೈಶಿಷ್ಟ್ಯವೆಂದರೆ ಇಲ್ಲಿಯ ಕವಿ-ಸಾಹಿತಿಗಳು ತಮ್ಮ ಕೃತಿಗಳಲ್ಲಿ ಬಹು ಭಾಷೆಗಳನ್ನು ಉಪಯೋಗಿಸಿದ್ದಾರೆ.

ಇನ್ನೊಂದು ಭಾಷೆಯ ಪ್ರಭಾವ ದಟ್ಟವಾದಾಗ ಆ ಭಾಷೆಯ ಶಬ್ದಗಳು ಸ್ಥಳೀಯ ಭಾಷೆಯ ಕೃತಿಗಳಲ್ಲಿ ಬರುವುದು ಆಶ್ಚರಿಯ ವಿಷಯವೇನಲ್ಲ. ಆದರೆ ಮೂರು -ನಾಲ್ಕು ಭಾಷೆಗಳನ್ನು ಉಪಯೋಗಿಸಿ ಕೃತಿಗಳನ್ನು ರಚಿಸುವುದು ಚೋದ್ಯವೇ ಸೈ.

ಸ್ಥಳೀಯ ವಾತಾವರಣದಲ್ಲಿ ಬಹುತೇಕ ಒಂದು ಪಂಡಿತ ಮಾನ್ಯರು ಬಹು ಭಾಷಾ ವಿಶಾರದರಾಗಿದ್ದರು. ಪರ್ಶಿಯನ್, ದಖಣಿ, ಮರಾಠಿ, ಕನ್ನಡ ಹಾಗೂ ತೆಲಗು ಈ ಐದೂ ಭಾಷೆಗಳಲ್ಲಿ ಪರಿಣತರಾಗಿದ್ದ ಪಂಡಿತರನ್ನು ಕವಿಗಳನ್ನು ದಾಸರನ್ನು ಆ ಕಾಲದ ವಿಜಾಪುರದಲ್ಲಿ ಕಾಣುತ್ತೇವೆ. ಎಲ್ಲರಿಗೂ ತಿಳಯಲೆಂದೋ ಅಥವಾ ಅನ್ಯ ಭಾಷಿಕರನ್ನು ಆಕರ್ಷಿಸಲೆಂದೋ ಈ ಜನ ಮೂರು ನಾಲ್ಕು ಭಾಷೆಗಳನ್ನು ಉಪಯೋಗಿಸಿ ಪದ -ಪದ್ಯ -ಕಾವ್ಯಗಳನ್ನು ರಚಿಸಿದ್ದಾರೆ. ಮಹಿಪತಿರಾಯರ 'ಬಾಟ ಪಕಡೋ ಸೀದಾ' ಎಂಬ ಕೃತಿಯಲ್ಲಿ ಮೂರು ಭಾಷೆಗಳಿದ್ದರೆ ಅವರದೇ ಆದ ಇನ್ನೊಂದು ಪದ್ಯದಲ್ಲಿ ಐದು ಭಾಷೆಗಳಿವೆ.

'ಸಮಜೋ ಭಾಯಿ ಸಕುನಾಚಾರೋ ಖುದಾಕಾ।
ತೆಲಗು ಕನ್ನಡ ತುರುಕಾರೆ ವಂದೇ ಸುಖಿ।। ಧ್ರು।।
ದೇಖೋ ಭಾಯಿ ವಿಸತಾ ತುಮನಾ ನಜರೋಮೆ ನಜರೋಮೆ।
ತನ್ನೊಳಗದೆ ಅತಿಸೂಕ್ಷ್ಮವಾಗಿ ತಿಳಕೋಮೆ ತಿಳಕೋಮೆ।
ಸದ್ಗುರು ವಚನ ಶೋಧುನಿ ಪಾಹಾ ಸಪ್ರೇಮ ಸಪ್ರೇಮ।
ಚುಡವಯ್ಯ ಉನ್ನದಿ ಪೂರ್ಣ ಘನ ಮಹಿಮ ।।೧।।
ಘ್ಯಾರೆ ವಳಖುನಿ ಸಾರಾ ಸಾರಾ ನಿವಡೂನಿ ನಿವಡೂನಿ।
ನಜರ ಹುಜರ ದೇಖೋ ಯಾರಾ ಹೈಗನೀ ಹೈಗನೀ।
ಜನ್ಮಕ ಬಂದು ಮಾಡುವದೇ ಸಾಧನೀ ಸಾಧನೀ।
ಮಂಚಿ ಉನ್ನದಿ ನ ಕಳೆ ಸದ್ಗುರು ಪಾಯೋನಿ ।।೨।।
ಎಲ್ಲಾ ಒಂದೇ ಮಾತಿನ ಸೊಗಸು ಶಿವನಾಟಾ ಶಿವನಾಟಾ।
ಆಪಸಮೆ ಆಪ ಲಥ ನಾ ಸಬ ಝೂಟಾ ಸಬ ಝೂಟಾ।
ಚೆಪ್ಪವಯ್ಯಾ ಎಂದರೆ ಹೇಳುವ ಗುರು ನೀತಾ ಗುರು ನೀತಾ।
ಆನಂದ ಆಹೆ ಮಹಿಪತೀಸ ಸುಖಿ ಮೋತಾ ।।೩।।

ಪದ್ಯದ ಅರ್ಥವನ್ನಾಗಲೀ, ಉದ್ದೇಶವನ್ನಾಗಲೀ, ಹೇಳುವ ಅಗತ್ಯವಿಲ್ಲ. ಭಾಷೆ, ಧರ್ಮ ಯಾವುದಿದ್ದರೇನು ದಾರಿ ಒಂದೆ. ಇದು ಮಹಿಪತಿರಾಯರ ಸಾಹಿತ್ಯ ಸೃಷ್ಟಿಯ ವಿಶಾಲ ದೃಷ್ಟಿ. ಸಿಂದಗಿಯ ಚಕ್ಕಪ್ಪಯ್ಯನ 'ಅಗ್ನಿ ಪರೀಕ್ಷೆ' ಎಂಬ ಕಾವ್ಯವು ಕನ್ನಡ ಮರಾಠಿ ದ್ವಿಭಾಷೆಯಲ್ಲಿದೆ. ಒಂದೇ ಕಥೆಯನ್ನು ಎರಡು ಭಾಷೆಗಳಲ್ಲಿ ಹೇಳುತ್ತ ಹೋದ ಉದಾಹರಣೆ ಬಹುಶಃ ಬೇರೆ ಯಾವ ಭಾಷೆಗಳ ಇತಿಹಾಸದಲ್ಲೂ ದೊರೆಯಲಿಕ್ಕಿಲ್ಲ.

ಶ್ರೀ ರಾಮಚಂದ್ರ ಅನುಸಂಧಾನ ಅಥವಾ ಅಗ್ನಿಪರೀಕ್ಷೆ ಎಂಬ ಹೆಸರಿನ ಕಾವ್ಯವು ಮರಾಠಿ ಚಾಮರಿ ವೃತ್ತದಲ್ಲಿ ಪ್ರಾರಂಭವಾಗುತ್ತದೆ.

ಗಣೇಶ ಅಂಬಾ ವಿಷ್ಣು ಸಾಂಬಾ ಸೂರ ಕದಂಬ ವಂದುನೀ।
ದಿನೇಶ ಸದ್ಗುರು ಪರೇಶ ಪಾದ ಪದ್ಮ ಚಿಂತುನೀ॥

ಎಂದು ಮರಾಠಿ ಭಾಷೆಯಲ್ಲಿ ದೇವತಾ ಸ್ತುತಿಯನ್ನು ಮಾಡಿ ಐದು ನುಡಿಗಳ ಅನಂತರ ಕಥೆಯನ್ನು ಕನ್ನಡದ ವಾರ್ಧಕ ಷಟ್ಪದಿಯಲ್ಲಿ ಮುಂದುವರಿಸಲಾಗಿದೆ.

'ಆಗ ಬಳಿಕಲ್ಲಿಂದ ಕಪಿವೃಂದವುಂ ಕೂಡಿ।
ರಾಘವೇಂದ್ರ ತೆಂಕಡಲ ತೀರಕ ಬರಲು।
ಪೋಗಿ ಕಾಂಬುವೆನೆಂದು ಬಂದ ವಿಭೀಷಣಗೆ ಲಂಕಾಧಿಪತ್ಯ ಕೊಟ್ಟಾ॥

ಹೀಗೆ ಷಟ್ಪದಿಯಲ್ಲಿ ಮೂರು ನುಡಿಗಳು ಅನಂತರ ಕನ್ನಡದಲ್ಲಿಯೇ ಒಂದುಪದ ಮತ್ತೆ ಮರಾಠಿಯಲ್ಲಿ ಕಥೆ ಸಾಗುತ್ತದೆ. ಕನ್ನಡದ ವಿವಿಧ ಷಟ್ಪದಿಗಳನ್ನು, ಕಂದ ಹಾಗೂ ಪದಗಳನ್ನು ಕಾವ್ಯದಲ್ಲಿ ಬಳಸಿದ್ದರೆ ಮರಾಠಿಯಲ್ಲಿ ಕೂಡ ವಿವಿಧ ವೃತ್ತಗಳನ್ನು ಶ್ಲೋಕ ಇತ್ಯಾದಿಗಳನ್ನು ಕವಿ ಬಳಸಿದ್ದಾನೆ.

ಅನ್ಯದೇಶದ ಭಾಷೆ ಹಾಗೂ ಧರ್ಮದ ಆಕ್ರಮಣದಿಂದ ರೋಸಿ ಹೋದ ಜನ ತಮ್ಮ ಧರ್ಮವನ್ನು ಉಳಿಸಲು ಉಭಯ ಭಾಷಿಕರನ್ನು ಆಕರ್ಷಿಸಲು ಈ ರೀತಿಯ ಬರವಣಿಗೆಯ ಪ್ರಯತ್ನವನ್ನು ಮಾಡಿರಲೂ ಬಹುದು.

ಹಿಂದುಗಳಂತೆ ಮುಸ್ಲಿಮರು ಕೂಡ ತಮ್ಮ ಕೃತಿಗಳಲ್ಲಿ ಸಂಸ್ಕೃತ, ಕನ್ನಡ ಮರಾಠಿ, ತೆಲಗು ಭಾಷೆಯ ಪದಗಳನ್ನು ಧಾರಾಳವಾಗಿ ಬಳಸಿದ ನಿದರ್ಶನಗಳೂ ಉಂಟು.

ಹೀಗೆ ವಿಜಾಪುರದಲ್ಲಿ ಅಂದು ಹಲವಾರು ಭಾಷೆಗಳ ಸಂಗಮವಾಗಿ ಪರಸ್ಪರ ಪ್ರಭಾವಗಳಿಂದ ಬೇರೆ -ಬೇರೆ ರೀತಿಯ ಸಾಹಿತ್ಯ ಕೃತಿಗಳು ರೂಪುಗೊಂಡಿದ್ದನ್ನು ಕಾಣುತ್ತೇವೆ.

ಮಹಿಪತಿರಾಯರು ಬಾಳಿ ಬದುಕಿದ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಭಾಷೆ ಸಾಹಿತ್ಯಗಳ ಕಿರುಚಿತ್ರವನ್ನು ನೋಡಿದ ಮೇಲೆ ಈಗ ಭಕ್ತಿ ಮಾರ್ಗದ ಕುರಿತು ಚರ್ಚಿಸುತ್ತ ವಿಶೇಷತ: ಕರ್ನಾಟಕದಲ್ಲಿ ಭಕ್ತಿ ಮಾರ್ಗ ಬೆಳೆದು ಬಂದ ಬಗೆಯನ್ನು ಸಂಕ್ಷಿಪ್ತವಾಗಿ ಚರ್ಚಿಸುತ್ತ, ಆ ಮಾರ್ಗದಲ್ಲಿ ನಡೆದು ಸಿದ್ಧಿಯನ್ನು ಪಡೆದ ರಾಯರ ಸಮಕಾಲೀನ ಕೆಲವರ ಪರಿಚಯವನ್ನು ಮಾಡಿಕೊಳ್ಳಬಹುದು.

## ೩.೨ ಸಮಕಾಲೀನರು

### ೩.೨.೧ ಭಕ್ತಿ ಮಾರ್ಗಪ್ರವರ್ತಕರು:-

ನಮ್ಮ ದೇಶದಲ್ಲಿ ಭಕ್ತಿ ಹಾಗೂ ಭಕ್ತಿಮಾರ್ಗದ ಕುರಿತು ನಡೆದ ಚರ್ಚೆ ತುಂಬ ಹಳೆಯದು. ಭಕ್ತಿ ಮಾರ್ಗವು ಬಹು ಪ್ರಾಚೀನವೆಂದು ಹೇಳುತ್ತ ಅದನ್ನು ವೇದ ಉಪನಿಷತ್ಕಾಲದ ವರೆಗೂ ತೆಗೆದುಕೊಂಡು ಹೋಗಿದ್ದಾಗಿದೆ. ಶಾಂತಿಪಾಠದಲ್ಲಿ ಬರುವ,

'ಓಂ ಭದ್ರಮ್ ಕರ್ಣೇಭಿ: ಶ್ರುಣುಯಾಮ ದೇವಾ:
ಭದ್ರಂ ಪಶ್ಯೇಮಾಕ್ಷಭಿರ್ಯಾ ಜತ್ರಾ:।।

ಹಾಗೂ

'ಮಧುವಾತಾ ರಿತಾಯತೆ ಮಧುಕ್ಷರಾಂತಿ ಸಿಂಧವಾ:'

ಇತ್ಯಾದಿ ಪ್ರಾರ್ಥನೆಗಳಲ್ಲೂ ಹುಡುಕಿದ್ದಾಗಿದೆ. ನಾರದೀಯ ಭಕ್ತಿಸೂತ್ರಗಳಂತೂ ಸರಿಯೆ.

'ಧ್ಯಾಯನ್ ಕೃತೇ ಯಜನ್ ಯಜ್ಞೈ:। ತ್ರೇತಾಯಾಂ ದ್ವಾಪರೇಽರ್ಚಯನ್।
ಯದಾಪ್ನೋತಿ ತದಾಪ್ನೋತಿ। ಕಲೌ ಸಂಕೀರ್ತ್ಯ ಕೇಶವಮ್।।

ಎಂದು ಕಲಿಯುಗದಲ್ಲಿ ಭಕ್ತಿಮಾರ್ಗದಿಂದ ಭಗವಂತನ ಸಂಕೀರ್ತನೆಯಿಂದ ಮಾತ್ರ ಮುಕ್ತಿಯನ್ನು ಪಡೆಯಬಹುದೆಂದು ಹೇಳಿದರು.

'ಉತ್ಪನ್ನಾ ದ್ರಾವಿಡೇ ಸಾಹಂ ವೃದ್ಧಿಂ ಕರ್ನಾಟಕೇ ಗತಾ।
ಕ್ವಚಿತ್ ಕ್ವಚಿನ್ಮಹಾರಾಷ್ಟ್ರೇ ಗೂರ್ಜರೇ ಜೀರ್ಣತಾಂ ಗತಾ।।

ಎಂದು ಪದ್ಮಪುರಾಣದ ಈ ಶ್ಲೋಕವನ್ನು ಉದ್ಧರಿಸುತ್ತ ಭಕ್ತಿ ಪ್ರವಾಹವು ಹುಟ್ಟಿ ಬೆಳೆದು ಬಂದ ಬಗೆಯನ್ನು ಕೊನೆಗೆ ಜೀರ್ಣಾವಸ್ಥೆಗೆ ಬಂದುದನ್ನೂ ಹೇಳುತ್ತಾರೆ.

ವಾಸ್ತವದಲ್ಲಿ ನಮ್ಮ ಪ್ರಾಚೀನ ಪರಂಪರೆ ಹಾಗೂ ತತ್ವಜ್ಞಾನದಲ್ಲಿ ಮೋಕ್ಷಕ್ಕೆ ಮೂರು ಮುಖ್ಯ ದಾರಿಗಳನ್ನು ಸೂಚಿಸಲಾಗಿದೆ. ಜ್ಞಾನ, ಕರ್ಮ ಹಾಗೂ ಭಕ್ತಿ. ಈ ಮೂರು ಮುಖ್ಯ ದಾರಿಗಳಿಂದ ಮನುಷ್ಯ ಮುಕ್ತಿಯನ್ನು ಹೊಂದುತ್ತಾನೆ. ಇವುಗಳಲ್ಲಿಯ ಭಕ್ತಿಮಾರ್ಗವನ್ನು ನಾವು ಎಷ್ಟೇ ಪ್ರಾಚೀನವೆಂದರೂ ಕೂಡ ಕ್ರಿ.ಶ. ಹತ್ತು -ಹನ್ನೊಂದನೆಯ ಶತಮಾನಕ್ಕಿಂತ ಮೊದಲು ಅದರ ಅಸ್ತಿತ್ವವನ್ನು ಹುಡುಕುವುದು ಕಠಿಣ. ಅದರೆಗೂ ಜ್ಞಾನ -ಕರ್ಮ ಮಾರ್ಗಗಳೇ ಪ್ರಧಾನವಾಗಿದ್ದವು. ಮತ್ತು ಅದರಿಂದಾಗಿ ತತ್ವ ಚಿಂತಕರಿಗೂ ಜನಸಾಮಾನ್ಯರಿಗೂ ಮಧ್ಯದಲ್ಲಿ ಆಳವಾದ ಕಂದರವಿತ್ತು. ಯಾಕೆಂದರೆ ವೈದಿಕ ಸಂಸ್ಕೃತಿಯ ಆತ್ಮ ಎನಿಸಿದ ಸಂಸ್ಕೃತದಲ್ಲಿಯ ಜ್ಞಾನಭಾಂಡಾರವು ಜನಸಾಮಾನ್ಯರಿಗೆ ನಿಲುಕುವಂಥದ್ದಾಗಿರಲಿಲ್ಲ. ಜ್ಞಾನಿಗಳು ತತ್ವ ಚಿಂತನೆಯಿಂದ - ಜ್ಞಾನಮಾರ್ಗದಿಂದ ಮೋಕ್ಷವನ್ನು ಪಡೆಯುತ್ತಿದ್ದರೆ ಜನಸಾಮಾನ್ಯರು ತಮ್ಮ 'ಕರ್ಮ' ದಲ್ಲಿಯೇ ಮುಕ್ತಿಯನ್ನು ಪಡೆಯುತ್ತಿದ್ದರು. ಅವರಿಗೆ ತಮ್ಮ ಮಧ್ಯೆದಲ್ಲಿದ್ದ ಕಂದರದ ಅರಿವಿನ ಅವಶ್ಯಕತೆಯೂ ಇರಲಿಲ್ಲ. ಆದರೆ

ಮಧ್ಯೆಯುಗದಲ್ಲಿ ಪರಕೀಯರ ದಾಳಿಗಳಿಂದ, ಅನ್ಯದರ್ಮದ ರಾಜ್ಯ ಸ್ಥಾಪನೆಯಿಂದ ಹಿಂದು ಧರ್ಮ -ಸಂಸ್ಕೃತಿಗಳ ಮೇಲಾದ ಆಕ್ರಮಣದ ಅರಿವು ಆಗಹತ್ತಿತು. ಈ ಅನಿರೀಕ್ಷಿತ ಆಘಾತವನ್ನು ಸಹಿಸುವುದು ಇಲ್ಲಿಯ ಯಾರಿಂದಲೂ ಸಾಧ್ಯವಾಗಲಿಲ್ಲ. ಆಗ ಧರ್ಮದ ಸಂಸ್ಕೃತಿಯ ಸಂರಕ್ಷಣೆಯ ಅಗತ್ಯ ಕಂಡು ಬಂದಿತು. ಅದನ್ನು ತಿಳಿದುಕೊಳ್ಳಲು ಪಂಡಿತ ಪಾಮರರ ಮಧ್ಯದಲ್ಲಿದ್ದ ಕಂದರದ ಅರಿವು ಈಗ ಉಭಯತರಿಗೂ ಆಗಹತ್ತಿತು. ಅಂತೆಯೇ ಉಭಯತರಿಗೂ ಅರ್ಥವಾಗುವಂಥ, ಭಾರತೀಯ ಧರ್ಮ ಸಂಸ್ಕೃತಿಗಳ ಸಂರಕ್ಷಣೆಗೆ ಅಗತ್ಯವಾದ ಒಂದು ಹೊಸ ದಾರಿಯ ಅಗತ್ಯ ಕಂಡು ಬಂದಿತು. ಮೂರ್ತಿ ಭಂಜಕ ಮುಸ್ಲಿಮರು ತಮ್ಮ ಧರ್ಮ ಪ್ರಸಾರಕ್ಕೆ ತೊಡಗಿದಾಗ ಈ ದೇಶದ ಜನಸಾಮಾನ್ಯರಿಗೆ ಅವರಿಗೆ ತಿಳಿಯುವ ಭಾಷೆಯಲ್ಲಿ ತಮ್ಮ ಧರ್ಮ ಸಂಸ್ಕೃತಿಗಳ ಕುರಿತು ಹೇಳುವ ಸಂದರ್ಭ ಈಗ ಒದಗಿ ಬಂದಿತು. 'ಘಟ ಪಟಗಳ ಚಕ್ರವ್ಯೂಹದಲ್ಲಿ ಕೆಡವದೆ ಸುಲಭವಾದ ಭಾಷೆಯನ್ನು ಬಳಸಿ ಧರ್ಮ ಜಾಗೃತಿಯನ್ನು ಮಾಡಲೇಬೇಕಾಯಿತು. ಅಂತೆಯೇ 'ಭಾರತದಲ್ಲಿ ಧಾರ್ಮಿಕ ಆಂದೋಲನಗಳಿಗೆ ಮಧ್ಯಯುಗದಲ್ಲಿ ಸಾಮಾಜಿಕ ಸ್ವರೂಪ ಬಂದಿತು' ಅದುವೆ ಭಕ್ತಿ ಪ್ರವಾಹವೆನಿಸಿತು.

ಉತ್ತರ ಭಾರತದಲ್ಲಿ ಭಕ್ತಿಪ್ರವಾಹದ ಮುಂಚೂಣಿಯಲ್ಲಿದ್ದವರು ರಾಮಾನಂದರು. ಇಲ್ಲಿ ಮುಸ್ಲಿಮರ ಪ್ರಾಬಲ್ಯ ಹೆಚ್ಚಾದಂತೆ ಹಿಂದು ಧರ್ಮವನ್ನು ಉಳಿಸುವ ಕಳಕಳಿಯಲ್ಲಿ ಉದಾರ ನೀತಿಯನ್ನು ಅನುಸರಿಸಿದ್ದನ್ನೂ ಕಾಣುತ್ತೇವೆ. ಜಾತಿ, ಮತ, ಪಂಥ, ಹಾಗೂ ಲಿಂಗ ಭೇದವಿಲ್ಲದೆ ಈ ಭಕ್ತಿ ಚಳುವಳಿಯಲ್ಲಿ ಜನರು ಸಾಮೂಹಿಕವಾಗಿ ಭಾಗವಹಿಸಿದ್ದು ಗಮನಾರ್ಹವಾಗಿದೆ. ರಾಮ-ರಹೀಮ, ಕೃಷ್ಣ-ಕರೀಮ, ಕಾಶಿ-ಕಾಬಾಗಳು ಒಂದಾಗಿದ್ದುದು ಈ ದಿನಗಳಲ್ಲಿಯೆ. ರಾಮಾನಂದರ ಹನ್ನೆರಡು ಜನರ ಶಿಷ್ಯರುಗಳಲ್ಲಿ ಉಚ್ಚಜಾತಿಯವರಲ್ಲದೆ ಜಾಟರ, ಧನಾ, ಕ್ಷೌರಿಕರ ಸೇನ, ಸಮಗಾರ ರಾಯಿದಾಸ ಹಾಗೂ ಮುಸಲ್ಮಾನರ ಕಬೀರರರೂ ಇದ್ದರು.

ಕರ್ನಾಟಕದಲ್ಲಿ ಈ ಭಕ್ತಿ ಮಾರ್ಗ ಪ್ರವಾಹವು ಎರಡು ಹಂತಗಳಲ್ಲಿ ಬೆಳೆದು ಹರಿದದ್ದನ್ನು ಕಾಣುತ್ತೇವೆ. ಪ್ರಾರಂಭದಲ್ಲಿ ವೈದಿಕ ಹಾಗೂ ಜೈನ ಧರ್ಮಗಳ ವಿರುದ್ಧವಾಗಿ ಎದ್ದು ನಿಂತ ಶಿವಶರಣರ ಕ್ರಾಂತಿಯ ಮೂಲ ಬೀಜ ಭಕ್ತಿಯದೇ ಆಗಿದ್ದಿತು. ಸಾಮಾಜಿಕ ಅಸಮಾನತೆಯ ವಿರುದ್ಧ ಬಂಡೆದ್ದ ಬಸವಣ್ಣ ಮತ್ತು ಅವನ ಅನುಯಾಯಿಗಳ ಧ್ವನಿ, ಶತ -ಶತಮಾನಗಳಿಂದ ಬಂದ ಅರ್ಥವಿಲ್ಲದ ಆಚಾರಗಳ ಅಂಧಾನುಕರಣೆಯ ವಿರುದ್ಧವಾಗಿತ್ತು. ಮತ್ತು ಅದು ಸರಳ ಭಾಷೆಯ ಜನಭಾಷೆಯಲ್ಲಿತ್ತು. ಅಂತೆಯೇ ಅವರು ಬಹುಬೇಗ ಸಾಮಾನ್ಯ ಜನತೆಯ ಹತ್ತಿರ ಬರಲು ಕಾರಣವಾಯಿತು. ಆದರೆ ಅಷ್ಟೇ ಬೇಗ ಕಣ್ಮರೆಯೂ ಆದರು. ಅದಕ್ಕೆ ಕಾರಣ

ಬಹುಶ: ಅವರ ವಿರೋಧವಿದ್ದದ್ದು ಈ ನೆಲದಲ್ಲಿಯೇ ಹುಟ್ಟಿ ಬೆಳೆದ ಸಂಪ್ರದಾಯ, ಆಚಾರ ವಿಚಾರಗಳಾಗಿದ್ದುದು ಆಗಿರಬೇಕು. ಜೊತೆಗೆ ಶರಣರು ವಿರೋಧಿಸುತ್ತಿದ್ದ ಧರ್ಮ ಸಂಸ್ಕೃತಿಗಳಿಗೆ ಆಳರಸರು ಬದ್ಧರಾಗಿದ್ದರು. ಆದ್ದರಿಂದ ಶರಣರ, ಕ್ರಾಂತಿಯ ಅರ್ಥವಾಗಲು ಮತ್ತೆ ನಾಲ್ಕು ಶತಮಾನಗಳೇ ಬೇಕಾದವು. ಈಗ ಭೂಮಿ ಹದವಾಗಿತ್ತಾದರೂ ಬಸವಣ್ಣನವರು ಬಿತ್ತಿದ ಬೀಜದ ಕಸುವು ಕಳೆದದ್ದರಿಂದ ಕ್ರಾಂತಿಯು ಸೀಮಿತವಾಗಿ ಉಳಿದದ್ದು ದುರಂತವೇ ಸೈ.

ಎರಡನೆಯ ಹಂತದಲ್ಲಿ ಉಚ್ಚ ವರ್ಗದ ಬ್ರಾಹ್ಮಣರು ಈ ಭಕ್ತಿಮಾರ್ಗದಲ್ಲಿ ಈಜಿದರು. ವೈಷ್ಣವ -ಬ್ರಾಹ್ಮಣರು ಈ ಆಂದೋಲನದಲ್ಲಿ ಅಧಿಕ ವಾಗಿದ್ದುದರಿಂದ ಬಹುಶ: ಅದಕ್ಕೆ 'ಹರಿದಾಸ ಕೂಟ' ಎಂಬ ಹೆಸರು ಬಂದಿರಬೇಕು. ಆದರೆ ಆಂದೋಲನವು ಬ್ರಾಹ್ಮಣರಿಗಷ್ಟೇ ಸೀಮಿತವಾಗಿರಲಿಲ್ಲ ಎಂಬುದನ್ನು ದಾಸರ ಕೃತಿಗಳಿಂದಲೇ ಅರಿಯಬಹುದಾಗಿದೆ. ಯಾಕೆಂದರೆ 'ಹರಿದಾಸ ತತ್ವ ಅನಾದಿ ನಿತ್ಯವಾದದ್ದು ಹರಿದಾಸರು ಕನ್ನಡಿಗರೇ ಆಗಿರಬೇಕೆಂಬ ಅಟ್ಟಹಾಸವಿರಬಾರದು' ಅಷ್ಟೇ ಅಲ್ಲ ಅವರು ಮಾಧ್ವ ಬ್ರಾಹ್ಮಣರೇ ಆಗಿರಬೇಕೆಂಬ ಹಟವೂ ಇರಬಾರದು ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯ ಇರಲಾರದು.

ವಾಸ್ತವದಲ್ಲಿ ಒಂದು ವಿಶಿಷ್ಟ ಕಾಲದಲ್ಲಿ ಒಂದು ವಿಶಿಷ್ಟ ಧ್ಯೇಯವನ್ನು ಮುಂದಿಟ್ಟುಕೊಂಡು ನಡೆಸಿದ ಸಾಮೂಹಿಕ ಆಂದೋಲನ ಹರಿದಾಸರದಾಗಿತ್ತು. ಕರ್ನಾಟಕದಲ್ಲಿ ಆಗಲೇ ಮುಸ್ಲಿಮ ಧರ್ಮ ನಾಡಿನ ಸುತ್ತಕಡೆಗೂ ಕೈ ಚಾಚಿ, ಉತ್ತರದ ಅರ್ಧ ಭಾಗದಲ್ಲಿ ತನ್ನ ರಾಜ್ಯವನ್ನೇ ಸ್ಥಾಪಿಸಿತ್ತು. ರಾಜಕೀಯವಾಗಿ ಕಂಪಲಿಯ ರಾಜ್ಯಪಾಲ ಹರಿಹರನು ಸಾಧಿಸಿದ್ದನ್ನು, ಸಾಮಾಜಿಕವಾಗಿ -ಧಾರ್ಮಿಕವಾಗಿ ಅದನ್ನು ಉಳಿಸಿಕೊಂಡು ಬರುವ ಜವಾಬ್ದಾರಿ ಜನಸಾಮಾನ್ಯರದಾಗಿತ್ತು. ಅವರಿಗೆ ಅರ್ಥವಾಗುವಂತೆ ಮತ್ತು ಅಷ್ಟೇ ಆಕರ್ಷಕವಾಗುವಂತೆ ತಮ್ಮ ಜವಾಬ್ದಾರಿಯನ್ನು ತಿಳಿಹೇಳುವ ಅವಶ್ಯಕತೆ ಇತ್ತು. ಆ ಕೆಲಸವನ್ನು ಈ ಎರಡನೆಯ ಹಂತದ ಭಕ್ತಿ ಮಾರ್ಗ ಪ್ರವರ್ತಕರು ಮಾಡಿದರೆಂದು ಹೇಳಬಹುದು. ಅದಕ್ಕೆ 'ಹರಿದಾಸ ಕೂಟ' ಎಂಬ ಹೆಸರು ಇಟ್ಟರು. ಈ ಕಾರಣಗಳಿಂದಲೇ ಹರಿದಾಸ ಕೂಟದ ಉಗಮ ಎಂದಾಯಿತು? ಅದರ ಮೂಲಪುರುಷರು ಯಾರು? ಎಂಬ ಪ್ರಶ್ನೆಗಳನ್ನು ಕೇಳುವುದು ಮತ್ತು ಅವುಗಳಿಗೆ ಉತ್ತರಗಳನ್ನು ಹುಡುಕುವುದು ಅಸಂಗತವೆನಿಸುತ್ತದೆ. ಧರ್ಮರಕ್ಷಣೆ ಅವರ ಮೂಲ ಉದ್ದೇಶವಾಗಿತ್ತು. ಉದ್ದೇಶವನ್ನು ಸಾಧಿಸಲು -ತಿಳಿಸಿ ಹೇಳಲು ಮಾಧ್ಯಮ ಒಂದು ಬೇಕಾಗಿತ್ತು. 'ವೀರಶೈವ ವಚನಗಳ ರಚನೆಯಿಂದ ಈ ವಿಷಯದಲ್ಲಿ ಸಾಮೂಹಿಕ ಪ್ರೇರಣೆಯಾಗಿರಬಹುದಾಗಿದೆ' ಎಂಬ ಅಭಿಪ್ರಾಯದಲ್ಲಿ ಸಂದೇಹವೇ ಇಲ್ಲ. ಜನರಾಡುವ ಭಾಷೆಯ ಸರಳ ನಿರೂಪಣೆಗೆ ನೃತ್ಯ ಗೇಯತೆಗಳನ್ನು ಒದಗಿಸಿ ಅದನ್ನು

ಇನ್ನಷ್ಟು ಆಕರ್ಷಕವನ್ನಾಗಿ ಮಾಡಿದರು. ಮೂಲ ಉದ್ದೇಶವನ್ನು ಈಡೇರಿಸುವಾಗ ಲೋಕ ನೀತಿ, ಲೋಕಸಂಗ್ರಹ, ಸಮಾಜೋಪದೇಶ ಅವುಗಳ ಜೊತೆಗೆ ತಾನು ನಂಬಿದ ದೈವ ಹಾಗೂ ಶ್ರದ್ಧೆಗಳ ಕುರಿತು ಹೇಳುವದು ಸಹಜವಾಗಿತ್ತು. ಆದ್ದರಿಂದ ಆವಾಗಾವಾಗ ತಾವು ನಂಬಿದ ತತ್ವ -ಸಿದ್ಧಾಂತಗಳನ್ನು ನವಿರಾಗಿ ಹೇಳಿದರೇ ವಿನ: ಹರಿದಾಸ ಸಾಹಿತ್ಯವು ಒಂದು ತತ್ವದ ಮುಖವಾಣಿಯಾಗಿರಲಿಲ್ಲ ಎಂಬುದನ್ನು ಗಮನಿಸಬೇಕಾಗಿದೆ. ಅದಕ್ಕೆ ಭಾಷೆ, ಮತ, ತತ್ವ ಲಿಂಗಭೇದಗಳಿರಲಿಲ್ಲ. ಅಂತೆಯೇ ಆಸೇತು - ಹಿಮಾಚಲದವರೆಗೆ ಎಲ್ಲೆಲ್ಲಿ ಪರಕೀಯರ ಪ್ರಾಬಲ್ಯ ಹೆಚ್ಚಾಯಿತೋ ಅಲ್ಲೆಲ್ಲ ಜನರು ಈ ಆಂದೋಲನದಲ್ಲಿ ಭಾಗವಹಿಸಿದ್ದಾರೆ.

ಕರ್ನಾಟಕದಲ್ಲಿ ಮಧ್ವಮತ ಪರಂಪರೆಯಲ್ಲಿ ಬಂದ ನರಹರಿ ತೀರ್ಥರಿಂದ ಈ ಹರಿದಾಸ ಕೂಟವು ಪ್ರಾರಂಭವಾಯಿತು ಎಂಬ ಅಭಿಪ್ರಾಯವಿದೆ. ಇಲ್ಲಿ ದಾಸಕೂಟವು ನರಹರಿ ತೀರ್ಥರಿಂದ ಪ್ರಾರಂಭವಾಯಿತು ಎಂಬುದು ಒಂದು ಮತದ ಅಭಿಪ್ರಾಯವೆನಿಸುತ್ತದೆ. ಅದನ್ನು ಪ್ರಾರಂಭಿಸಿದರೆನ್ನಲಾದ 'ನರಹರಿತೀರ್ಥರ ಮಾತೃಭಾಷೆ ಕನ್ನಡವಾಗಿರಲಿಲ್ಲ, ಅವರು ಹನ್ನೆರಡು ವರುಷ ಕಳಿಂಗ ರಾಜ್ಯದ ಅದಿಕಾರ ಸೂತ್ರಗಳನ್ನು ವಹಿಸಿದ್ದರು. ಆ ಮುಂಪೆ ವೈಷ್ಣವ ದೀಕ್ಷೆಯನ್ನು ಹೊಂದಿದ ಮೇಲೆ ರಚಿಸಿದ್ದು ಹದಿನೈದು ಸಂಸ್ಕೃತ ಗ್ರಂಥಗಳನ್ನು ಅವು ಕೂಡ ಅಪ್ಪಟ ಮಾಧ್ವ ತತ್ವದವುಗಳು! ಆದ್ದರಿಂದ ನರಹರಿತೀರ್ಥರು ಹರಿದಾಸ ಕೂಟದ ಮೊದಲಿಗನೆಂಬ ಹೆಸರು ಸಲ್ಲ'//೫// ಎಂಬ ಮಾತುಗಳನ್ನು ಗಮನಿಸಬೇಕು. ಅದರಂತೆ ಪುರಂದರದಾಸರ ಅನಂತರ ದಾಸಸಾಹಿತ್ಯವು ಅವನತಿ ಹೊಂದಿ ವಿಜಯದಾಸರಿಂದ ಅದು ಮತ್ತೆ ಊರ್ಜಿತವಾಯಿತೆಂಬುದೂ ಸಂಕುಚಿತ ಮನೋಭಾವನೆಯನ್ನು ತೋರಿಸುತ್ತದೆ ಎನ್ನಬಹುದು. ಯಾಕೆಂದರೆ ಪುರಂದರ ವಿಜಯದಾಸರ ಮಧ್ಯದ ಸುಮಾರು ೧೫೦ ವರುಷಗಳಲ್ಲಿ ಅನೇಕ ಹರಿದಾಸರು ಇದ್ದರು. ಅವರುಗಳಲ್ಲಿ ಮಹಿಪತಿರಾಯರೂ ಒಬ್ಬರು. ಆದರೆ 'ಮಹಿಪತಿದಾಸರು ಹರಿದಾಸಕೂಟದವರಲ್ಲ ಏಕೆಂದರೆ ಅವರಿಗೆ ಯೋಗ್ಯ ಗುರುಗಳಿಂದ ಅಂಕಿತವು ದೊರೆತಿರಲಿಲ್ಲ'//೬// ಎಂಬ ಶ್ರೀ ಆರ್.ಎಸ್. ಪಂಚಮುಖಿ ಅವರ ಅಭಿಪ್ರಾಯವು ಕೂಡ ಈ ಸಂಕುಚಿತತೆಯನ್ನೇ ಎತ್ತಿ ತೋರಿಸುತ್ತದೆ.

ಭಕ್ತಿ -ಭಕ್ತಿಮಾರ್ಗ ತನ್ಮೂಲಕ ಕನ್ನಡ ನಾಡಿನಲ್ಲಿ ಮೂಡಿ ಬಂದ ದಾಸ ಸಾಹಿತ್ಯವನ್ನು ಅವಲೋಕಿಸುವಾಗ ಅದಕ್ಕೆ ಮಾಧ್ವ ಸಂಪ್ರದಾಯದ ಹಣೆಪಟ್ಟಿಯನ್ನು ಕಟ್ಟಲಾಗುತ್ತಿದೆ. ಆದರೆ ದಾಸ ಸಾಹಿತ್ಯದ ಮೊದಲ ಘಟ್ಟದಲ್ಲಿಯೇ ನಮಗೆ ಭೆಟ್ಟಿಯಾಗುವ ಬೇಲೂರಿನ ವೈಕುಂಠದಾಸರು, ಬಾಡದ ಕನಕದಾಸರು, ಮಾಧ್ವರೇನೂ ಆಗಿರಲಿಲ್ಲ. ಇನ್ನು ದಾಸ -ದೀಕ್ಷೆ, ಅಪರೋಕ್ಷ ಜ್ಞಾನ ಇವುಗಳ ಕುರಿತು 'ಇದಮಿತ್ಥಂ' ಎಂದು ಚರ್ಚಿಸುವುದು ಅಸಂಗತವೆನಿಸುತ್ತದೆ.

"ದ್ವೈತ ಸಿದ್ಧಾಂತ ಇಲ್ಲವೆ ಹರಿದಾಸ ಸಾಹಿತ್ಯದ ವೈಶಿಷ್ಟ್ಯವೆಂದು ಇದನ್ನು ಹೇಳಲಾಗದು. ಕೆಲವು ಸಿದ್ಧಾಂತಗಳಲ್ಲಿಯ ಸಂಸಾರತ್ಯಾಗ ಮತ್ತು ತಪಶ್ಚರಣೆಯ ಅಂಶಗಳಿಗೆ ಪ್ರತಿಕ್ರಿಯೆಯಾಗಿ ವೈದಿಕ -ಅವೈದಿಕ ಮತಗಳು ಎಂದಿನಿಂದಲೋ ಪ್ರವೃತ್ತಿ ಮಾರ್ಗವನ್ನು ಕರ್ಮ-ಭಕ್ತಿ ಜ್ಞಾನಗಳ ಸಮನ್ವಯವನ್ನು ತಂತಮ್ಮ ರೀತಿಯಲ್ಲಿ ಬೋಧಿಸುತ್ತ ಬಂದಿವೆ. ಶರಣ ಸಾಹಿತ್ಯದಲ್ಲಿ ಇದು ಸುಸ್ಪಷ್ಟವಾಗಿದೆ. ಹರಿದಾಸರು ಅದನ್ನೇ ಒತ್ತಿ ಹೇಳಿದರೆಂದೂ, ಜನತೆಯನ್ನು ಮತ್ತೆ ಪ್ರವೃತ್ತಿ ಪರರನ್ನಾಗಿ ಮಾಡಿದರೆಂದೂ ಹೇಳಬಹುದು. ಜೊತೆಗೆ ಸಂಸಾರ ಹೇಯವೆಂಬುದನ್ನು ಶಿವಶರಣರಂತೆ ಹರಿದಾಸರೂ ಹಾಡಿ -ಹಾಡಿ ದಣಿವಿದ್ದಾರೆ. ದ್ವೈತ ಸಿದ್ಧಾಂತದ ಅನುಯಾಯಿಗಳೆಂದು ಹರಿದಾಸರನ್ನು ವಿಶೇಷೀಕರಿಸಿ ಅವರ ಸಾಹಿತ್ಯವೆಂದರೆ ದ್ವೈತ ಸಿದ್ಧಾಂತದ ಪ್ರಮೇಯಗಳ ಪ್ರಚಾರ ತಂತ್ರವೆಂಬಂತೆ ವಿಸ್ತಾರವಾಗಿ, ಲಕ್ಷ್ಯಪೂರ್ವಕವಾಗಿ ಹೇಳುವುದು, ಒಂದು ಬಗೆಯ ಮನೋವೃತ್ತಿ ಸಲ್ಲದು. ಹರಿದಾಸರು ಪ್ರಾಯಶ: ಮಾಧ್ವ ಸಿದ್ಧಾಂತದ ಅನುಯಾಯಿಗಳೇನೋ ನಿಜ. ಆದರೆ ಅವರು ಹೆಚ್ಚಾಗಿ ಅದರ ಜೀವನ ಸ್ಪರ್ಶಿಯಾದ ಭಾಗವತ ಧರ್ಮದ ಅನುಯಾಯಿಗಳು. ಶುಷ್ಕ ಸಂಪ್ರದಾಯದ ಇಲ್ಲವೆ ತರ್ಕ ಕರ್ಕಶವಾದ ಸರಣಿಯ ಅನುಯಾಯಿಗಳಲ್ಲ"//೭// ಎಂಬ ಡಾ. ರಂ.ಶ್ರೀ. ಮುಗಳಿಯವರ ಅಭಿಪ್ರಾಯವನ್ನು ನೆನೆದರೆ, ಶಿವಶರಣರಿಂದ ಪ್ರಾರಂಭವಾದ ಕರ್ನಾಟಕದಲ್ಲಿಯ ಭಕ್ತಿಮಾರ್ಗವು ಶ್ರೀ ಪಾದರಾಯರೇ ಮೊದಲಾದವರಿಂದ ಮುಂದುವರಿದು ಎಲ್ಲಿಯೂ ನಿಲ್ಲಲಿಲ್ಲ. ಅನಂತರ ಆ ಮಾರ್ಗದ ಸಾಹಿತ್ಯ ನಿರ್ಮಿತಿಯಲ್ಲಿ ಅಜ್ಞಾತಕಾಲವೊಂದಿದೆ ಎಂದೂ ಅನಿಸುವುದಿಲ್ಲ.

ವಾಸ್ತವದಲ್ಲಿ ಈ ಬಗೆಯ ಚರ್ಚೆ ಪ್ರಾರಂಭವಾದದ್ದು ಪುರಂದರ ದಾಸಾದಿಗಳ ಅನಂತರದ ಮುನ್ನೂರು ವರುಷಗಳು ಕಳೆದ ಮೇಲೆ ಈ ಶತಮಾನದಲ್ಲಿ ಎಂಬುದನ್ನು ನೆನೆಯಬೇಕು. ಈ ಮಧ್ಯದ ಮೂರು ಶತಮಾನಗಳಷ್ಟು ಕಾಲ ಕರ್ನಾಟಕದ ಪ್ರದೇಶಗಳು ಹರಿದು ಹಂಚಿ ಹೋಗಿ ಹಲವಾರು ಭಾಷೆಗಳ ಪ್ರಭಾವದಲ್ಲಿದ್ದವು. ಮುಸ್ಲಿಮರಂತೂ ಸರಿಯೆ. ಮರಾಠಿಗರು, ತೆಲುಗರು, ತಮಿಳರು ಕೊನೆಗೆ ಬ್ರಿಟಿಷರ ಆಧಿಪತ್ಯಕ್ಕೊಳಗಾದಾಗ ನಮ್ಮಲ್ಲಿ ಚಾರಿತ್ರಿಕ ಮಹತ್ವದ ಅರಿವು ಉಂಟಾಯಿತು. ಆಗ ಹಿಂದಿನದನ್ನು ಊಹಿಸತೊಡಗಿದೆವು. ಆದರೆ ಮೂಲತ: ಘಟನೆ ನಡೆದಾಗ ಈ ತರದ ಸಂದರ್ಭವೇ ಇರಲಿಕ್ಕಿಲ್ಲ. ಯಾಕೆಂದರೆ ಸಂಶೋಧನೆಯಲ್ಲಿ ದೊರೆತ ಸುಮಾರು ಇನ್ನೂರರಿಂದ ಇನ್ನೂರೈವತ್ತು ವರಷಗಳಷ್ಟು ಹಳೆಯದಾದ ಮೂವತ್ತು ಕಡತಗಳಲ್ಲಿ ಭಾಷೆ, ಮತ ಜಾತಿ ಭೇದಗಳಿಲ್ಲದೆ ಬರೆದಿಟ್ಟ ಸಾವಿರಾರು ಪದ ಪದ್ಯಗಳಿವೆ. ವ್ಯಾಸ, ವಾದಿರಾಜ ಪುರಂದರ ಕನಕರ ಜೊತೆಗೆಯೇ ರುಕ್ಮಾಂಗದ ಮಹಿಪತಿ ಚಿದಾನಂದರ ಕೃತಿಗಳನ್ನು ಬಸವಣ್ಣ, ಅಲ್ಲಮ ಸರ್ವಜ್ಞರ ವಚನಗಳನ್ನು ಬರೆದಿಟ್ಟಿರುವುದಲ್ಲದೆ ಹಿಂದಿ, ಮರಾಠಿ, ತೆಲಗು ಕೃತಿಗಳನ್ನೂ ಸಂಗ್ರಹಿಸಿದ್ದಾರೆ!

ಚಾರಿತ್ರಿಕವಾಗಿ ವಿಜಯನಗರದ ಪತನದ ಅನಂತರ ಒಮ್ಮೆಲೆ ಅಂಧಃಕಾರವೆನಿಸಿ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯೇ ನಿಂತುಬಿಟ್ಟಿತು ಎನಿಸುವದು ಸಹಜವಾದರೂ ಶತ-ಶತಮಾನಗಳಿಂದ ನಡೆದುಕೊಂಡು ಬಂದ ಧರ್ಮ ಹಾಗು ಸಂಸ್ಕೃತಿಗಳು ಅಷ್ಟೇ ಸಹಜವಾಗಿ ನಿಲ್ಲುವುದೂ ಅಸಾಧ್ಯವೆಂಬುದು ಐತಿಹಾಸಿಕ ಸತ್ಯವಾಗಿದೆ. ವಿಜಯನಗರದ ಪತನಾನಂತರ ಅಲ್ಲಿದ್ದ ಲಕ್ಷಾವಧಿ ಜನರು ವಲಸೆ ಹೋದಲ್ಲೆಲ್ಲ ತಮ್ಮ ಧರ್ಮ ಸಂಸ್ಕೃತಿಗಳನ್ನು ಸ್ಥಳೀಯರ ಸಹಕಾರದೊಂದಿಗೆ ಉಳಿಸಿದರು. ಅವರಲ್ಲಿಯ ಬಹುಪಾಲು ಜನರು ವಿಜಾಪುರಕ್ಕೆ ಬಂದರು ಮತ್ತು ಅಲ್ಲಿ ವಿಜಯನಗರದ ಸಂಸ್ಕೃತಿಯನ್ನು ಉಳಿಸಿ- ಬೆಳೆಸುವಲ್ಲಿ ಸಫಲರಾದರು. ಇದನ್ನು ಇನ್ನಷ್ಟು ವಿವರವಾಗಿ ತಿಳಿಯಲು ಸಮಕಾಲೀನ ಕೆಲವು ದಾಸರನ್ನು ನೋಡುವದು ಮತ್ತು ಅವರ ಕೃತಿಗಳನ್ನು ಸಂಕ್ಷಿಪ್ತದಲ್ಲಿ ಅವಲೋಕಿಸುವುದು ಉಚಿತವೆನಿಸುತ್ತದೆ. ಅಂಥವರಲ್ಲಿ ವಿಜಾಪುರದ ರುಕ್ಮಾಂಗದ ಪಂಡಿತರು ಮೊದಲಿಗರಾಗಿದ್ದಾರೆ.

೩.೨.೨. ರುಕ್ಮಾಂಗದ ಪಂಡಿತ:-

ವಿಜಾಪುರದ ರೈಲು ನಿಲ್ದಾಣದ ಪೂರ್ವಕ್ಕೆ ಸುಮಾರು ಒಂದೂವರೆ ಕಿಲೋಮೀಟರು ಅಂತರದಲ್ಲಿ ರುಕ್ಮಾಂಗದ ಪಂಡಿತರ ಸಮಾಧಿ ಇದೆ. ವಿಜಾಪುರ ಹಾಗೂ ಸುತ್ತಲಿನ ಹತ್ತೆಂಟು ಹಳ್ಳಿಗಳ ಜನ ಇಂದಿಗೂ ಅವರ ಸಮಾಧಿಗೆ ನಡೆದುಕೊಳ್ಳುತ್ತಾರೆ. ಗುರುವಾರದಂದು ಅವರ ಸೇವೆ ಮಾಡಿದರೆ ಪಂಡಿತರು ಪ್ರಸನ್ನರಾಗಿ ವರವನ್ನು ಕೊಡುವರೆಂಬ ಪ್ರತೀತಿಯೂ ಇದೆ. ಪ್ರತಿವರುಷ ಫಾಲ್ಗುಣ ಶುದ್ಧ ದ್ವಾದಶಿಯಂದು ಪಂಡಿತರ ಆರಾಧನೆ ಜರುಗುತ್ತದೆ. ಸುತ್ತಲಿನ ಸಾವಿರಾರು ಜನ ಸೇರುತ್ತಾರೆ. ಅನ್ನ ಸಂತರ್ಪಣೆಯಾಗುತ್ತದೆ. ರುಕ್ಮಾಂಗದ ಪಂಡಿತರು ಒಬ್ಬ ದೊಡ್ಡ ಸಾಧುಗಳು, ಸಂತರು, ಸತ್ಪುರುಷರು ಎಂಬ ಕಲ್ಪನೆ ಜನರಲ್ಲಿ ಮನೆ ಮಾಡಿದೆ. ಇದನ್ನು ಬಿಟ್ಟು-ಬಹುತೇಕ ಜನರಲ್ಲಿ ಬೇರೆ ವಿಷಯ ಗೊತ್ತಿಲ್ಲ. ಆದರೆ ಪಂಡಿತರು ಒಬ್ಬ ಸಮಾಜ ಸುಧಾರಕರು, ಖ್ಯಾತ ವೈದ್ಯರು, ಆ ಕಾಲದ ಪ್ರಸಿದ್ಧ ಸಂಗೀತಗಾರರು. ಪಂಢರಪುರದ ವಿಠಲನ ಭಕ್ತರು ಅಲ್ಲದೆ ಕನ್ನಡ ಮರಾಠಿ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದ್ದರು ಎಂಬುದು ಇದೀಗ ಹೊಸ ವಿಷಯ.

ರುಕ್ಮಾಂಗದ ಪಂಡಿತರ ಚರಿತ್ರೆಯ ಕುರಿತು ಅಧಿಕೃತವಾದ ಆಧಾರ ರುಕ್ಮಜದಾಸ ಕಿಂಕರನು ಬರೆದ 'ರುಕ್ಮಾಂಗದ ಚರಿತ್ರೆ' ಮರಾಠಿ ಭಾಷೆಯಲ್ಲಿದೆ. ಓವಿ ಪದ್ಧತಿಯಲ್ಲಿ ಬರೆದ ಈ ಕೃತಿಗೆ 'ಗುರುಮಾಲಿಕೆ' ಎಂದೂ ಹೆಸರಿದೆ. ಇದನ್ನು ಕ್ರಿ.ಶ. ೧೯೫೪ರಲ್ಲಿ ವಿಜಾಪುರದ ರುಕ್ಮಾಂಗದ ಮಂಡಳದವರು ಪ್ರಕಟಿಸಿದ್ದಾರೆ. ಕೃತಿಯು ರಚನಾಕಾಲವನ್ನು ಕ್ರಿ.ಶ. ಸುಮಾರು ೧೭೫೦ ರ ಅನಂತರ ಎಂದು ಗುರುತಿಸಲಾಗಿದೆ.//೮// ಈ ಚರಿತ್ರೆಯ ಪ್ರಕಾರ ರುಕ್ಮಾಂಗದ ಪಂಡಿತರ ಕಾಲವನ್ನು ಕ್ರಿ.ಶ. ೧೬೭೦ ರಿಂದ ಕ್ರಿ.ಶ. ೧೭೧೦ ಎಂದು ಹೇಳಲಾಗಿದೆ.//೯// ಅಂದರೆ

ಪಂಡಿತರು ಹುಟ್ಟಿದಾಗ ಬಿಜಾಪುರದಲ್ಲಿ ಎರಡನೆಯ ಇಬ್ರಾಹಿಮ ಆದಿಲಶಹನ (೧೫೮೦-೧೬೨೬) ಕಾಲವಿತ್ತು. ಪಂಡಿತರು ತಾರುಣ್ಯಕ್ಕೆ ಬರುವಷ್ಟರಲ್ಲಿ ಮಹ್ಮದ ಆದಿಲಶಹನ (೧೬೨೬-೧೬೫೬) ಆಳಿಕೆ ಪ್ರಾರಂಭವಾಗಿತ್ತು. ಆದರೆ ಪರ್ಶಿಯನ್ ಹಸ್ತಪ್ರತಿ 'ಪಾಟಿಫತ್' ದಲ್ಲಿ ಬರುವ ಒಂದು ಕಥೆಯಂತೆ ರುಕ್ಮಾಂಗದ ಪಂಡಿತರು ಎರಡನೆಯ ಇಬ್ರಾಹಿಮ ಆದಿಲಶಹನ ಮೇಲೆ ತುಂಬ ಪ್ರಭಾವ ಬೀರಿದ್ದರೆಂದೂ ಆದರಿಂದಾಗಿ ಬಾದಶಹನು ತನ್ನ ಅರಮನೆಯಲ್ಲಿ ಸರಸ್ವತಿಯ ವಿಗ್ರಹವನ್ನು ಪೂಜಿಸಿದನೆಂದೂ ಹೇಳಲಾಗಿದೆ.//೧೦// ಇಲ್ಲಿ ಕಥೆ ಅಪ್ರಸ್ತುತ ಆದರೆ ರುಕ್ಮಾಂಗದ ಪಂಡಿತರ ಹೆಸರಿನ ಸ್ಪಷ್ಟ ಉಲ್ಲೇಖವು ಗಮನಾರ್ಹವಾಗಿದೆ. ಎರಡನೆಯ ಇಬ್ರಾಹಿಮನ ಕುರಿತು ಇತರತ್ರ ದೊರೆಯುವ ಉಲ್ಲೇಖಗಳಿಂದ ಅವನ ಸರಸ್ವತಿ ಪೂಜೆ. ಅವನೇ ರಚಿಸಿದ 'ಕಿತಾಬ-ಇ-ನೌರಸ' ದಲ್ಲಿ ಬರುವ ಸರಸ್ವತಿಯ ಕುರಿತಾದ ಪದ್ಯಗಳು ಬಾದಶಹನ ಸರಸ್ವತಿಯ ಪ್ರೇಮವನ್ನು ವ್ಯಕ್ತಪಡಿಸುತ್ತದೆ. ಆದ್ದರಿಂದ ಬಾದಶಹನು ರುಕ್ಮಾಂಗದ ಪಂಡಿತರಿಂದಲೇ ಸರಸ್ವತಿಯ ಕುರಿತು ಪ್ರಭಾವಿತನಾಗಿರಬಹುದೆಂದು ಹೇಳಲು ಅವಕಾಶವಿದೆ. ಹಾಗಿದ್ದಲ್ಲಿ ಪಂಡಿತರ ಕಾಲವನ್ನು ಅವರ ಮರಾಠಿ ಚರಿತ್ರೆಯಲ್ಲಿ ಹೇಳಿದುದಕ್ಕಿಂತ ತುಸು ಹಿಂದೆ ಸರಿಸಬೇಕಾಗುತ್ತದೆ. ಇಬ್ರಾಹಿಮನ ಸಮವಯಸ್ಕರೋ (೧೫೬೦-೧೬೨೬) ಅಥವಾ ವರುಷೆರಡು ವರುಷ ಹಿರಿ-ಕಿರಿಯರೋ ಇರಬೇಕು.

ಮರಾಠಿ ರುಕ್ಮಾಂಗದ ಚರಿತ್ರೆಯಲ್ಲಿ ಪಂಡಿತರು ಹುಟ್ಟಿದ ಹಾಗೂ ಕಾಲವಾದ ಸ್ಪಷ್ಟ ಉಲ್ಲೇಖವಿದೆ. ಆದರೆ ಚರಿತ್ರೆಯಲ್ಲಿ ಬರುವ ಇನ್ನುಳಿದ ಕಾಲ ನಿರ್ದೇಶನಗಳು ಹೊಂದಾಣಿಕೆಯಾಗುವುದಿಲ್ಲ.//೧೧// ರುಕ್ಮಾಂಗದ ಚರಿತ್ರೆಯು ಭಾವುಕರ ಪಾರಾಯಣ ಗ್ರಂಥ ಅದರಲ್ಲಿ ಐತಿಹಾಸಿಕ ವಿಷಯಗಳು ಕಡಿಮೆ. ತುಸು ಸಂಪ್ರದಾಯ, ಒಂದಿಷ್ಟು ಪರಂಪರೆ ಹಾಗೂ ಕೆಲವು ಆನುಷಂಗಿಕ ಪ್ರಸಂಗಗಳ ಕಿಂಚಿತ್ ಪರಿಚಯ - ದೊರೆಯುತ್ತದೆ. ಮೊತ್ತದಲ್ಲಿ ಇಡೀ ಗ್ರಂಥ ಆಧ್ಯಾತ್ಮದ ಚರ್ಚೆಯಾಗಿದೆ. ಆದ್ದರಿಂದ ಪರಂಪರೆಯಿಂದ ಕೇಳಿ ಬಂದ ಕಥೆಯನ್ನು ಅವಲಂಬಿಸಿ ಅದಕ್ಕೆ ಪೂರಕವಾಗಿ ಮರಾಠಿ ಗ್ರಂಥ ಹಾಗೂ ಉರ್ದುಭಾಷೆಗಳಲ್ಲಿ ಬಂದ ಚಾರಿತ್ರಿಕ ಅಂಶಗಳನ್ನು ಬಳಸಿಕೊಂಡು ಅವರ ಚರಿತ್ರೆಯನ್ನು ಸಂಕ್ಷಿಪ್ತದಲ್ಲಿ ಹೀಗೆ ಹೇಳಬಹುದಾಗಿದೆ.

ವಿಜಾಪುರ ನಗರದ ಜುಮ್ಮಾ ಮಶೀದ ಪೇಟೆಯಲ್ಲಿ ಈಶ್ವರ ಭಕ್ತನಾದ ಕೃಷ್ಣಪಂಡಿತನೆಂಬ ವಿದ್ವಾಂಸ -ಸದ್ಗೃಹಸ್ಥನಿದ್ದನು. ಅವನಿಗೆ ಇಬ್ಬರು ಮಕ್ಕಳು. ಹಿರಿಯವಳು ಭಾಗೀರಥಿ, ಎರಡನೆಯವನು ರುಕ್ಮಾಂಗದ. ರುಕ್ಮಾಂಗದನು ಚಿಕ್ಕವನಿದ್ದಾಗಲೇ ಮಾತಾ ಪಿತೃಗಳನ್ನು ಕಳೆದುಕೊಂಡಿದ್ದನು. ಅವನ ಪಾಲನೆ -ಪೋಷಣೆ ಹಾಗೂ ಶಿಕ್ಷಣದ ಜವಾಬ್ದಾರಿಯು ಅಕ್ಕ ಭಾಗೀರಥಿಯ ಮೇಲಿತ್ತು.

ರುಕ್ಮಾಂಗದನಿಗೆ ಕಲಿಯುವುದರತ್ತ ಲಕ್ಷ್ಯವಿರಲಿಲ್ಲ. ಗೆಳೆಯರೊಂದಿಗೆ ಗೋಲಿ ಆಡುವುದು ಹುಡುಗರನ್ನು ಛೇಡಿಸುವುದು ಅವನ ಕೆಲಸಗಳಾಗಿದ್ದವು. ಇದು ಅಕ್ಕನಿಗೆ ಚಿಂತೆಗೀಡು ಮಾಡಿತು. ತಂದೆಯಾದರೋ ಷಟ್‌ಶಾಸ್ತ್ರ ಪಂಡಿತನಾಗಿದ್ದವನು. ಮಗ ಹೀಗೆ ಉಡಾಳನಾಗಿ ತಿರುಗುವುದು ನೆರೆಹೊರೆಯ ಗೊತ್ತಿದ್ದವರಿಗೆಲ್ಲ ಕೆಡುಕೆನಿಸಿತ್ತು. ಆದರೆ ಆವನನ್ನು ದಾರಿಗೆ ತರುವ ಬಗೆ ಹೇಗೆ ಎಂಬುದು ಎಲ್ಲರಿಗೂ ಚಿಂತೆಯಾಗಿತ್ತು. ರುಕ್ಮಾಂಗದನ ಜೀವನದಲ್ಲಿ ಒಂದು ಹೊಸ ತಿರುವಿನ ಅಗತ್ಯವಿತ್ತು. ಬಹುಶಃ ಎಲ್ಲ ದೊಡ್ಡವರ ಚರಿತ್ರಗಳಲ್ಲಿ ಬರುವ ಅಂಥದೊಂದು ತಿರುವು ರುಕ್ಮಾಂಗದ ಚರಿತ್ರೆಯಲ್ಲೂ ದೊರೆಯುತ್ತದೆ.

ತುಂಗಭದ್ರೆಯ ದಡದ ಹಂಪಿ ಕ್ಷೇತ್ರದಲ್ಲಿ ವಾಸಿಸುತ್ತಿದ್ದ ಗೌರಾನಂದ ಯತಿಗಳು ವಿಜಾಪುರಕ್ಕೆ ಬಂದಿದ್ದರು. ಈ ಗೌರಾನಂದರು ಶಂಕರಾಚಾರ್ಯರ ಮಠದ ಪರಂಪರೆಯವರು. ತಮ್ಮ ಶಿಷ್ಯರೊಂದಿಗೆ ಕಾಶಿಗೆ ಹೋಗುವ ಮಾರ್ಗದಲ್ಲಿ ವಿಜಾಪುರಕ್ಕೆ ಬಂದಿದ್ದರು. ಕೃಷ್ಣ ಪಂಡಿತರ ಪರಿಚಯ ಅವರಿಗಿತ್ತು ಆದ್ದರಿಂದ ವಿಜಾಪುರಕ್ಕೆ ಬಂದಾಗ ಅವರ ಮಕ್ಕಳನ್ನು ನೋಡಿಕೊಂಡು ಹೋಗಲು ಅವರ ಮನೆಗೆ ಬಂದರು. ಭಾಗೀರಥಿಯು ಯತಿಗಳ ಯಥೋಚಿತ ಆದರೋಪಚಾರಗಳನ್ನು ಮಾಡಿದಳು. ಅನಂತರ ಕುಶಲೋಪರಿ ಸಂಭಾಷಣೆಯಲ್ಲಿ ತನ್ನ ತಮ್ಮನ ಕುರಿತು ಚಿಂತೆಯನ್ನು ವ್ಯಕ್ತಪಡಿಸಿದಳು. ಅದನ್ನು ಕೇಳಿ ಯತಿಗಳಿಗೂ ಕೆಡುಕೆನಿಸಿತು. ಅವರು ಬಾಲಕ ರುಕ್ಮಾಂಗದನನ್ನು ಹತ್ತಿರ ಕರೆದು ಅವನ ಬೆನ್ನಮೇಲೆ ಕೈಯಾಡಿಸಿದರು. ಪ್ರೀತಿಯಿಂದ ಅವನೊಂದಿಗೆ ನಾಲ್ಕು ಮಾತುಗಳನ್ನಾಡಿದರು. ಅವರ ಮಾತಿನ ಪರಿಣಾಮವು ರುಕ್ಮಾಂಗದನ ಮೇಲೆ ಚೆನ್ನಾಗಿಯೇ ಆಯಿತು. ಅಂದಿನಿಂದ ರುಕ್ಮಾಂಗದನ ಜೀವನದ ಗತಿ ಬದಲಾಯಿತು. ಗೌರಾನಂದರು ಅವನ ಮಸ್ತಕದ ಮೇಲೆ ಕೈಯನ್ನಿಟ್ಟು ಉಪದೇಶಿಸಿದರು. ಮರುದಿನ ಕಾಶಿಗೆ ಹೋದರು. ರುಕ್ಮಾಂಗದನು ಅಭ್ಯಾಸದತ್ತ ಲಕ್ಷ್ಯಕೊಟ್ಟನು. ಶಾಸ್ತ್ರಗಳ ಅಭ್ಯಾಸವಾಯಿತು. ಜೊತೆಗೆ ಸಂಗೀತ, ವೈದ್ಯಕೀಯ ಶಿಕ್ಷಣಗಳಲ್ಲೂ ಆಸಕ್ತಿಯಿಂದ ಅಭ್ಯಾಸ ಮಾಡಿದನು. ತುಸು ದಿನಗಳಲ್ಲೇ ಎಲ್ಲದರಲ್ಲೂ ಪರಿಣಿತನಾದನು. ವಿಶೇಷವಾಗಿ ಅಭ್ಯಸಿಸಿದ ವೈದ್ಯಕೀಯದಿಂದ ಜನರು ಹತ್ತಿರ ಬರುವಂತಾಗಿ ರುಕ್ಮಾಂಗದನು ಜನರ ಬಾಯಲ್ಲಿ ರುಕ್ಮಾಂಗದ ಪಂಡಿತರಾದರು. ವೈದ್ಯಕೀಯದ ಜೊತೆಗೆ ವೈದ್ಯ ಶಾಲೆಯನ್ನೂ, ಔಷಧಗಳ ತಯಾರಿಕೆಯನ್ನೂ ಪ್ರಾರಂಭಿಸಿದರೆಂದು ಹೇಳಿಕೆ ಇದೆ. ಇವರ ವೈದ್ಯಶಾಲೆಯಲ್ಲಿ ಕಲಿತ ಒಂದೆರಡು ಮನೆತನಗಳು ಇಂದಿಗೂ ವಿಜಾಪುರ -ಧಾರವಾಡಗಳಲ್ಲಿ ಆಯುರ್ವೇದ ವಿದ್ಯೆಯನ್ನು ಮುಂದರಿಸಿಕೊಂಡು ವೈದ್ಯವೃತ್ತಿಯಲ್ಲಿದ್ದವರಿದ್ದಾರೆಂದೂ ಹೇಳಲಾಗುತ್ತಿದೆ. ಶಾಸ್ತ್ರಗಳ ಅಭ್ಯಾಸದಿಂದ ಮನಸ್ಸು ಆಧ್ಯಾತ್ಮಿಕತೆಯತ್ತ ಒಲಿಯಿತು. ಮನ ವಿಠಲನಲ್ಲಿ ರಮಿಸಿತು. ವಿಜಯ ವಿಠಲನಲ್ಲಿಯ ಅವರ ಅನನ್ಯ ಭಕ್ತಿ ಅವನ ಕುರಿತು ಪ್ರತಿನಿತ್ಯ ಭಜನೆ ಕೀರ್ತನೆಗಳಿಗೆ

ಆರಂಭವಾದಾಗ ಇನ್ನಷ್ಟು ಜನರು ಅವರ ಹತ್ತಿರ ಬರುವಂತಾದರು. ಇಹ-ಪರ ಉಭಯ ವ್ಯಾಧಿಗಳಿಗೂ ಔಷಧ ಕೊಡುವ ವೈದ್ಯರೆಂದು ಪ್ರಸಿದ್ಧರಾದರು. ಭವರೋಗ ವೈದ್ಯ ಎಂಬುದು ಅವರ ಇನ್ನೊಂದು ಹೆಸರಾಯಿತು. ರುಕ್ಮಾಂಗದ ಪಂಡಿತರ ಇಷ್ಟ ದೈವತವಾದ ವಿಜಯ ವಿಠಲನ ಮೂರ್ತಿಯನ್ನು ಅವರು ವಿಜಾಪುರದಲ್ಲಿಯೇ ಪ್ರತಿಷ್ಠಾಪಿಸಿದರು. ಹೀಗಾಗಿ ಅವರು ವಿಠಲನನ್ನು ಕಾಣಲು ಪಂಢರಪುರಕ್ಕೆ ಹೋಗುವ ಅವಶ್ಯಕತೆಯು ಬೀಳಲಿಲ್ಲ. ಆದ್ದರಿಂದ ಪಂಢರಪುರದ ವಿಠಲನು ತಾನೆಯೇ ರೋಗಿಯಾಗಿ ರುಕ್ಮಾಂಗದ ಪಂಡಿತರನ್ನು ಚಿಕಿತ್ಸೆಗಾಗಿ ಪಂಢರಪುರಕ್ಕೆ ಕರೆಸಿದನೆಂಬ ಕಥೆಯೊಂದು ಮರಾಠಿ ಚರಿತ್ರೆಯಲ್ಲಿ ಬರುತ್ತದೆ. ಹೀಗೆ ಪಂಢರಪುರಕ್ಕೆ ಅವರು ಹೋದ ನಿಶ್ಚಿತ ದಿನವನ್ನೂ ಕವಿ ಹೇಳುತ್ತಾನೆ. 'ಶಕ ೧೫೬೮ ವ್ಯಯನಾಮ ಸಂವತ್ಸರ ಆಷಾಢ ಶುದ್ಧ ಏಕಾದಶಿ ಸುತವಾರ' ವೆಂದು ಹೇಳಲಾಗಿದೆ. ಪಂಢರಪುರದಲ್ಲಿ ಅವರಿಗೆ ತುಕಾರಾಮನ ಭೆಟ್ಟಿಯಾಯಿತು.//೧೨// ಅನಂತರ ಅಲ್ಲಿ ರುಕ್ಮಾಂಗದ ಪಂಡಿತರ ಹರಿಕೀರ್ತನೆಯನ್ನು ಕೇಳಿ ಏಕನಾಥ ಮಹಾರಾಜರ ಮೊಮ್ಮಗ ಶಿವರಾಮನು ಅಭ್ಯಾಸಕ್ಕಾಗಿ ಅವರೊಂದಿಗೆ ವಿಜಾಪುರಕ್ಕೆ ಬಂದನೆಂದು ಅಪ್ರಕಟಿತ 'ಪೂರ್ಣಾನಂದ ಚರಿತ್ರೆ' ಎಂಬ ಮರಾಠಿ ಹಸ್ತಪ್ರತಿ ಹೇಳುತ್ತದೆ.//೧೩//

ಮರಾಠಿ ರುಕ್ಮಾಂಗದ ಚರಿತ್ರೆಗೆ ಗುರುಮಾಲಿಕೆ -ಗುರು ವಂಶಾವಳಿ ಎಂಬ ಹೆಸರುಗಳೂ ಇವೆ. ಅದರಲ್ಲಿ ರುಕ್ಮಾಂಗದರ ಅನೇಕ ಪವಾಡಗಳನ್ನು ಹೇಳಲಾಗಿದೆ. ಕೆಲವು ಚಾರಿತ್ರಿಕ ಅಂಶಗಳುಳ್ಳ ಕಥೆಗಳೂ ಇವೆ. ಅವುಗಳಲ್ಲಿ ವಿಜಾಪುರದ ಬಾದಶಹ (?)ನು ಪಂಡಿತರ ಸಂಗೀತವನ್ನು ಕೇಳಲು ಛದ್ಮವೇಷದಲ್ಲಿ ಅವರ ಮನೆಗೆ ಬಂದ ಕಥೆಯೂ ಚರಿತ್ರೆಯಲ್ಲಿ ಒಂದೆಡೆ ಬಂದಿದೆ.//೧೪// ಬಾದಶಹನ ಹೆಸರಿನ ಉಲ್ಲೇಖವಿಲ್ಲ. ಆದರೆ ವಿಜಾಪುರದ ಬಾದಶಹರಲ್ಲಿ ಎರಡನೆಯ ಇಬ್ರಾಹಿಮ ಆದಿಲಶಹನಿಗೆ ಸಂಗೀತದ ಹುಚ್ಚು ಇತ್ತು. ಬಹುಶ: ಆತನೇ ಬಂದಿರಲೂಬಹುದು. ಈ ಮೊದಲು ಉಲ್ಲೇಖಿಸಿದ ಉರ್ದು ಹಸ್ತಪ್ರತಿ 'ಶಾಹಿಪತ್'ದಲ್ಲಿಯ ರುಕ್ಮಾಂಗದ ಹಾಗೂ ಇಬ್ರಾಹಿಮರ ಉಲ್ಲೇಖವು ಇದನ್ನು ಇನ್ನಷ್ಟು ಪುಷ್ಟೀಕರಿಸುತ್ತದೆ.

ಅಂತು ಹೀಗೆ ಬಂದ ರುಕ್ಮಾಂಗದರ ವ್ಯಕ್ತಿತ್ವವನ್ನು ಗಮನಿಸುವಾಗ, ವಿಜಯನಗರ ಪತನಾನಂತರ ಹಿಂದು ಧರ್ಮ, ಸಂಸ್ಕೃತಿಗಳು ಅಳಿಸಿ ಹೋಗಲಿಲ್ಲ ಎಂಬ ಮಾತನ್ನು ನೆನೆಯಬೇಕು. ರುಕ್ಮಾಂಗದರು, ಹಂಪಿಯ ಗೌರಾನಂದ ಯತಿಗಳಿಂದ ಉಪದೇಶವನ್ನು ಪಡೆದರು. ಇಷ್ಟ ದೈವತವು ಬರೀ 'ವಿಠಲ'ವಾಗಿರದೆ 'ವಿಜಯ ವಿಠಲ' ನಾಗಿರುವುದು ವಿಶೇಷವಾಗಿದೆ. ಅವರು ಪ್ರತಿಷ್ಠಾಪಿಸಿದರೆಂಬ ವಿಠಲನ ಮಂದಿರ ಇನ್ನೂ ವಿಜಾಪುರದಲ್ಲಿದೆ. ಜೊತೆಗೆ ವಿಜಯನಗರ ಪತನಾನಂತರದ ಕೆಲವೇ ದಿನಗಳಲ್ಲಿ ಬಾಳಿ -ಬದುಕಿದವರು. ಈ ದೃಷ್ಟಿಯಿಂದ ರುಕ್ಮಾಂಗದರ ಪಾತ್ರವು ಐತಿಹಾಸಿಕವಾಗಿಯೂ ಮಹತ್ವದ್ದಾಗುತ್ತದೆ. ಹಿಂದೂ ಧರ್ಮ-ಸಂಸ್ಕೃತಿಗಳನ್ನು

ಉಳಿಸಿ ಬೆಳೆಸುವುದಲ್ಲದೆ ಒಂದು ಹಂತದಲ್ಲಿ ಇಬ್ರಾಹಿಮ ಆದಿಲಶಹನನ್ನು ಹಿಂದೂ ಧರ್ಮದತ್ತ ತಿರುಗಿಸಿದರೆಂಬುದು ಇನ್ನಷ್ಟು ಮಹತ್ವದ್ದೆನಿಸುತ್ತದೆ. ಅಂತೆಯೇ ಈ ದಿಶೆಯಲ್ಲಿ ಇನ್ನಷ್ಟು ಸಂಶೋಧನೆಯ ಅಗತ್ಯ ಕಂಡು ಬರುತ್ತದೆ.

ಧರ್ಮ ಸಂಸ್ಕೃತಿಗಳ ಸಂರಕ್ಷಣೆಯ ಜೊತೆಗೆ ಸಾಹಿತ್ಯದಲ್ಲಿಯೂ ಪಂಡಿತರು ಕೃಷಿ ಮಾಡಿದ್ದರೆಂಬುದು ವಿಶೇಷವಾಗಿದೆ. ಅವರು ರಚಿಸಿದ ಕನ್ನಡ, ಮರಾಠಿ ಭಾಷೆಗಳ ಕೃತಿಗಳು ದೊರೆಯುತ್ತವೆ. ಅವುಗಳನ್ನು ಅವರು ಸ್ವತ: ರಾಗ ಬದ್ಧವಾಗಿ ಹಾಡುತ್ತಿದ್ದರು. ಮರಾಠಿ ರುಕ್ಮಾಂಗದರ ಚರಿತ್ರೆಯಲ್ಲಿ ಹೇಳುವಂತೆ "ಬಾಲ್ಯದಿಂದಲೇ ಸಂಗೀತದ ಹುಚ್ಚು ಇದ್ದ ರುಕ್ಮಾಂಗದರ ದನಿ ಸುಸ್ವರವಾಗಿತ್ತು. ಮಂಜುಳವಾಗಿತ್ತು. ಅವರ ದನಿಯನ್ನು ಕೇಳಿದವರು, ಅವರನ್ನು ಪ್ರತ್ಯಕ್ಷ ನಾರದ ತುಂಬುರರ ಅವತಾರವೆಂದು ಹೇಳುತ್ತಿದ್ದರು. ಯಕ್ಷ-ಕಿನ್ನರರ ಕಂಠ ಮಾಧುರ್ಯ ಅವರದಾಗಿತ್ತು. ಅವರು ಹರಿಕಥೆಯನ್ನು ಹೇಳುವಾಗ ಅಲ್ಲಿ ಪಾಂಡುರಂಗನ ಸಾನಿಧ್ಯವಿರುತ್ತಿತ್ತು. ಅವರ ತನ್ಮಯತೆಗೆ ಶ್ರೀರಂಗ ಕೂಡ ನೃತ್ಯಮಾಡುತ್ತಿದ್ದನು" //೧೫// ಈ ನೃತ್ಯಗಾಯನ, ಹರಿಕಥೆಯ ಸಂಪ್ರದಾಯವು ವಿಜಯನಗರದಿಂದಲೇ ಬಂದುದೆಂದು ಬೇರೆ ಹೇಳಬೇಕಾಗಿಲ್ಲ. ವಿಜಯನಗರದಲ್ಲಿ ಕಡಿದುಹೋದ ಹರಿಕೀರ್ತನೆ -ಹರಿಕಥೆಯ ಸಂಪ್ರದಾಯವು ವಿಜಾಪುರದಲ್ಲಿ ಮುಂದುವರೆಯಿತು. ಇನ್ನೊಂದೆಡೆ ಕವಿಯು ಹೇಳುವಂತೆ "ರುಕ್ಮಾಂಗದರು ಅಪರಿಮಿತ ಗ್ರಂಥಗಳನ್ನು ಬರೆದಿದ್ದಾರೆ. ಪ್ರಾಕೃತ, ಸಂಸ್ಕೃತ, ಕನ್ನಡ, ಹಿಂದಿ, ದ್ರವಿಡ, ಅರಬಿ ಹಾಗೂ ತೆಲಗು ಭಾಷೆಗಳಲ್ಲಿ ಕರುಣ ಪರವಾದ, ಶೃಂಗಾರ ರಸಪೂರಿತವಾದ ಹಾಗೂ ಆಧ್ಯಾತ್ಮಪರವಾದ ಕೃತಿಗಳನ್ನು ರಚಿಸಿದ್ದಾರೆ."//೧೬// ಎಂದೂ ಹೇಳಲಾಗಿದೆ. ಅವರು ಬಹು ಭಾಷೆಗಳಲ್ಲಿ ಕೃತಿಗಳನ್ನು ರಚಿಸಿರುವ ಸಾಧ್ಯತೆ ಇದೆ. ಈವರೆಗೆ ದೊರೆತ ಕೆಲವು ಕೃತಿಗಳಲ್ಲಿ ೨೫ ಕನ್ನಡ ಪದಗಳನ್ನು, ೩೫ ಮರಾಠಿ ಕೃತಿಗಳನ್ನು ಹಾಗೂ ಕೆಲವು ಸಂಸ್ಕೃತ ಸ್ತೋತ್ರಗಳನ್ನು ವಿಜಾಪುರದ ರುಕ್ಮಾಂಗದ ಮಂಡಳದವರು ಪ್ರಕಟಿಸಿದ್ದಾರೆ. ಅಪ್ರಕಟಿತ ಕನ್ನಡ-ಮರಾಠಿ ಸಾಹಿತ್ಯ ಹಸ್ತಪ್ರತಿಯಲ್ಲೂ ಉಳಿದಿದೆ. ರುಕ್ಮಾಂಗದರ ಸಾಮಾಜಿಕ ಕಾರ್ಯ, ಹಾಗೂ ಅವರ ಕೃತಿಗಳ ಅವಲೋಕನವೇ ಒಂದು ಪ್ರತ್ಯೇಕ ಪ್ರಬಂಧವಾಗುವಷ್ಟು ಇದೆಯಾದ್ದರಿಂದ ಇಲ್ಲಿ ವಿಜಯನಗರ ಪತನಾನಂತರದ ಹರಿದಾಸ ಸಾಹಿತ್ಯವನ್ನು ಮುಂದುವರಿಸಿದ ಮೊದಲಿಗರೆಂಬ ಕಾರಣದಿಂದ ಅವರ ಒಂದೆರಡು ಕೀರ್ತನೆಗಳನ್ನು ನೋಡಬಹುದು.

ರುಕ್ಮಾಂಗದರ ಅಂಕಿತವು 'ರುಕ್ಮ', 'ರುಕ್ಮೇಶ' ಹಾಗೂ 'ರುಕ್ಮಭೂಪ' ಎಂದಾಗಿತ್ತು. ಅವರದು ಶೈವಸಂಪ್ರದಾಯವಾದರೂ ಅವರ ಕೃತಿಗಳು ಭಾಗವತ ಧರ್ಮದವುಗಳು. ಕೃಷ್ಣನ ಕುರಿತಾದ ಅವರ ರಚನೆಗಳನ್ನು ಗಮನಿಸಿದಾಗ, ಪದ ರಚನೆ, ಪದಬಂಧ ಹಾಗೂ ಅರ್ಥಗಳಲ್ಲಿ ಈ ಮೊದಲಿನ ಯಾವ ಹರಿದಾಸರ ಕೃತಿಗಳಿಗೂ

ಕಡಿಮೆ ಇಲ್ಲ ಎನಿಸುತ್ತದೆ.

'ದುರಿತ ಭಂಜನ ನರಹರಿಯೆ
ಪರಿ-ಪರಿಯಿಂದ ಸಲಹು ಶ್ರೀ ವೈಕುಂಠ ಧೊರಿಯೆ ।।ಪ।।
ಎಂಬ ಪೂರಿಯಾ ರಾಗದ ತ್ರಿತಾಳ ಪದದಲ್ಲಿ
ನಿನ್ನ ದಾಸರ ದಾಸ ನಾನು। ಯನ್ನವರು ದಾಸರ ದಾಸರಲ್ಲೇನು।।
ಇನ್ನು ಒದಗದೆ ಇಹುದೇನು। ಉನ್ನತ ಬಿರುದುಗಳು ನಿನಗಿಲ್ಲವೇನು ।।೧।।
ಎಂದು ಕೇಳಿದ್ದಾರೆ.//೧೭// ಅವರು 'ಹರಿದಾಸ' ಪಂಥವನ್ನು ಒಪ್ಪಿಕೊಂಡವರು.

ಕೃಷ್ಣನ ಬಾಲಲೀಲೆ ಹರಿದಾಸರ ನೆಚ್ಚಿನ ವಿಷಯ. ಅವನ ಬಾಲ ಲೀಲೆಗಳನ್ನು ಅವರು ಎಷ್ಟು ಪರಿಯಿಂದ ವರ್ಣಿಸಿದರೂ ತಣಿಯರು. ರುಕ್ಮಾಂಗದರೂ ಇದಕ್ಕೆ ಹೊರತಾಗಿರಲಿಲ್ಲ. ಮಿಶ್ರ ಪೀಲೂ ರಾಗದ ಒಂದು ಪದದಲ್ಲಿ ಸುಂದರವಾದ ಕಲ್ಪನೆಯಿದೆ. 'ಚಿಕ್ಕವನೇನೆ ಮಿಕ್ಕಾದಂಥ, ಮಕ್ಕಳಿಲ್ಲೇನೆ ನಿಮ್ಮವರೋಳು' ಎಂದು ಪ್ರಾರಂಭವಾಗುವ ಕೀರ್ತನೆಯಲ್ಲಿ ಚೆಂಡಾಟದಲ್ಲಿಯ ಬಾಲಕೃಷ್ಣನ ಭಂಡತನ ಹಾಗೂ ಗೋಪಿಯರೊಡನಾದ ಸರಸವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. (ಕೀ.೧)

ಇನ್ನು ಕೆಲವು ಪದಗಳಲ್ಲಿ 'ಪುಂಡಲೀಕ ವರದನೇ ಕುಂಡಲೀಶಯನನೇ' (ಕೀ-೭) 'ಯನ್ನನು ನೀ ಮರೆವರೆ ಮೋಹನ್ನ ದೈವತರನ್ನ ವಿಠಲರಾಯಾ' (ಕೀ-೯), 'ಹರಿಯೇ ಸರ್ವ ಸಾರವೆಂದು ಸಾರುವರು' (ಕೀ-೧೧), 'ಸಕಲ ದಿವಿಜಾರಾಧ್ಯ ಚರಣಾ' (ಕೀ-೧೨), 'ಹರಿ ಗೋರಸ ಕಡಿದು ನೋಡಿರೊ' (ಕೀ-೧೩), 'ಕೇಳಯ್ಯ ರಂಗಯ್ಯ' (ಕೀ-೧೫), 'ಮದನನಯ್ಯ ಮೋಹನ್ನರಾಯಾ ನೀ ಬಾರೋ' (ಕೀ-೧೯) 'ಅಂಗನೆ ನಮ್ಮ ರಂಗನೆ ಮುನಿದನ್ಯಾತಕೆ ಪ್ರಾಣಲಿಂಗನೆ' (ಕೀ-೨೦) 'ಬಂದ ನೋಡಮ್ಮ ಗೋಪಿಯ ಕಂದ' (ಕೀ-೨೩) ಮೊದಲಾದ ಕೀರ್ತನೆಗಳು ರುಕ್ಮಾಂಗದರು ಶೈವ ಸಂಪ್ರದಾಯದವರೆಂದು ಹೇಳುವದು ಕಠಿಣವೆನಿಸುವಷ್ಟು ಭಾಗವತ ಸಂಪ್ರದಾಯದವುಗಳಾಗಿವೆ. ಅವರು ನಾಥ ಸಂಪ್ರದಾಯದವರೆಂದೂ ಒಂದು ಪ್ರತೀತಿ ಇದೆ. ಹರಿದಾಸ್ಯದಲ್ಲಿ ಬಹುಶ: ಈ ಸಂಪ್ರದಾಯಗಳ ತಾಕಲಾಟಗಳು ಬರುವುದಿಲ್ಲವೆಂದು ಕಾಣುತ್ತದೆ. ಹರಿದಾಸರಿಗೆ ಹರಿಯ ಕರುಣೆಯ - ಸಾಕ್ಷಾತ್ಕಾರದ ಹಂಬಲ ಒಂದೇ. ಅಂತೆಯೇ ರುಕ್ಮಾಂಗದರು ತಮ್ಮ ಒಂದು ಪದ್ಯದಲ್ಲಿ 'ಕಂಡ ದೈವಕ್ಕೆ ಕಂಗೆಟ್ಟು ಕೈಮುಗಿದು ದಣಿದಿಯಾಕೋ' (ಕೀ-೨೧) ಎಂದು ಕೇಳಿದ್ದಾರೆ. ಇನ್ನೊಂದೆಡೆ 'ವಸ್ತು ತಾ ಬೇರೆ ಅದೆ! ನಿಜ ವಸ್ತು ಅರಿತವಾ ಬಲ್ಲಾ।।' (ಕೀ-೧೦) ಎಂಬ ಕೀರ್ತನೆಯಲ್ಲಿ, ನೀರಲ್ಲಿ ಮುಳುಗಿ ನೇಮ ಮಾಡುವುದನ್ನೂ, ಕಣ್ಣು ಮುಚ್ಚಿ ಮಣಿಗಳನ್ನು ಎಣಿಸುವದನ್ನು, ಹೊನ್ನು ಹೆಣ್ಣಿಗೆ ಮೆಚ್ಚಿ ಬಣ್ಣದ ಮಾತನಾಡಿ

ಚೆನ್ನಿಗತನದಿಂದ ತಿರುಗುವುದನ್ನು ಎತ್ತಿ ತೋರಿಸಿದ್ದಾರೆ. ಅದರಲ್ಲಿಯೇ ಮುಂದೆ, ಮಾನ-ಮನ್ನಣೆಗಾಗಿ ಜ್ಞಾನದ ಮಾತುಗಳನ್ನಾಡಿ, ಮನ್ನಣೆಯಾಗದಿದ್ದರೆ, ಧ್ಯಾನ ಮೌನಗಳನ್ನು ತೋರಿಸುತ್ತ ಭಾಸ್ನಸತನದಿಂದ ಜನರನ್ನು ದೂರುತ್ತಾರೆ. ಮನಸ್ಸನ್ನು ಸ್ವಚ್ಛಮಾಡಿ, ಕ್ಷುಲ್ಲಕ ತ್ರಸವನ್ನು ಬಿಟ್ಟು ರುಕ್ಮಭೂಪನನ್ನು ಕೂಡಿ ಸುಖಿಸುವ ದಾರಿಯನ್ನೂ ಹೇಳಿದ್ದಾರೆ.

ರುಕ್ಮಾಂಗದರ ಕೀರ್ತನೆಗಳಲ್ಲಿ ನೇರವಾತು ಸುಲಭವಾಗಿ ಅರ್ಥವಾಗುವ ಶಬ್ದಗಳು, ಅಲ್ಲಲ್ಲಿ ಉಪಯೋಗಿಸಿದ ಆಡು ಭಾಷೆಯ 'ಭಾಸ್ನಸ' 'ಕ್ಷುಲ್ಲಕ' 'ಝುಕ್ಕಿಸದೆ' ಮಲಕು' 'ಕಲಕು' ಮುಂತಾದ ಶಬ್ದಗಳು ಗಮನಾರ್ಹವಾಗಿವೆ.

ರುಕ್ಮಾಂಗದ ಪಂಡಿತರನ್ನು .ರುಕ್ಮಣ್ಣ, ರುಕ್ಮಪಂಡಿತ, ರುಕ್ಮಣ್ಣಾ ಪಂಡಿತ, ರುಕ್ಮಿಣಿ ಪಂಡಿತ ಎಂಬ ಹೆಸರುಗಳಲ್ಲೂ ಕರೆಯುತ್ತಾರೆ. ಅವರು ಗೌರಾನಂದ ಯತಿಗಳಿಂದ ಉಪದೇಶ ಪಡೆದಿದ್ದರಷ್ಟೆ. ಕೊನೆಗೆ ಅವರಿಂದಲೇ ಸಂನ್ಯಾಸ ಆಶ್ರಮವನ್ನು ಪಡೆದು 'ರುಚಿರಾನಂದ ಸರಸ್ವತಿ' ಎಂಬ ಹೆಸರನ್ನು ಪಡೆದರು. ರುಕ್ಮಾಂಗದರಿಗೆ ನಾಲ್ಕು ಜನ ಪ್ರಮುಖ ಶಿಷ್ಯರು. ದತ್ತೋಪಂತ, ಮಾಲೋಪಂತ, ಗೋವಿಂದ ಹಾಗೂ ರಾಯಾಜಿಪಂತ. ಇವರಲ್ಲಿ ರಾಯಾಜಿಪಂತನು ಅಂದಿನ ರಾಜಕಾರಣದಲ್ಲಿ ಪ್ರಭಾವಯುತ ವ್ಯಕ್ತಿ. ದೊಡ್ಡ ಅಧಿಕಾರದಲ್ಲಿದ್ದವನು ಆತ ತನ್ನ ಬಾಳಿನ ಕೊನೆಯ ದಿನಗಳಲ್ಲಿ ರುಕ್ಮಾಂಗದರಿಂದ ದೀಕ್ಷೆ ಪಡೆದು 'ರಾಜೀವಾನಂದ' ಎಂದು ಹೆಸರು ಪಡೆದಿದ್ದಾನೆ. 'ರುಕ್ಮಜ ದಾಸ ಕಿಂಕರ' ಎಂಬ ಹೆಸರೂ ಈತನದೇ ಆಗಿರಬೇಕು. ರುಕ್ಮಾಂಗದರ ಮರಾಠಿ ಚರಿತ್ರೆ ಹಾಗು ಮಹಿಪತಿರಾಯರ ಉಪಲಬ್ಧ ಒಂದು ಅಧ್ಯಾಯಗಳನ್ನು ಈ ರಾಜೀವಾನಂದನೇ ಬರೆದಿರುವ ಸಾಧ್ಯತೆ ಇದೆ. ಈತ 'ಶಕೆ ೧೬೧೫ ಶ್ರೀ ಮುಖ ವರ್ಷ ವೈಶಾಖ ಶುದ್ಧ ಪೌರ್ಣಿಮೆಯ ·ಗುರುವಾರದಂದು'. ಬರೆದು ಮುಗಿಸಿದ ಜ್ಞಾನೇಶ್ವರಿಯ· ಹಸ್ತಪ್ರತಿಯೊಂದು ವಿಜಾಪುರದ ಶ್ರೀ ಭೀಮಭಟ್ಟರ ಮನೆಯಲ್ಲಿದೆ. ಅದು ಈವರೆಗೆ ದೊರೆತ ಜ್ಞಾನೇಶ್ವರಿಯ ಹಳೆಯ ಹಸ್ತಪ್ರತಿಗಳಲ್ಲಿ ಮೂರನೆಯದು. ತನ್ನ ಹೆಸರನ್ನು ವಿಠಲಸೂನು ರಾಯಾಜಿ ಕುಲಕರ್ಣಿ ಜಾಲಗಿರಿ ಲಿಖಿತಂ' ಎಂದು ಹೇಳಿಕೊಂಡಿದ್ದಾನೆ.

ರುಕ್ಮಾಂಗದರಿಗೆ ಒಬ್ಬ ಗಂಡು ಮಗನಿದ್ದನು. ಆತನ ಹೆಸರು ಕೃಷ್ಣಪಂಡಿತ ಎಂದಾಗಿತ್ತು. ಅವನು ಬಾಲ್ಯದಿಂದಲೇ ವಿರಕ್ತನಾಗಿದ್ದರಿಂದ ಮುಂದೆ ಪಂಡಿತರ ವಂಶ ಬೆಳೆಯಲಿಲ್ಲ ಎಂದು ಹೇಳಲಾಗುತ್ತದೆ. ರುಕ್ಮಾಂಗದರು ಮಹಿಪತಿರಾಯರಿಗಿಂತ ೫೦-೬೦ ವರುಷ ಹಿರಿಯರು. ಅವರ ಗುರುವಂಶ ಪರಂಪರೆ ಹೀಗಿದೆ.

ಶಕ್ತಿ-- ಪರಾಶರ-- ವ್ಯಾಸ-- ಶುಕ-- ಗೌಡಪಾದಾಚಾರ್ಯ-- ಆದಿಶಂಕರ--

55436



ಜ್ಞಾನಾನಂದ-- ವಾಸುದೇವಾನಂದ-- ರಾಘವಾನಂದ-- ಜ್ಞಾನಾನಂದ--
ಗೌರಾನಂದ-- ರುಚಿರಾನಂದ (ರುಕ್ಮಾಂಗದ)-- ಭಾರ್ಗವಾನಂದ .... ಇತ್ಯಾದಿ.



೩.೨.೩. ಸಿಂದಗಿಯ ಅಯ್ಯನವರು:

ಸಿಂದಗಿಯ ಬಿಂದಗಿಯು ನಾಡಿನ ಉದ್ದಗಲಕ್ಕೂ ಪ್ರಸಿದ್ಧವಾಗಿದೆ. ಆಶ್ವೀನ ಮಾಸದ ಕೃಷ್ಣ ಪಕ್ಷ ದ್ವಿತೀಯಾದಂದು ವಿಜಾಪುರ ಜಿಲ್ಲೆಯ ಸಿಂದಗಿಯ ಭೀಮಾಶಂಕರ ಮಠದಲ್ಲಿ ಬಿಂದಗಿಯ ಪೂಜೆಯಾಗುತ್ತದೆ. ಅರ್ಧ ಕೊಡದಷ್ಟು ನೀರು ತುಂಬುವ ಮಣ್ಣಿನ ಚಿಕ್ಕ ಬಿಂದಗಿಯನ್ನು ಅಂದೆಯೇ ಕುಂಬಾರನ ಮನೆಯಿಂದ ತಂದು ಪ್ರತಿಷ್ಠಾಪಿಸಿ, ನೂರಾರು ಜನ ಬ್ರಾಹ್ಮಣರ ಪಾದಪೂಜೆಯನ್ನು ಮಾಡಿದ ನೀರನ್ನು ಅದರಲ್ಲಿ ಹಾಕಿದರೂ ಅದು ತುಂಬುವದಿಲ್ಲ! ಪವಾಡಗಳನ್ನು ನಂಬದ, ವೈಜ್ಞಾನಿಕವಾಗಿ ಮುಂದುವರಿದ ಇಂದಿನ ದಿನಗಳಲ್ಲಿ ಇದನ್ನು ನಂಬುವದು ಕಷ್ಟವಾದರೂ ಪ್ರತಿವರುಷ ಘಟನೆ ನಡೆಯುತ್ತದೆ.

ಸಿಂದಗಿಯ ಶ್ರೀ ಭೀಮಾಶಂಕರ ಮಠವು ಬಿಂದಗಿಯ ಮಹಾತ್ಮೆಯಿಂದಲೇ ಗುರುತಿಸಲ್ಪಡುತ್ತದೆ. ಆದರೆ ಅದಕ್ಕಿಂತ ಹೆಚ್ಚಾಗಿ ನಮ್ಮ ನಾಡಿನಲ್ಲಿ ಹೊಸದೊಂದು ಸಂಪ್ರದಾಯವನ್ನು, ನಾಥ-ಪಂಥವನ್ನು ಪ್ರಾರಂಭಿಸಿದ ಹಾಗೂ ಇಂದಿನವರೆಗೂ ನಡೆಸಿಕೊಂಡು ಬಂದ ಹೆಗ್ಗಳಿಕೆ ಭೀಮಾಶಂಕರ ಮಠದ್ದಾಗಿದೆ. ಜೊತೆಗೆ ಮಧ್ಯಯುಗದಲ್ಲಿನ ಪರಕೀಯರ ಆಕ್ರಮಣದಿಂದ ಹಿಂದು ಧರ್ಮ-ಸಂಸ್ಕೃತಿಗಳು ನಶಿಸುತ್ತಿರುವಾಗ ಅವುಗಳನ್ನು ಎತ್ತಿಹಿಡಿದು, ತನ್ನ ಪರಿಮಿತಿಯಲ್ಲಿ ಜೀವಂತವಾಗಿ ಇಡುವ ಪ್ರಯತ್ನದಲ್ಲಿ ಶ್ರೀಮಠವು ಸಫಲವಾಗಿದೆ. ಭೀಮಾಶಂಕರರ ಮಠದ ಇತಿಹಾಸವೆಂದರೆ ಉತ್ತರ ಕರ್ನಾಟಕದಲ್ಲಿ ನಾಥ ಸಂಪ್ರದಾಯವು ಬೆಳೆದು ಬಂದ ಬಗೆಯ ಅಭ್ಯಾಸವೆನಿಸುತ್ತದೆ. ಆದರೆ ಈ ವರೆಗೆ ಅದನ್ನು ಕೂಲಂಕಷವಾಗಿ ಅಭ್ಯಸಿಸುವ ಪ್ರಯತ್ನ ಆಗಿಲ್ಲವೆಂದೇ ಹೇಳಬಹುದು.

ಮಹಾರಾಷ್ಟ್ರದ ಸುಪ್ರಸಿದ್ಧ ಸಂತ ಜ್ಞಾನೇಶ್ವರನ ಪ್ರಭಾವವು ಕರ್ನಾಟಕದಲ್ಲಿ ಬಹು ಹಿಂದಿನಿಂದಲೇ ಇತ್ತು. ದಕ್ಷಿಣ ಭಾರತದಲ್ಲಿ ಮುಸಲ್ಮಾನರ ದಾಳಿಗಳಿಂದ ತತ್ತರಿಸಿದ ಹಿಂದುಗಳು ಸುರಕ್ಷಿತ ಸ್ಥಳಗಳಿಗೆ ತೀರ ದಕ್ಷಿಣಕ್ಕೆ ವಲಸೆ ಬರುವಾಗ, ಜೊತೆಗೆ ತಮ್ಮ ನಿತ್ಯದ ಪಾರಾಯಣ ಗ್ರಂಥಗಳಾದ ಜ್ಞಾನೇಶ್ವರನ ಜ್ಞಾನೇಶ್ವರಿ, ಅನುಭವಾಮೃತ ಹಾಗು ಮುಕುಂದರಾಜನ ವಿವೇಕ ಸಿಂಧು ಮತ್ತು ಪರಮಾಮೃತ ಗ್ರಂಥಗಳನ್ನೂ ತಂದಿದ್ದರು. ತೀರ ದಕ್ಷಿಣದ ಮದ್ರಾಸದ ಹತ್ತಿರ 'ವಿವೇಕ ಸಿಂಧು'ವಿನ ೧೪ನೆಯ ಶತಮಾನದ ಹಸ್ತಪ್ರತಿಯು ದೊರೆತದ್ದು ಇದಕ್ಕೆ ಸಾಕ್ಷಿಯಾಗಿದೆ.//೧೮// ಮುಂದೆ ೧೫ನೆಯ ಶತಮಾನದಲ್ಲಿ ಕಾರಂಜಾದ ನರಸಿಂಹ ಸರಸ್ವತಿಗಳು ಕರ್ನಾಟಕದ ಗಾಣಗಾಪುರದಲ್ಲಿಯೇ ವಾಸಿಸಿದರು. ಅವರ ಪಾರಾಯಣ ಗ್ರಂಥಗಳೂ ಇವೇ

ಆಗಿದ್ದವು. ಕರ್ನಾಟಕದಲ್ಲಿ ಮರಾಠಿ ಗ್ರಂಥಗಳ ಪ್ರಸಾರಕ್ಕೆ ನರಸಿಂಹ ಸರಸ್ವತಿಗಳು ಬಹಳಷ್ಟು ಕಾರಣರಾಗಿದ್ದಾರೆ.

ಅಲ್ಲಾಉದ್ದೀನ ಖಿಲ್ಜಿಯ ದಾಳಿಯ ಅನಂತರ ಮಹಾರಾಷ್ಟ್ರದ ಬಹಳಷ್ಟು ಜನ ವಿಶೇಷತ: ದೇವಗಿರಿಯ ಸುತ್ತ-ಮುತ್ತಲಿನವರು ತಮ್ಮ ಸಾಮಾನು ಸರಂಜಾಮುಗಳೊಡನೆ ಬಂದು ಕೆಲವರು ಕಾವೇರಿ ದಂಡೆಯಲ್ಲಿ ಉಳಿದುಕೊಂಡರು. ಈ ಜನಗಳಿಂದ ಜ್ಞಾನೇಶ್ವರ ಸಂಪ್ರದಾಯದ ಒಂದು ಶಾಖೆಯೂ ಇಲ್ಲಿ ಪ್ರಸಾರವಾಯಿತು. ಮರಾಠಿಯ ಖ್ಯಾತ ಸಂಶೋಧಕ ಶ್ರೀ ರಾ.ಚಿಂ.ಢೇರೆ ಅವರು ಹೇಳುವಂತೆ ಕಾವೇರಿ ತೀರದಲ್ಲಿ ಪ್ರಸಾರವಾದ ಜ್ಞಾನೇಶ್ವರ ಪಂಥದ ಶಿಷ್ಯ ಪರಂಪರೆ, ಹೀಗಿದೆ. ಜ್ಞಾನೇಶ್ವರ-- ಸೋಪಾನದೇವ-- ಮುಚಕುಂದ-- ಅವ್ಯಕ್ತನಾಥ-- ಜನಾರ್ಧನ-- ಅಲಕ್ಷ್ಯನಾಥ-- ಅಚಿಂತ್ಯನಾಥ-- ತ್ರ್ಯಂಬಕನಾಥ ಹೀಗೆ ಮುಂದುವರಿಯುತ್ತದೆ. ಈ ತ್ರ್ಯಂಬಕನಾಥನ ಇಬ್ಬರು ಶಿಷ್ಯರಲ್ಲಿ ಒಬ್ಬ ಮುಕುಂದರಾಜ, ಇನ್ನೊಬ್ಬ ಕೋನೇರಿನಾಥ. ಈ ಕೋನೇರಿನಾಥನ ಶಿಷ್ಯ ಲಿಂಗನಾಥನು ಕರ್ನಾಟಕದ ಚಂದಿ-ಚಂದಾವರದಲ್ಲಿ ನಲೆಸಿದ್ದನು. ಅವನ 'ಅಮೃತಸಾರ' ಎಂಬ ಯೋಗಶಾಸ್ತ್ರದ ಗ್ರಂಥವು ಲಭ್ಯವಿದೆ. ಅದನ್ನು ಶಕೆ ೧೬೪೬ರಲ್ಲಿ ಚಂದಾವರದಲ್ಲಿಯೇ ಬರೆದನು ಎಂದು ಶ್ರೀ ಢೇರೆ ಹೇಳುತ್ತಾರೆ.//೧೯//

ಇಂಥದೇ ಒಂದು ಶಾಖೆ ಸಿಂದಗಿಯಲ್ಲಿ ಪ್ರಾರಂಭವಾಯಿತು. ಸಿಂದಗಿಯ ಮಠದ ಪರಂಪರೆಯಲ್ಲಿ ಕೂಡ ಈ ಮೊದಲು ಹೇಳಿದ ಜ್ಞಾನದೇವನಿಂದ ಅಚಿಂತ್ಯನಾಥನವರೆಗೆ ಅದೇ ಪರಂಪರೆ ಬಂದಿದೆ. ಅಚಿಂತ್ಯನಾಥನ ಅನಂತರ ಕಾವೇರಿ ತೀರದಲ್ಲಿ ತ್ರ್ಯಂಬಕನಾಥ ಹಾಗೂ ಅವನ ಇಬ್ಬರು ಶಿಷ್ಯರಲ್ಲಿ ಒಬ್ಬನಾದ ಕೋನೇರಿನಾಥನಿಂದ ಸಂಪ್ರದಾಯ ಮುಂದುವರಿದಿದ್ದರೆ ಇಲ್ಲಿ ಸಿಂದಗಿಯಲ್ಲಿ ಅವ್ಯಕ್ತನಾಥ-- ಭಿಕ್ಷುಕನಾಥ-- ರಾಮನಾಥನಿಂದ ಮುಂದುವರಿದಿದೆ.

ಸಿಂದಗಿಯ ಮಠದಲ್ಲಿ ಪರಂಪರೆಯಿಂದ ಕೇಳಿ ಬರುವ ಕಥೆಯ ಪ್ರಕಾರ ಮಠದ ಮೂಲ ಪುರುಷ ರಾಮನಾಥ ಬಂದುದೂ ಶಿವಕಂಚಿಯಿಂದ. ಆದರೆ ಮೊದಲು ತನ್ನ ಹೆಸರನ್ನು ಬಸವೇಶ್ವರ ಎಂದು ಹೇಳಿಕೊಂಡಿದ್ದಾನೆ. ಕಥೆಯು ಸಂಕ್ಷಿಪ್ತವಾಗಿ ಹೀಗಿದೆ.

ಸಿಂದಗಿ ತಾಲೂಕಿನ ಮಾಶ್ಯಾಳ (ಮಹಾಶಿವಾಲಯ) ಹಾಗು ಭೃಂಗವಳ್ಳಿ ಗ್ರಾಮಗಳ ಕುಲಕರ್ಣಿ ಗುರಪ್ಪ ಒಂದು ದಿನ ತನ್ನ ಹೊಲದಲ್ಲಿ ಒಬ್ಬ ಸಾಧು ಪುರುಷನು ಸಿದ್ಧಾಸನದಲ್ಲಿ ಕುಳಿತಿರುವುದನ್ನು ಕಂಡನು. ಅವನನ್ನು ವಿಚಾರಿಸಲಾಗಿ ಆತನ ಹೆಸರು ಬಸವೇಶ್ವರನೆಂದೂ ಶಿವಕಂಚಿಯಿಂದ ಬಂದುದಾಗಿಯೂ ಹೇಳಿದ.

ಬಸವೇಶ್ವರನಿಂದ ಪ್ರಭಾವಿತನಾದ ಗುರಪ್ಪ ಒಂದು ದಿನ ಅವನಿಂದ ಗುರೂಪದೇಶ ಪಡೆಯಲು ಬಯಸಿದ. ಆಗ ಬಸವೇಶ್ವರನು ಗುರಪ್ಪನಿಗೆ 'ರಾಮತಾರಕ' ಮಂತ್ರವನ್ನು ಉಪದೇಶಿಸುತ್ತಾನೆ. ಗುರಪ್ಪ ಆಶ್ಚರ್ಯದಿಂದ ಹೆಸರು ಬಸವೇಶ್ವರ, ಆದರೆ ಉಪದೇಶ ರಾಮತಾರಕ ಮಂತ್ರ ಎಂದು ಕೇಳಿದಾಗ ಬಸವೇಶ್ವರನು ತನ್ನ ನಿಜವಾದ ಹೆಸರು ರಾಮನಾಥನೆಂದೂ ತಾನು ನಾಥ ಸಂಪ್ರದಾಯದವನೆಂದೂ ಹೇಳಿ ಈ ವಿಷಯವನ್ನು ರಹಸ್ಯವಾಗಿಡಲು ಕೇಳಿಕೊಳ್ಳುತ್ತಾನೆ.//೨೦//

ಬಹುಶ: ಇದಕ್ಕೆ ಕಾರಣವೆಂದರೆ ದಕ್ಷಿಣದಲ್ಲಿ ನಾಥ ಸಂಪ್ರದಾಯದ ವಿರುದ್ಧ ಬಂಡಾಯವೆದ್ದಿರಬೇಕು. ಸ್ಥಾನಭ್ರಷ್ಟನಾದ ರಾಮನಾಥನು ಸಿಂದಗಿಯ ಹತ್ತಿರ ವಲಸೆ ಬಂದಾಗ ಅವನಿಗೆ ಪುನ: ತನ್ನ ಸಂಪ್ರದಾಯವನ್ನು ಪ್ರಾರಂಭಿಸಲು ಆಸ್ಪದ ದೊರೆತಿರಬೇಕು. ದಕ್ಷಿಣ ಭಾರತದಲ್ಲಿ ನಾಥ ಸಂಪ್ರದಾಯದ ಇನ್ನಷ್ಟು ಅಭ್ಯಾಸ ಈ ವಿಷಯದಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಹುದು.

ಗುರಪ್ಪನು ರಾಮತಾರಕ ಮಂತ್ರೋಪದೇಶದೊಂದಿಗೆ, ತನ್ನ ಸಾಧನೆಯಲ್ಲಿ ನಿರತನಾದನು. ಒಂದು ದಿನ ಅವನಿಗೆ ತನ್ನ ಗುರುವಿನ ಆರಾಧನೆಯನ್ನು ಮಾಡಬೇಕೆನಿಸಿತು. ಅದು ವೈಶಿಷ್ಟ್ಯಪೂರ್ಣವಾಗಿರಬೇಕೆಂದು ಕೊಂಡು ತನ್ನ ಗುರುವಿನಲ್ಲಿ ಬಿನ್ನವಿಸಿದನು. ಆತ ಬಿಂದಗಿಯ ಪೂಜೆಯ ಕ್ರಮವನ್ನು ಹೇಳಿಕೊಟ್ಟನು. ಮೊದಲು ಅದು ಮಾರ್ಗಶೀರ್ಷ ವದ್ಯ ತೃತೀಯಾದಂದು ನಡೆಯುತ್ತಿತ್ತು. ಮುಂದಿನ ದಿನಗಳಲ್ಲಿ ಅದು ಸಿಂದಗಿಗೆ ಬಂದಾಗ ಅಶ್ವೀನ ವದ್ಯ ದ್ವಿತೀಯಾದಂದು ನೆರವೇರತೊಡಗಿತು. ಈ ಬಿಂದಿಗೆ ಭೃಂಗವಳ್ಳಿಯಿಂದ ಸಿಂದಗಿಗೆ ಬಂದ ಕಥೆ ಬೇರೆ

ಭೃಂಗವಳ್ಳಿ- ಮಾಶ್ಯಾಳದ ಕುಲಕರ್ಣಿ ಗುರಪ್ಪನ ಯೋಗಸಾಧನೆ ಹಾಗು ಪ್ರತಿವರುಷದ ಅವನ ಬಿಂದಗಿಯ ಪೂಜೆಯು ಸುತ್ತಲಿನ ಜನರನ್ನು ಆಕರ್ಷಿಸಿತು. ಜನ ತಂಡೋಪತಂಡವಾಗಿ ಗುರಪ್ಪನ ಹತ್ತಿರ ಬರಹತ್ತಿದರು. ಅವರಲ್ಲಿ ಸಿಂದಗಿಯಕುಲಕರ್ಣಿ ಸಂಕಣ್ಣನೂ ಒಬ್ಬ. ಶಂಕರ -ಸಂಕಣ್ಣನ ಜೊತೆಗೆ ಭೀಮಣ್ಣನೆಂಬ ಅವನ ಮಿತ್ರನೂ ಗುರಪ್ಪನ ಹತ್ತಿರ ಹೋಗುತ್ತಿದ್ದ. ಉಭಯತರೂ ಒಂದು ದಿನ ಗುರುವಿನಿಂದ ದೀಕ್ಷೆಯನ್ನು ಪಡೆಯಬಯಸಿದಾಗ, ಗುರಪ್ಪನು ಕಾಲ ಇನ್ನೂ ಪಕ್ವವಾಗಿಲ್ಲ. ಮುಂದೆ ಒಂದು ದಿನ ನಾನೇ ಕರೆದು ಉಪದೇಶ -ದೀಕ್ಷೆಯನ್ನು ಕೊಡುವೆನೆಂದು ಹೇಳಿ ಕಳಿಸಿದನು. ಅದರಂತೆ ಗುರಪ್ಪ ತನ್ನ ಅವಸಾನ ಕಾಲದಲ್ಲಿ ಇಬ್ಬರಿಗೂ ಬರಲು ಹೇಳಿಕಳಿಸಿದನು. ಆದರೆ ಕರೆ ಬಂದಾಗ ಭೀಮಣ್ಣ ಊರಲ್ಲಿ ಇರಲಿಲ್ಲ. ಗೆಳೆಯನ ದಾರಿ ಕಾಯ್ದು. ಕೊನೆಗೆ ತಾನೊಬ್ಬನಾದರೂ ಗುರುಗಳನ್ನು ಕಾಣಬೇಕೆಂದು ಸಂಕಣ್ಣ ಒಬ್ಬನೆ ಭೃಂಗವಳ್ಳಿಗೆ ಬಂದನು. ಸಂಕಣ್ಣನೊಬ್ಬನನ್ನೇ ಕಂಡ

ಗುರಪ್ಪ ಭೀಮಣ್ಣನ ಕುರಿತು ವಿಚಾರಿಸಿದನು. ಊರಲ್ಲಿ ಇರಲಿಲ್ಲವೆಂದು ಹೇಳಿದಾಗ ನಿರುಪಾಯನಾಗಿ 'ಅಯ್ಯು, ನೀನೇ ಭೀಮ, ನೀನೇ ಶಂಕರ' ಎಂದು ಹೇಳಿ ಸಂಕಣ್ಣನೊಬ್ಬನಿಗೇ ದೀಕ್ಷೆಕೊಟ್ಟು ಭೀಮಾಶಂಕರ ಎಂಬ ಹೊಸ ಹೆಸರಿನಿಂದ ಕರೆದನು. ತಮ್ಮ ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗುವುದಲ್ಲದೆ, ಬಂದಗಿ ಪೂಜೆಯ ವಿಧಾನವನ್ನೂ ಹೇಳಿ, ಗುರಪ್ಪ ಇಹಲೋಕ ಯಾತ್ರೆ ಪೂರೈಸಿದ.

ಭೀಮಾಶಂಕರರಿಗೆ ಅನುಗ್ರಹವಾದದ್ದು ಕ್ರಿ.ಶ. ೧೬೮೦ರಲ್ಲಿ ಎಂದು ಅವರ ಚರಿತ್ರೆ ಹೇಳುತ್ತದೆ. ಆಗ ಅವರಿಗೆ ಸುಮಾರು ೨೨-೨೩ ವರುಷವಾಗಿದ್ದಿರಬೇಕು. ಮರಳಿ ಗ್ರಾಮದ ವೆಂಕಪ್ಪನವರ ಮಗಳು ಗಿರಿಜಾಬಾಯಿಯವರೊಂದಿಗೆ ಆಗಲೇ ಮದುವೆಯಾಗಿ ಎರಡು ಗಂಡುಮಕ್ಕಳ ತಂದೆಯಾಗಿದ್ದರು. ಹಿರಿಯವ ಚಕ್ಕಪ್ಪ. ಕಿರಿಯವ ಶಿವರಾಮ.

ಭೀಮಾಶಂಕರರು ವೇದ-ಶಾಸ್ತ್ರಗಳ ಅಧ್ಯಯನ ಮಾಡಿದ ವಿದ್ವಾಂಸರಿದ್ದರು. ಅವರ ಹತ್ತಿರ ಸಮಕಾಲೀನ ಭಕ್ತರು ಸಂತರು ಆಧ್ಯಾತ್ಮಿಕ ಚರ್ಚೆಗಾಗಿ ಬರುತ್ತಿದ್ದರು. ಭೀಮಾಶಂಕರರಿಗೂ ಮಹಿಪತಿರಾಯರಿಗೂ ಪರಸ್ಪರ ಸಂಪರ್ಕವಿದ್ದಿತೆಂದು ಪರಂಪರೆಯಿಂದ ಹೇಳಿಕೊಳ್ಳುತ್ತ ಬಂದಿದ್ದಾರೆ. ಅವರು ಎಲ್ಲರನ್ನೂ ಒರಮಾಡಿಕೊಳ್ಳುತ್ತಿದ್ದರು. ಸ್ತ್ರೀ-ಶೂದ್ರರಿಗೂ ಅವರ ಮಠದಲ್ಲಿ ಪ್ರವೇಶವಿದ್ದಿತು. ವಾನಪ್ರಸ್ಥಾಶ್ರಮದಲ್ಲಿ ಅವರು ಕುಟುಂಬ ಸಹಿತವಾಗಿ ಸಿಂದಗಿಯನ್ನು ಬಿಟ್ಟು ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರಕ್ಕೆ ಹೊರಟು ನಿಂತಾಗ ನಡೆದ ಒಂದು ಘಟನೆ ಅವರ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತದೆ. ವರ್ಣಾಶ್ರಮ ಧರ್ಮದಂತೆ ಭೀಮಾಶಂಕರರು ಕ್ರಿ.ಶ. ೧೭೧೦ ರಲ್ಲಿ ಗೃಹಸ್ಥಾಶ್ರಮವನ್ನು ತ್ಯಜಿಸಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದರು. ಆಗ ಊರಿನ ಅಂತ್ಯಜರೆಲ್ಲರೂ ಬಂದು ಭೀಮಾಶಂಕರರಿಗೆ ನಮಸ್ಕರಿಸಿ ಕೊನೆಗೆ ಸಿಂದಗಿಯಲ್ಲಿಯೇ ಬಂದು ಉಳಿದುಕೊಳ್ಳಬೇಕೆಂದು ಬಿನ್ನವಿಸಿದರು. ಅವರು ಉಳಿದುಕೊಳ್ಳಲು ಅಂತ್ಯಜರೆಲ್ಲ ಸೇರಿ ತಮ್ಮ ವಾಸಸ್ಥಳವನ್ನು ಬಿಟ್ಟುಕೊಡುವದಾಗಿ ಪ್ರಮಾಣ ಮಾಡಿದರು. ಆಗ ಭೀಮಾಶಂಕರರು ಅವರ ಮನವಿಯನ್ನು ಒಪ್ಪಿಕೊಂಡು ಲಕ್ಷ್ಮೇಶ್ವರದಲ್ಲಿ ೧೨ ವರುಷ ಇದ್ದು ತಿರುಗಿ ಸಿಂದಗಿಗೇ ಬಂದರು. ಊರ ಹೊಲೆಯರು ಕೊಟ್ಟ ಸ್ಥಳದಲ್ಲಿಯೇ ತಮ್ಮ ಮಠವನ್ನು ಕಟ್ಟಿದರು. ಈಗಲೂ ಕೂಡ ಅವರ ಮಠವು ಅದೇ ಸ್ಥಳದಲ್ಲಿಯೇ ಮುಂದುವರೆದಿದೆ.

ಲಕ್ಷ್ಮೇಶ್ವರದಲ್ಲಿದ್ದಾಗ ಅವರಿಗೆ ಗೋರಕ್ಷನಾಥನ ಪ್ರತ್ಯಕ್ಷ ದರ್ಶನವಾಯಿತೆಂದು ಅವರ ಚರಿತ್ರೆ ಹೇಳುತ್ತದೆ. ಅಲ್ಲಿ ಅವರಿಗೆ ಕೂಡ ಅನೇಕ ಭಕ್ತರು ನಡೆದುಕೊಳ್ಳುತ್ತಿದ್ದರು. ಕೆಲವು ಜನ ಅವರಿಗೆ ದಾನ-ದತ್ತಿಗಳನ್ನು ನೀಡಿದ

ಉಲ್ಲೇಖಗಳೂ ದೊರೆಯುತ್ತವೆ. ಸೂರಣಗಿಯ ಹೊಲಗಳು ಸಿಂದಗಿಯ ಮಠಕ್ಕೆ ದೊರೆತದ್ದು ಅಲ್ಲಿಯೆ.

ವಾನಪ್ರಸ್ಥಾಶ್ರಮದಿಂದ ತಿರುಗಿ ಬಂದಾಗ ಅವರು ಹಂಪಿಗೆ ಹೋಗಿ ಅಲ್ಲಿಯ ಸ್ವಾಮಿಗಳಿಂದ ಸಂನ್ಯಾಸಾಶ್ರಮವನ್ನು ಪಡೆದರು. ಚತುರ್ಥಾಶ್ರಮದ ಅವರ ಹೆಸರು 'ಶ್ರೀ ಶಂಕರಾನಂದ ಸರಸ್ವತಿ' ಎಂದು ಇದೆ. ಈ ದಿನಗಳಲ್ಲಿಯೇ ಶೃಂಗೇರಿ ಪೀಠದ ಜಗದ್ಗುರುಗಳು ಸಿಂದಗಿಯ ಮಠಕ್ಕೆ ಹಗಲು ದೀವಟಿಗೆ ಹಾಗೂ ಅಡ್ಡಪಲ್ಲಕ್ಕಿ ಉತ್ಸವಗಳನ್ನು ಬಿಟ್ಟು ಉಳಿದ ಎಲ್ಲ ಅಧಿಕಾರಗಳನ್ನು ನೀಡಿದರು. ಅಲ್ಲದೆ ಸಿಂದಗಿಯ ಮಠದಲ್ಲಿ ಅನಂತರದ ಯಾರೂ ಸಂನ್ಯಾಸಾಶ್ರಮ ತೆಗೆದುಕೊಳ್ಳುವ ಕಾರಣವಿಲ್ಲವೆಂದು ಅಪ್ಪಣೆ ಕೊಡಿಸಿದರು. ಅಂತೆಯೇ ಇಂದಿಗೂ ಮಠದ ಸ್ವಾಮಿಗಳು ಕೇಸರಿ ವಸ್ತ್ರಗಳನ್ನು ಧರಿಸಿ, ಗೃಹಸ್ಥರಾಗಿರುತ್ತಾರೆ.

'ಶಕೆ ೧೬೪೪ (ಕ್ರಿ.ಶ. ೧೭೨೨) ಶುಭಕೃತು ನಾಮ ಸಂವತ್ಸರ ಶ್ರಾವಣ ಶುದ್ಧ ತ್ರಯೋದಶಿ -ಶನಿವಾರದಂದು ಉತ್ತರಾಷಾಢಾ ನಕ್ಷತ್ರದಲ್ಲಿ ಭೀಮಾಶಂಕರರು ಸಂನ್ಯಾಸ ಆಶ್ರಮವನ್ನು ಪಡೆದರು. ಶಕೆ ೧೬೪೬ರಲ್ಲಿ ಅವರಿಗೆ ಪೂರ್ವಾಶ್ರಮದ ಪತ್ನಿ ವಿಯೋಗವಾಯಿತು. ಶಕೆ ೧೬೫೬ರಲ್ಲಿ ಅಶ್ವಿನ ಪೌರ್ಣಮೆಯಂದು ಸಮಾಧಿ ಪ್ರವೇಶಿಸಿ ಅಶ್ವಿನ ವದ್ಯ ದ್ವಿತೀಯಾದಂದು ಜೀವಂತ ಸಮಾಧಿಯನ್ನು ಪಡೆದರು.//೨೧// ಮಠದ ಅಧಿಕಾರಗಳನ್ನು ಹಿರಿಯ ಮಗ ಜಕ್ಕಪ್ಪಯ್ಯ ವಹಿಸಿಕೊಂಡರು.

ಜನಸಾಮಾನ್ಯರೊಂದಿಗೆ, ಭೀಮಾಶಂಕರ ಮಠಕ್ಕೆ ಅಂದಿನ ಆಳುವ ಅರಸರ ಮಾನ್ಯತೆಯೂ ಇದ್ದಿತು. ಅವರ ಕಾಲಕ್ಕೆ ಆದಿಲಶಾಹಿ ರಾಜ್ಯವು ಅಂತ್ಯಗೊಂಡು ಪ್ರದೇಶವೆಲ್ಲ ಮೊಗಲರ ಆಡಳಿತಕ್ಕೆ ಒಳಪಟ್ಟಿತ್ತು. ಮಠಕ್ಕೆ ಮೊಗಲರಿಂದ ಅನೇಕ ಸನದುಗಳು ದೊರೆತಿವೆ. ಅವುಗಳಲ್ಲಿಯ ಒಂದು ಸನದು ಅಜೀಜುದ್ದೀನ ಅಲಂಗೀರನು (ಕ್ರಿ.ಶ. ೧೭೫೪-೧೭೫೯) ದಿನಾಂಕ ೨೫-೭-೧೭೫೨ ರಂದು (ಜಿಲ್ಹಾದ ೧೧ ಹಿಜರಿ ಶಕ ೧೧೭೦) ಜಕ್ಕಪ್ಪಯ್ಯನವರಿಗೆ ಕೊಟ್ಟಿದ್ದಾನೆ. ಅದರಲ್ಲಿಯ ಒಕ್ಕಣಿಕೆ ಮಠದ ಕುರಿತು ಬಾದಶಹನಿಗೆ ಇದ್ದ ಮರ್ಯಾದೆಯನ್ನು ವ್ಯಕ್ತಪಡಿಸುತ್ತದೆ.//೨೨//

ಭೀಮಾಶಂಕರರ ಸ್ವಭಾವ ಅತ್ಯಂತ ಶಾಂತವಾಗಿತ್ತು. ನಾಥ ಸಂಪ್ರದಾಯದಲ್ಲಿ ಯೋಗಕ್ಕೆ ಮಹತ್ವವಿದ್ದರೂ, ಸಿದ್ಧಿಯ ಮೋಹದಿಂದ ದೂರ ಉಳಿದು ಜ್ಞಾನ ಹಾಗು ಭಕ್ತಿಗಳನ್ನು ಆಚರಣೆಯಲ್ಲಿ ತರುವುದು ಶ್ರೇಯಸ್ಕರವೆಂದು ಜ್ಞಾನೇಶ್ವರಿಯಲ್ಲಿ ಹೇಳಿದೆ. ಅದರಂತೆ ಭೀಮಾಶಂಕರರು ನಡೆದುಕೊಂಡದ್ದರಿಂದ ಅವರ ಪ್ರಭಾವವು ಎಲ್ಲ ಜಾತಿ, ಮತ ಪಂಥಗಳ ಜನರ ಮೇಲಾಗಿತ್ತು. ಅಸ್ಪೃಶ್ಯರ ಕುರಿತಾದ

ಅವರ ಆದರ, ಅಂತ:ಕರಣಗಳನ್ನು ನೆನೆದಾಗ ಅವರ ಹಿರಿಮೆಯ ಅರಿವಾಗುತ್ತದೆ. ಭೀಮಾಶಂಕರರು ಹಾಗು ಅವರ ಮಕ್ಕಳಾದ ಜಕ್ಕಪ್ಪಯ್ಯ ಮತ್ತು ಶಿವರಾಮ ಪಂತರು ಸಿದ್ಧ ಪುರುಷರಾಗಿದ್ದರಲ್ಲದೆ ತಮ್ಮ ಸಿದ್ಧಿಯನ್ನು ಇತರರಿಗೆ ತಿಳಿಯುವಂತೆ ಅಕ್ಷರಗಳಲ್ಲಿಯೂ ಹಿಡಿದಿಟ್ಟಿದ್ದಾರೆ. ಅವರು ರಚಿಸಿದ ಹಲವಾರು ಕನ್ನಡ-ಮರಾಠಿ ಪದ ಪದ್ಯಗಳು ಹಸ್ತಪ್ರತಿಗಳಲ್ಲಿಯೇ ಉಳಿದುಕೊಂಡಿವೆ. ವಿಶೇಷವಾಗಿ ಆಧ್ಯಾತ್ಮಿಕ ಅನುಭವಗಳನ್ನು ಹೇಳುವ ಪದ್ಯಗಳು ಅಪರೂಪದ್ದಾಗಿವೆ. ಭೀಮಾಶಂಕರರು, 'ಭೀಮಾಶಂಕರ' 'ಸಹಜಾನಂದ' ಹಾಗು 'ದತ್ತಮಹೇಶ' ಎಂಬ ಅಂಕಿತಗಳಿಂದ ಕೃತಿಗಳನ್ನು ರಚಿಸಿದ್ದಾರೆ. ಶ್ರೀವಿದ್ಯಾ ಉಪಾಸನೆಯೊಂದಿಗೆ ಯೋಗ ಸಾಧನೆಯನ್ನು ಮಾಡಿದ್ದರಾದ್ದರಿಂದ ಅವರಿಗೆ ಅನೇಕ ಸಿದ್ಧಿಗಳು ಲಭಿಸಿದ್ದವು. ಅವುಗಳ ಕುರಿತು ತಮ್ಮ ಕೆಲವು ಕೃತಿಗಳಲ್ಲಿ ಹೇಳಿಕೊಂಡದ್ದು ವಿಶೇಷವಾಗಿದೆ. ಗುರುಗಳ ಕುರಿತು ಅವರಿಗೆ ಅಪಾರ ಆದರ. ಸದ್ಗುರುನಾಥನ ಕೃಪೆಯಿಂದ ತಮಗೆ ಅನುಗ್ರಹವಾದುದನ್ನು ಸ್ಮರಿಸುತ್ತ ಅವರು ತಮ್ಮ ಒಂದು ಕೃತಿಯಲ್ಲಿ,

'ಸದ್ಗುರುವಿಗೆ ನಾನೇನು ಮಾಡಿ ಉದ್ಧಾರಾಗುವೆ।
ನಾನಿನ್ನುದ್ಧಾರಾಗುವೆ ದೇಹಾತೀತನಾಗಿ ಚರಣ ಕಮಲಕ್ಕೆರಗುವೆ।।

ಎಂದು ಹೇಳುತ್ತಾರೆ. ಗುರುಗಳ ಋಣವನ್ನು ತೀರಿಸುವದು ಸಾಧ್ಯವೇ ಇಲ್ಲ. ದೇಹಾತೀತನಾಗಿ ಅವರ ಚರಣಕಮಲಕ್ಕೆರಗುವುದೊಂದೇ ದಾರಿ -ಎನ್ನುತ್ತಾರೆ. ಅವರು ಅನುಗ್ರಹಿಸಿದ ರೀತಿ,

'ನೆತ್ತಿ ಮ್ಯಾಲೆ ಕರವನ್ನಿಟ್ಟು ನಿಜವೆ ನೀನೆಂದಾ।
ಅಂತರಂಗವ ತೋರಿಸಿಕೊಟ್ಟು ಭವಭಯ ಬಿಡಿಸಿದಾ।।

ಬಹುಶ: ಇದುವೇ ಭೀಮಾಶಂಕರರ ಮೊದಲ ಕೃತಿಯಾಗಿರಬೇಕು. ಇಲ್ಲಿ ಸದ್ಗುರುಗಳು ತಮಗೆ ಉಪದೇಶಿಸಿದ ತಾರಕ ಮಂತ್ರವನ್ನು, ಅನುಗ್ರಹವನ್ನು ನೆನೆಯುತ್ತಾರೆ.

ದೇಹಾತೀತರಾಗಿ ಗುರುಗಳ ಚರಣಕಮಲಗಳಿಗೆ ಎರಗಿದ ಭೀಮಾಶಂಕರರು ಆ ಮಹಾಗುರುವಿಗೆ ಬೆಳಗಿದ ಆರತಿಯೂ ಅಪರೂಪದ್ದಾಗಿದೆ.

'ಆರತಿಗಾರತಿ ಬೆಳಗಿತು ತನ್ನಿಂದ ತಾನೆ।
ಮಹಾಗುರುವಿಗೆ।।
ಆರವೂ ಮರವೂ ಯರಡಾದರುವಿಗೆ।
ಬೆಳಗುವ ತಾನೇವೆ।।

ಇಂಥ ಆರತಿಯನ್ನು ಬೆಳಗಿದಾಗ,

'ಸಹಸ್ರ ಸೂರ್ಯರ ಪ್ರಭೆಗಳು ಕಲೆತು।
ಕೋಟಿ ಶಶಿಕಿರಣ।।
ಮಹಾತೇಜ ಝಾಕಿಸಿ ಮುಟ್ಟಿತು ಆಡಗಿತು ಗಗನಾ।।

ಸಹಸ್ರ ಸೂರ್ಯರ ಪ್ರಭೆಯಿಂದ ಕೋಟಿ ಶಶಿಕಿರಣಗಳಿಂದ ಹೊರಹೊಮ್ಮಿದ ಆ ಮಹಾತೇಜವು ಗಗನದಲ್ಲಿಲ್ಲ ಅದರಿತಂತೆ, ಅಷ್ಟೇ ಅಲ್ಲ.

ಯತ್ತೆತ್ತ ನೋಡಿದರತ್ತ ಸ್ವಪ್ರಕಾಶವೆ।

ನಿತ್ಯ ನಿರಂಜನ ನಿಃಶಬ್ದ ಮೂಲಕ ಬೆಳಗುವ ತಾನೆವೆ।।

ಎಂದು ಹೇಳುತ್ತಾರೆ. ಈ ದೃಷ್ಟಿಯಿಂದ ಅವರ ಇನ್ನೂ ಅನೇಕ ಕೃತಿಗಳಲ್ಲಿಯ ಸ್ವಾನುಭವ ಸವಿಯನ್ನು ನೋಡಬಹುದು.

ಭೂತ ಬಡಿದಿತು, ಬ್ರಹ್ಮಭೂತಕ್ಕ ಬಿಡಿಸುವರಾರಮ್ಮ।

ಸೈ-ಸೈ ಸದ್ಗುರುವಿನ ದಯದಿಂದೆಲ್ಲ ಮೈ-ಮರೆತೆನೆ।।

ಮೊದಲಾದ ಕೃತಿಗಳಲ್ಲಿಯ ಸ್ವಾನುಭವದ ವಿವರಣೆ ಮನನೀಯವಾಗಿದೆ.

ಯೋಗ ಹಾಗು ಸಿದ್ಧಿಗಳ ಸ್ವಾನುಭವದ ವಿವರಣೆಗೆ ಭೀಮಾಶಂಕರರ ಕೃತಿಗಳು ಮರ್ಯಾದಿತವಾಗಿದ್ದರೆ ಅವರ ಮಗ ಜಕ್ಕಪ್ಪಯ್ಯನವರ ದೃಷ್ಟಿ ವಿಶಾಲವಾದದ್ದು. ಅನುಭವದ ಜೊತೆಗೆ ಕಥನ ಕಾವ್ಯಗಳನ್ನೂ ಅವರು ರಚಿಸಿದ್ದಾರೆ. ಕನ್ನಡಕ್ಕೆ ಅಪರೂಪವಾದ ಕೃತಿಗಳೆಂದೇ ಹೇಳಬಹುದು. ಅವರ 'ದತ್ತಾತ್ರಯ ಷಟ್ಪದಿ' ಹಾಗು 'ಶ್ರೀರಾಮಚಂದ್ರ ಅನುಸಂಧಾನ' ಖಂಡ ಕಾವ್ಯಗಳು ಅಭ್ಯಾಸಕ್ಕೆ ಅರ್ಹವಾಗಿವೆ. ಶ್ರೀ ಜಕ್ಕಪ್ಪಯ್ಯನವರು ಬಿಡಿ ಪದ್ಯಗಳನ್ನೂ ಸಾಕಷ್ಟು ರಚಿಸಿದ್ದಾರೆ. ಅವರ ಭಾಷೆ ಸುಲಭ, ತಿಳಿಯಾಗಿದೆ.

'ಶಿವಸುಖದಾರಿಯ ನೋಡಂಣಾ।

ಅದು ಕೂದಲಯಳಿಕಿಂತ ಬಹು ಸಂಣಾ।

ಮತ್ತು

ಜೀವನ ಕಳೆಗಳು ಮುಳುಗುವ ತನಕಾ

ಜೀವನ್ಮುಕ್ತನು ತಾನಲ್ಲಾ'

ಮೊದಲಾದ ಕವನಗಳನ್ನು ನೋಡಬಹುದು. ಅವರು 'ಶಂಕರ' 'ಗುರುಶಂಕರ' ಎಂಬ ಅಂಕಿತಗಳಿಂದ ಪದ, ಪದ್ಯಗಳನ್ನು, ಕಾವ್ಯಗಳನ್ನು ರಚಿಸಿದ್ದಾರೆ.

ಭೀಮಾಶಂಕರ ಮಠದ ಗುರು ಪರಂಪರೆ ಹೀಗಿದೆ. ಭೀಮಾಶಂಕರ-- ಜಕ್ಕಪ್ಪಯ್ಯ-- ಜಗನ್ನಾಥ-- ಅಪ್ಪಯ್ಯ-- ಸದಾಶಿವ-- ಅಪ್ಪಯ್ಯ-- ಜಕ್ಕಪ್ಪಯ್ಯ-- ದತ್ತಪ್ಪಯ್ಯ-- ಸದಾಶಿವಪ್ಪಯ್ಯ (ಇಂದಿನ ಮಠಾಧಿಪತಿಗಳು).

## ೩.೨.೪ ಅಗರಖೇಡದ ಆದ್ಯರು

ಅಗರಖೇಡದ ಆದ್ಯರೆಂದು, ಜಹಗೀರದಾರರೆಂದು ಪ್ರಸಿದ್ಧರಾದ ಮೂಲತ: ಕಲಬುರ್ಗಿ ಜಿಲ್ಲೆಯ ಹಿರೇಮಣ್ಣೂರಿನವರಾದ ಆದ್ಯರ ಮನೆತನವು ದೊಡ್ಡದು. ಸುಮಾರು ೫೦೦ ವರುಷಗಳ ಇತಿಹಾಸ ಆದ್ಯರ ಮನೆತನಕ್ಕಿದೆ. ಪ್ರಸ್ತುತ ಅಭ್ಯಾಸಕ್ಕೆಂದು ನಿಗದಿಪಡಿಸಿದ ಕಾಲಾವಧಿಯಲ್ಲಿ, ಮಹಿಪತಿರಾಯರ ಸಮಕಾಲೀನರಾದ ಆದ್ಯರ ಕಿರುಪರಿಚಯದ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕುಂಭಕೋಣಂ ಚಿನಿವಾಲ ನಾಯಕರ ಮನೆತನದ ಶೇಷಾದ್ರಿಗಳು ಭೀಮರಥಿ ನದಿಯ ದಂಡೆಯ ಮೇಲಿನ ಮಣ್ಣೂರು ಗ್ರಾಮದಲ್ಲಿ ಕ್ರಿ.ಶ.ಸು. ೧೩೮೦-೯೦ ಅವಧಿಯಲ್ಲಿ ಬಂದು ನೆಲೆಸಿದರು. ಮಾಧ್ವ ಪರಂಪರೆಯ ಉತ್ತರಾದಿ ಮಠದ ಶ್ರೀ ವಿದ್ಯಾನಿಧಿ ತೀರ್ಥರ ವರಪ್ರಸಾದದಿಂದ ಹುಟ್ಟಿದ ಅವರ ಮಗ ವರದರಾಜಾಚಾರ್ಯರು ಪ್ರಕಾಂಡ ಪಂಡಿತರಾಗಿದ್ದರು. ಶ್ರೀಗಳವರ ಜೊತೆಗೆಯೇ ಇರುತ್ತಿದ್ದರು. ಅವರ ಮಕ್ಕಳಾದ ನರಸಿಂಹಾಚಾರ್ಯರು ಹಾಗು ಕೇಶವಾಚಾರ್ಯರು ತಂದೆಯ ಪಾಂಡಿತ್ಯವನ್ನು ಬಳುವಳಿಯಾಗಿ ಪಡೆದವರು. ಕೇಶವಾಚಾರ್ಯರ ಮಗ ರಂಗನಾಥಾಚಾರ್ಯರು. ಅವರ ಮಗ ಇಮ್ಮಡಿ ಕೇಶವಾಚಾರ್ಯರು. ಈ ಹೊತ್ತಿಗೆ ವಿಜಯನಗರದ ಪತನವಾಗಿ ದಕ್ಷಿಣದಲ್ಲೂ ಹಿಂದುಗಳಿಗೆ ನೆಲೆ ಇಲ್ಲದಂತಾಗಿತ್ತು. ಇಮ್ಮಡಿ ಕೇಶವಾಚಾರ್ಯರ ಮಗ ಇಮ್ಮಡಿ ವರದರಾಜಾಚಾರ್ಯರು ಈ ಅವಧಿಯಲ್ಲಿ ಇಲ್ಲಿಯ ಹಿಂದುಗಳಿಗೆ ಸ್ಥೈರ್ಯ -ಧೈರ್ಯಗಳನ್ನು ಒದಗಿಸಿದರು.

ಇಮ್ಮಡಿ ವರದರಾಜಾಚಾರ್ಯರ ಕಾಲವು ಕ್ರಿ.ಶ.ಸು.೧೬೦೦ ರಿಂದ ೧೬೭೦ ರವರೆಗೆ ಎಂದು ಹೇಳಲಾಗುತ್ತದೆ.//೨೩//ಇವರು ತಮ್ಮ ಜೀವಿತಕಾಲದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ಅತ್ಯಂತ ಮಹತ್ವದ ಕೃತಿಯೆಂದರೆ ಭಗವದ್ಗೀತೆಗೆ ರಚಿಸಿದ ಇವರ ಕನ್ನಡ ಟಿಪ್ಪಣಿ. ಭಗವದ್ಗೀತೆಗೆ ಕನ್ನಡದಲ್ಲಿ ರಚಿತವಾದ ಮೊಟ್ಟಮೊದಲ ಟಿಪ್ಪಣಿ ಎಂಬುದು ಇದರ ಹೆಗ್ಗಳಿಕೆ.

ಇಮ್ಮಡಿ ವರದರಾಜಾಚಾರ್ಯರು ಅತ್ಯಂತ ವ್ಯವಹಾರ ಕುಶಲರು, ಸಂಘಟನಾ ಚತುರರು ಮತ್ತು ದಕ್ಷ ಕಾರ್ಯಕರ್ತರಾಗಿದ್ದರು. ಅಂದಿನ ರಾಜಕೀಯ ವಾತಾವರಣದಲ್ಲಿ ಆಚಾರ್ಯರು ನೆರೆಹೊರೆಯ ರಾಜರುಗಳಿಗೆ, ನಾಯಕರಿಗೆ ಸಲಹೆ ಸೂಚನೆಗಳನ್ನು ಕೊಟ್ಟು ಹಿಂದುಗಳ ಸಂಘಟನೆಯನ್ನು ಮಾಡಿದ ಉಲ್ಲೇಖಗಳು ದೊರೆಯುತ್ತವೆ. ಧಾರ್ಮಿಕ ಹಾಗು ರಾಜಕೀಯ ಸಮಸ್ಯೆಗಳಲ್ಲಿ ತಮ್ಮ ಚಾಣಾಕ್ಷತೆಯನ್ನು ಮೆರೆದು ರಾಜರುಗಳೊಂದಿಗೆ ಸಹಕರಿಸುತ್ತಿದ್ದರು. ಅಂದಿನ ವಾತಾವರಣದಲ್ಲಿ ಹಿಂದುಗಳ ಸಂಘಟನೆಯೊಂದಿಗೆ ಅವರ ಸಂರಕ್ಷಣೆಯ ಅವಶ್ಯಕತೆಯೂ ಇತ್ತು. ಆಂತರಿಕ ಮತಭೇದಗಳಿಗೆ ಲಕ್ಷ್ಯ ಹಾಕುವ ಪರಿಸ್ಥಿತಿ

ಇರಲಿಲ್ಲ. ಅಂಥ ದಿನಗಳಲ್ಲಿ ಬೆಳೆದು ಅದಕ್ಕೆ ಚೆನ್ನಾಗಿ ಹೊಂದಿಕೊಂಡಿದ್ದ ವರದರಾಜಾಚಾರ್ಯರ ದೃಷ್ಟಿಕೋನವು ಬಹುವಿಶಾಲವಾಗಿತ್ತು. ತಾವು ಸ್ವತ: ಮಾಧ್ವಮತದ ಪ್ರತಿಪಾದರಕಾಗಿದ್ದರೂ ಸಂದರ್ಭ ಬಂದಾಗಲೆಲ್ಲ ಬೇರೆ ಮತ ಹಾಗು ಮತದವರಿಗೂ ತಮ್ಮ ಸಹಾಯ ಸಹಕಾರಗಳನ್ನು ನೀಡುತ್ತಿದ್ದರು. ಆದ್ದರಿಂದ ಇವರ ವರ್ಚಸ್ಸು ಅಂದಿನ ಆಳರಸರಲ್ಲಿಯೂ -ಪರ ಮತಾನುಯಾಯಿಗಳಲ್ಲೂ ಬೆಳೆದಿತ್ತು. ಇವರ ತಲೆಮಾರಿನ ಆದ್ಯರ ಮನೆತನವು ಕೇವಲ ಮತ ಧರ್ಮಗಳ ಕ್ಷೇತ್ರಕ್ಕೆ ಕಟ್ಟುಬೀಳದೆ ರಾಜಕೀಯದಲ್ಲಿಯೂ ತಮ್ಮ ಬುದ್ಧಿ ಕೌಶಲವನ್ನು ತೋರಿದುದು ವಿಶೇಷವಾಗಿದೆ. ಇವರಿಂದ ತರಬೇತಿ ಹೊಂದಿದ ಮಕ್ಕಳು -ಮೊಮ್ಮಕ್ಕಳಾದ ಶೇಷಾಚಾರ್ಯರು, ಮುಮ್ಮಡಿ ವರದರಾಜಾಚಾರ್ಯರು ಹಾಗು ಕೃಷ್ಣದ್ವೈಪಾಯನಾಚಾರ್ಯರು ಪೇಶ್ವಾಯಿ ರಾಜ್ಯದಲ್ಲಿ ಬಹು ಮಹತ್ವದ ರಾಜಕೀಯ ಪಾತ್ರವನ್ನು ವಹಿಸಿ ಒಳ್ಳೆಯ ಹೆಸರನ್ನು ಪಡೆದಿದ್ದರು.//೨೪//

ದ್ವೈತ -ಅದ್ವೈತದ ಸಾಮರಸ್ಯದ ದೃಷ್ಟಿಯಿಂದ ಅಂದಿನ ದಿನಗಳಲ್ಲಿ ನಡೆದ ಒಂದು ಘಟನೆಯನ್ನು ನಿರೂಪಿಸುವುದು ಅವಶ್ಯವೆನಿಸುತ್ತದೆ.

ಮುಮ್ಮಡಿ ವರದರಾಜಾಚಾರ್ಯರು ಇತರ ಎಲ್ಲ ಮತ-ಪಂಥದವರನ್ನು ಸಮನಾಗಿ ನೋಡುತ್ತಿದ್ದರು. ಮರಾಠಾ ಸರದಾರರ ಜೊತೆಗಿದ್ದ ಇವರ ಸಂಬಂಧದಿಂದ ಹಾಗು ತಮ್ಮ ಪರಗಣೆಯಲ್ಲಿ ವಾಸಿಸುತ್ತಿದ್ದ ಇತರ ಪಂಥದವರ ಸಂಪರ್ಕದಿಂದ ಅನ್ಯಮತೀಯರಿಗೂ ಇವರು ಪ್ರಿಯರೂ ಪೂಜ್ಯರೂ ಆಗಿದ್ದರು. ವಿದ್ವತ್ ಸಭೆಗಳಲ್ಲಿ ದ್ವೈತ ಅದ್ವೈತದ ತತ್ವಗಳನ್ನು ತುಲನಾತ್ಮಕವಾಗಿ ವಿಶದಪಡಿಸಿ, ಕೊನೆಗೆ ಭಕ್ತಿ ಪಂಥವೇ ಪರಮಾತ್ಮನನ್ನು ಒಲಿಸಿಕೊಳ್ಳಲು ಸಾಮಾನ್ಯ ಜನರ ಉತ್ತಮ ಸಾಧನ ಮಾರ್ಗವೆಂದು ತಿಳಿಹೇಳುತ್ತಿದ್ದರು. ಇವರ ವಾದ ವೈಖರಿಗೆ ಮನ ಸೋತು ಅನೇಕ ಅದ್ವೈತ ಪಂಡಿತರು ಇವರಲ್ಲಿಗೆ ಬಂದು ದ್ವೈತ ದೀಕ್ಷೆಯನ್ನು ಕೊಡಬೇಕೆಂದು ಕೇಳುತ್ತಿದ್ದರು. ಆದರೆ ವರದರಾಜಾಚಾರ್ಯರು ಅಂಥವರನ್ನು ತಡೆದು 'ಅದ್ವೈತದಲ್ಲಿ ಭಕ್ತಿ ಮಾರ್ಗಕ್ಕೆ ಆಸ್ಪದವಿಲ್ಲವೆಂದು ತಿಳಿಯಬಾರದು. ತಮ್ಮ-ತಮ್ಮ ಪಂಥಗಳನ್ನು ಸರಿಯಾಗಿ ತಿಳಿದುಕೊಳ್ಳದೆ, ಅದನ್ನು ಬಿಡುವ ಅಥವಾ ಇನ್ನೊಂದು ಮತದ ದೀಕ್ಷೆಯನ್ನು ಇಚ್ಛಿಸುವುದು ತಪ್ಪು! ಅದರಲ್ಲಿಯೇ ಮೋಕ್ಷದ ದಾರಿಯನ್ನು ಕಾಣುವದು ಸಾಧ್ಯವಿದೆ. ಇವುಗಳನ್ನೆಲ್ಲ ವಿಚಾರಿಸದೆ ಹಿರಿಯರು ಸಿದ್ಧಾಂತಗಳನ್ನು ಮಂಡಿಸಿಲ್ಲ. ಎಂದು ತಿಳಿಸಿ ಹೇಳುತ್ತಿದ್ದರು. ಹೀಗಾಗಿ ಅದ್ವೈತಿಗಳು ಕೂಡ ತಮ್ಮ ಶಾಸ್ತ್ರ ಸಂದೇಹಗಳ ಪರಿಹಾರಕ್ಕೆ ಇವರಲ್ಲಿ ಬರುತ್ತಿದ್ದರು.//೨೫//

ಇಂಥ ದೃಷ್ಟಾಂತಗಳಿಂದ ಸ್ಪಷ್ಟವಾಗುವ ವಿಷಯವೆಂದರೆ ಈ ಕಾಲದ ಜನರಲ್ಲಿಯ ಮತ ಭೇದಗಳನ್ನು ತೊಡೆದು ಹಾಕಲು ಪ್ರಯತ್ನಿಸಿದ್ದು.

ಮಹಿಪತಿರಾಯರು ಕೂಡ ತಮ್ಮ ಒಂದು ಪದ್ಯದಲ್ಲಿ 'ದ್ವೈತ -ಅದ್ವೈತ ಎಂದು ಹೊಡದಾಡದಿರೋ ಪ್ರಾಣಿ। ಚೇತಿಸಿ ಬ್ಯಾರಿಹ ವಸ್ತು ಕಾಣಿ।। ಎಂದು ಹೇಳಿದ್ದಾರೆ.

ಶೃಂಗೇರಿಯ ಶ್ರೀ ಶಂಕರ ಭಾರತಿ ಸ್ವಾಮಿಗಳವರು ಸಂಚಾರದಲ್ಲಿದ್ದಾಗ ಒಂದು ಸಲ ಮಣ್ಣೂರಿಗೆ ಬಂದರು. ಅವರ ಆದರಾತಿಥ್ಯಗಳನ್ನು ವರದರಾಜಾಚಾರ್ಯರೇ ಮಾಡಿದರು. ಶ್ರೀಗಳವರು ವರದರಾಜಾಚಾರ್ಯರ ವಿಶಾಲ ದೃಷ್ಟಿಕೋನವನ್ನು ಮನಸಾರೆ ಮೆಚ್ಚಿದರು. 'ಮುಹಮ್ಮದೀಯರ ಹಾಗು ಇತರ ವಿಧರ್ಮಿಯರ (ಹಿಂದೂ ಅಲ್ಲದ) ಆಕ್ರಮಣ ಹಾಗೂ ಬಲಾತ್ಕಾರದ ಮತಾಂತರಗಳನ್ನು ತಡೆಯಲು ಹಿಂದುಗಳಲ್ಲಿ ಈ ವಿಶಾಲ ದೃಷ್ಟಿ ಅವಶ್ಯವಾಗಿದೆ.' ಎಂದು ಉಪದೇಶಿಸಿದರು. ವರದರಾಜಾಚಾರ್ಯರನ್ನು ಬಹುವಾಗಿ ಮೆಚ್ಚಿಕೊಂಡು ತಮ್ಮ ಮಠದ ಕೆಲವು ಸಮಸ್ಯೆಗಳನ್ನು ಅವರ ಜೊತೆಗೆ ಚರ್ಚಿಸಿದರು. ವಿಶೇಷವಾಗಿ ವರದರಾಜಾಚಾರ್ಯರ ಪರಗಣೆಯಲ್ಲಿ ಅದ್ವೈತ ಮತದವರಿಗೆ ಯೋಗ್ಯ ಮಾರ್ಗದರ್ಶನವಿಲ್ಲದೆ, ಅವರಲ್ಲಿ ಬಹುಜನರು ಬೇರೆ ಮತಗಳನ್ನು ಸ್ವೀಕರಿಸುವಂತಾಗಿತ್ತು. ಆದರಿಂದಾಗಿ ಅನ್ಯಧರ್ಮದವರಲ್ಲದೆ, ಶಾಕ್ತರು, ಚಾರ್ವಾಕರು ಕೂಡ ಮತ್ತೆ ಪ್ರಬಲರಾಗುವ ಭೀತಿಯುಂಟಾಗಿತ್ತು. ಆದ್ದರಿಂದ ಶ್ರೀಮಠದಿಂದ ಬೇರೊಂದು ವ್ಯವಸ್ಥೆಯನ್ನು ಮಾಡುವವರೆಗೆ ವರದರಾಜಾಚಾರ್ಯರೇ ಅದ್ವೈತ ಮತದವರಿಗೂ ಕೂಡ ಮಾರ್ಗದರ್ಶನ ಮಾಡಬೇಕೆಂದು ಶ್ರೀಗಳವರು ಅಪ್ಪಣೆ ಕೊಡಿಸಿದರು.

ಒಂದು ಮತದ ಸ್ವಾಮಿಗಳು, ಇನ್ನೊಂದು ಮತದ ವಿದ್ವಾಂಸನೊಬ್ಬನನ್ನು ಮಾರ್ಗದರ್ಶಕನಾಗಬೇಕೆಂದು ಕೇಳಿಕೊಂಡ ಇಂಥ ಉದಾಹರಣೆಗಳು ಧಾರ್ಮಿಕ ಇತಿಹಾಸದಲ್ಲಿ ಅಪರೂಪ ಎಂದು ಹೇಳಬಹುದು. ಈ ಕುರಿತು ಕಾಲಯುಕ್ತಿ ಸಂವತ್ಸರದ ನಿಜ ಶ್ರಾವಣ ಬಹುಳ ೯ ಸ್ಥಿರವಾರದಂದು ಶ್ರೀ ಶೃಂಗೇರಿ ಮಠದಿಂದ ಅಕ್ಕಲಕೋಟೆ, ಹಲಸಂಗಿ, ಇಂಡಿ, ತಾಂಬೆ ಮತ್ತು ಆಲಮೇಲ ಭಾಗದ ಅದ್ವೈತಿಗಳಿಗೆ ಆದ್ಯ ವರದರಾಜಾಚಾರ್ಯರನ್ನು ಆ ಭಾಗದ ಮಠಪತಿಗಳೆಂದು ತಿಳಿಯಲು ರಾಯಸವನ್ನು ಕಳಿಸಲಾಗಿದೆ.//೨೬//

ಕೃಷ್ಣದ್ವೈಪಾಯನರ ಕುರಿತು ಗೋಪಾಲದಾಸರು ತಮ್ಮ ಒಂದು ಕೃತಿಯಲ್ಲಿ ಚಿತ್ರಿಸುತ್ತ 'ಭುವನ ದೊಳಗೆಣೆಗಾಣೆ ನಿಮಗೆ' ಎಂದು ಹೇಳುತ್ತ 'ಕರುಣ ಗೋಪಾಲ ವಿಠಲನ್ನ ದಾಸೋತ್ತಮನೆ' ಎಂದು ಸ್ತುತಿಸುತ್ತಾರೆ.//೨೭//

ಹೀಗೆ ಮಹಿಪತಿರಾಯರ ಸಮಕಾಲೀನ ಆದ್ಯರ ಮನೆತನವು ಸಾಮಾಜಿಕ, ಧಾರ್ಮಿಕ ಹಾಗು ರಾಜಕೀಯ ರಂಗಗಳಲ್ಲಿ ಮಹತ್ತರ ಪಾತ್ರವನ್ನು ವಹಿಸಿತ್ತು.

## ೩.೨.೫ ಗಲಗಲಿಯ ಅವ್ವನವರು ಹಾಗು ಪ್ರಯಾಗಬಾಯಿ

ಆದ್ಯರ ಮನೆತನದಂತೆ ವಿಜಾಪುರ ಜಿಲ್ಹೆಯಲ್ಲಿ ಪ್ರಸಿದ್ಧವಾದ ಇನ್ನೊಂದು ಮನೆತನ ಗಲಗಲಿ ಆಚಾರ್ಯರದು. ಪ್ರಕಾಂಡ ಪಂಡಿತರಿಂದೊಡಗೂಡಿದ ಮನೆತನಕ್ಕೆ ಹಳೆಯ ಇತಿಹಾಸವೂ ಇದೆ. ಒಬ್ಬೊಬ್ಬರೂ ಸಂಸ್ಕೃತದಲ್ಲಿ ದಿಗ್ಗಜ ಪಂಡಿತರು. ಷಟ್‌ಶಾಸ್ತ್ರ ಪಂಡಿತರು. ಕರ್ನಾಟ ಬ್ರಾಹ್ಮಣ ಪಂಡಿತರ ಮನೆಯಲ್ಲಿ ಗಹನವಾದ ಮಾಧ್ವ ತತ್ವಜ್ಞಾನದ ತಿರುಳನ್ನು, ದೇವರ ನಾಮಗಳನ್ನು ಅವರ ಮನೆಯ ಹೆಂಗಳೆಯರು ಕನ್ನಡ ಭಾಷೆಯಲ್ಲಿ ರಚಿಸಿದ್ದಾರೆ ಎಂಬುದು ಆಶ್ಚರ್ಯದ ವಿಷಯವಾಗಿದೆ.

ದೇಶಪಾಂಡೆ ಶ್ರೀಪತಿರಾಯ ಹಾಗು ನರಸಿಂಗರಾಯ ಎಂಬ ಇಬ್ಬರು ಸ್ಮಾರ್ತ ಬ್ರಾಹ್ಮಣ ಅಣ್ಣ ತಮ್ಮಂದಿರು ವಿಜಾಪುರದ ಎರಡನೆಯ ಅಲಿ ಆದಿಲಶಹನಲ್ಲಿ (೧೫೫೬-೧೫೭೧) ಸರದಾರರಾಗಿದ್ದರು. ಒಂದು ಸಲ ಯುದ್ಧಕ್ಕೆಂದು ಬೆಳಗಾವಿಯ ಕಡೆಗೆ ಹೊರಟಾಗ ದಾರಿಯಲ್ಲಿ ಮಲಪ್ರಭೆಯ ದಂಡೆಯ ಯಕ್ಕುಂಡಿ ಗ್ರಾಮದಲ್ಲಿ ಭಾಗವತ ಖ್ಯಾತಿಯ ಯಾದವಾರ್ಯರ ದರ್ಶನವಾಯಿತು. ಅವರಿಂದ ಪ್ರಭಾವಿತರಾದ ಅಣ್ಣ ತಮ್ಮಂದಿರು ಐಹಿಕ ಸುಖೋಪಭೋಗಗಳನ್ನು ತ್ಯಜಿಸಿ ಪಾರಮಾರ್ಥ ಸಿದ್ಧಿಗಾಗಿ ಯಾದವಾರ್ಯರನ್ನು ಮೊರೆಹೊಕ್ಕರು. ಯಾದವಾರ್ಯರು ಅವರನ್ನು ಅಂದಿನ ಮಾಧ್ವ ಪರಂಪರೆಯ ಉತ್ತರಾದಿ ಮಠಾಧೀಶರಾದ ಶ್ರೀ ವಿದ್ಯಾಧೀಶ ಶ್ರೀಗಳವರ ಹತ್ತಿರ ಕಳಿಸಿಕೊಟ್ಟರು. ಶ್ರೀಗಳವರಿಂದ ಮುದ್ರಾಧಾರಣ -ಮಂತ್ರೋಪದೇಶಗಳು ದೊರೆತವು. ಅವರ ಆಜ್ಞೆಯಂತೆ ಕೃಷ್ಣೆಯ ತೀರದ ಗಲಗಲಿ ಗ್ರಾಮದಲ್ಲಿ ನೆಲಸಿ ಸಾಧನದಲ್ಲಿ ನಿರತರಾದರು. ಹೀಗೆ ಪ್ರಾರಂಭವಾದದ್ದು ಗಲಗಲಿ ಮನೆತನ. ಶ್ರೀಪತಿಯ ಹಿರಿಯ ಮಗ ಗೋವಿಂದಾಚಾರ್ಯ, ಅವರ ತಮ್ಮ ಮುದ್ಗಲಾರ್ಯರು. ಸಂಸ್ಕೃತ ಸಾಹಿತ್ಯ- ತರ್ಕಗಳಲ್ಲಿ ಅಗಾಧ ಪಂಡಿತರು.//೨೮// ಮುದ್ಗಲಾರ್ಯರ ಪತ್ನಿ 'ಗಲಗಲಿ ಅವ್ವ' ಎಂದು ಹೆಸರಾದವರು.

ಭಕ್ತಿಪರವಾದ ಗೀತ ಪದ್ಯಗಳು ಮತ್ತು ಪ್ರಮೇಯ ಭಾಗಗಳನ್ನು ಕನ್ನಡ ಭಾಷೆಯಲ್ಲಿ ಪಾಮರರಿಗೂ ತಿಳಿಯುವಂತೆ ಹಾಡಿನ ರೂಪದಲ್ಲಿ ಬರೆದು ಪ್ರಸಿದ್ಧರಾದವರು ಗಲಗಲಿ ಅವ್ವನವರು. ಅವರಿಗೆ ತರ್ಕ -ನ್ಯಾಯ ಶಾಸ್ತ್ರಗಳಲ್ಲಿಯೂ ಪಾಂಡಿತ್ಯವಿದ್ದಿತು. ಅವರ ಪಾಂಡಿತ್ಯದ ಕುರಿತು ಪರಂಪರೆಯಿಂದ ಕೇಳಿ ಬಂದ ಅನೇಕ ದಂತಕಥೆಗಳಿವೆ. ನಿದರ್ಶನಕ್ಕಾಗಿ ಒಂದನ್ನು ಇಲ್ಲಿ ನೋಡಬಹುದು.

ಅವ್ವನವರಿಗೆ ಆರು ಜನ ಷಟ್‌ಶಾಸ್ತ್ರಪಂಡಿತರಾದ ಮಕ್ಕಳಿದ್ದರು. ಒಂದು ಸಲ ಪುಣೆಯ ಪೇಶ್ವಾಯಿ ದರಬಾರಿನಲ್ಲಿ ಉತ್ತರದೇಶದ ಕಾಶಿಯಿಂದ ಬಂದ

ಪಂಡಿತರೊಡನೆ ಈ ಆರು ಜನ ಮಕ್ಕಳು ವಾಕ್ಯಾರ್ಥ ಮಾಡುತ್ತಿದ್ದರು. ಒಳಗಡೆ ಜನಾನಖಾನಾದಲ್ಲಿ ಅವ್ವನವರು ಕುಳಿತು ಮಕ್ಕಳ ವಾಕ್ಯಾರ್ಥವನ್ನು ಕೇಳುತ್ತಿದ್ದರು. ವಾದ ಮಧ್ಯದಲ್ಲಿ ಒಂದು ಪದದ ಅರ್ಥವನ್ನು ಬಿಡಿಸುವಾಗ ಮಕ್ಕಳು ತಡವರಿಸಿದರು. ಅವ್ವನವರು ಕೂಡಲೇ ಅದಕ್ಕೆ ಸರಿಯಾದ ಉತ್ತರವನ್ನು ಬರೆದು ಕಳಿಸಿದರು. ಅದನ್ನು ನೋಡಿ ಆಶ್ಚರ್ಯಚಕಿತನಾದ ಪೇಶ್ವಾಯಿಯು ಅವ್ವನವರ ಹೆಸರಿನಿಂದಲೇ ಸನದು ಹೊರಡಿಸಿ ವಾರ್ಷಿಕ ಅನುದಾನವನ್ನು ನೀಡಿದನು. ಅದು ಸಂಸ್ಥಾನಗಳು ವಿಲೀನೀಕರಣವಾಗುವವರೆಗೂ ಗಲಗಲಿ ಮನೆತನಕ್ಕೆ ದೊರೆಯುತ್ತಿತ್ತು.//೭೯//ಅದರಂತೆ ಅವರ ಪಾಂಡಿತ್ಯ - ಪ್ರಸಿದ್ಧಿಗಳನ್ನು ಕೇಳಿದ ಮೈಸೂರಿನ ಮಹಾರಾಜರೂ ಅವರಿಗೆ ಭೂಮಿಗಳನ್ನಿತ್ತು ಗೌರವಿಸಿದ್ದರು. ಅವ್ವನವರು ಮಜ್ಜಿಗೆಯ ಹಾಡು, ಶೃಂಗಾರ ತಾರತಮ್ಯ, ಮೋರೆಗೆ ನೀರು ತರುವ ಹಾಡು ಮುಂತಾದ ಆಧ್ಯಾತ್ಮ ಪರವಾದ ಗೀತ ಕಾವ್ಯಗಳನ್ನು ಬರೆದಿದ್ದಾರೆ. ಅವರ ಅಂಕಿತ 'ಶ್ರೀರಾಮೇಶ' ಎಂದಾಗಿತ್ತು.

'ಅವ್ವನವರ ಕಾವ್ಯಗಳಲ್ಲಿ ನವರಸಗಳೆಲ್ಲ ಹರಿದರೂ ಅವುಗಳು ಭಕ್ತಿಯ ಭಟ್ಟಿಯಲ್ಲಿ ಪುಟಗೊಂಡಿವೆ. ಉಪಮೆ, ಉತ್ಪ್ರೇಕ್ಷೆ, ಅಲಂಕಾರ, ವಕ್ರೋಕ್ತಿ, ವ್ಯಾಜೋಕ್ತಿ ಎಲ್ಲವೂ ಅವರ ಕಾವ್ಯದಲ್ಲಿ ನೀತಿ ಬೋಧಕವಾಗಿ ಪರಿಪ್ರೀತಿ ಕಾರಣವಾಗಿ ಬೆಳಗುತ್ತವೆ.' ಸಜ್ಜನರ ಸಹವಾಸದ ಮಹಿಮೆಯನ್ನು ಪಾಮರರಿಗೂ ತಿಳಿಸುವ ಅವರ ಸರಳ-ಸರಸ ದೃಷ್ಟಾಂತ ಪ್ರದರ್ಶನದ ಸುಂದರ ಪದ್ಧತಿಯ ಒಂದು ಮಾದರಿ.

ಭಾವಜ್ಞರ ಸಂಗ ಶಾವಿಗೆ ಉಂಡಂತೆ ಭಾವವರಿಯದಾ ಪಾಮರರ।
ಭಾವವರಿಯದಾ ಪಾಮರರ ಸಹವಾಸ ಬೇವಿನ ಹಾಲು ಕುಡಿದಂತೆ।।

ಅವ್ವನವರ ಶಿಷ್ಯೆ, ಪ್ರಯಾಗಬಾಯಿ ಗುರುವಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ಮಾಧ್ವ ತತ್ವಜ್ಞಾನದ ಬೋಧನ ಪ್ರಧಾನವಾದ 'ಶೃಂಗಾರ ತಾರತಮ್ಯ' ಮುಂತಾದ ಅವ್ವನವರ ಕೃತಿಗಳಿಂದ ಸ್ಫೂರ್ತಿಗೊಂಡು ಇವರು ಕೃತಿ ರಚನೆಗೆ ಕೈಹಾಕಿದರು. ಅವ್ವನವರ ಜೊತೆಗಿದ್ದು ಅವರು ಆಗಾಗ ಹೇಳುವ ಹಾಡುವ ಪದಗಳನ್ನು ಬರೆದುಕೊಂಡು ತಾನೂ ಹಾಡುವುದೇ ಅವರ ಮುಖ್ಯ ಕೆಲಸವಾಗಿತ್ತು. ಒಂದು ಸಂದರ್ಭದಲ್ಲಿ ಅವರಿಗೆ ಭಾಗವತ ತೃತೀಯ ಸ್ಕಂದವನ್ನು ಕನ್ನಡದಲ್ಲಿ ಭಾಷಾಂತರಿಸಲು ಹೇಳಿದರು. ಅದರ ಅಣತಿಯಂತೆ ಪ್ರಯಾಗವ್ವ ಕ್ಲಿಷ್ಟಕರವಾದ ಭಾಗವತ ಅದರಲ್ಲೂ ತತ್ವಗಳಿಂದ ಕೂಡಿದ ತೃತೀಯ ಸ್ಕಂದವನ್ನು ಸರಳ ಕನ್ನಡದಲ್ಲಿ ಅನುವಾದ ಮಾಡಿದರು.

'ತೃತೀಯ ಸ್ಕಂದದಲ್ಲಿ ರತಿಯಿಟ್ಟು ಮನವಲ್ಲಿ।
ಯತಿ ಮುನಿರಾಯಗೊಂದಿಸುವೆ ಅತಿ ಭಕ್ತಿಯಿಂದಲಿ।।

ಎಂದು ಕಾವ್ಯದಲ್ಲಿ ತತ್ವಜ್ಞಾನದ ತಿರುಳನ್ನೆಲ್ಲ ತಿಳಿಗನ್ನಡದಲ್ಲಿ ಹೇಳಿದ್ದಾರೆ.

ರುಕ್ಷ ವಿಷಯದಲ್ಲಿ ತನ್ನ ವಾಣಿಯನ್ನು ಓಡಿಸಿದ್ದರೂ ಸಂದರ್ಭಕ್ಕೆ ಸರಿಯಾಗಿ ತನ್ನ ಸರಸ ಕವಿತ್ವವನ್ನು ಮರೆತಿಲ್ಲ. ಕರ್ದಮ ದೇವಹೂತಿಯರ ವಿವಾಹ, ತದನಂತರದ ಪ್ರಣಯ ಪ್ರಸಂಗ, ಸರಸ ಸಂಭಾಷಣೆಯ ಸಂದರ್ಭಗಳನ್ನು ಸುಮಧುರ ಶೈಲಿಯಲ್ಲಿ ಹೇಳಿದ್ದಾರೆ.

'ಬಂದ ಸ್ವಯಂಭು ಮನ ಮಂದಿರದೊಳಗಿದ್ದ ಛಂದುಳ್ಳಋಷಿಯ
ನೋಡಿದನು
ವಂದಿಸಿ ಚರಣಕ್ಕೆ ಹೊಂದಿಸಿ ದೇವಹೂತಿ ಆನಂದದಲ್ಲಿ ವಿವಾಹ
ಮಾಡಿದನು।।

ಮದುವೆಯಲ್ಲಿ ನಡೆದ ಭೋಜನ ಸಂಭ್ರಮ ಭಕ್ಷ್ಯ ಭೋಜ್ಯಗಳ ಬಣ್ಣನೆಯನ್ನು ನೋಡಬೇಕು.

'ಸಂಡಿಗೆ ಹಪ್ಪಳ ಮಂಡಿಗೆ ಗುಳ್ಳೋರಿಗಿ ದಿಂಡ ಸೂರಣಿ ಬಡಿಸುವರು।
ಬೆಂಡೆಕಾಯಿ ಶಾಖಸಂಡಿಗೆ ಹುಳಿಶಾಖ ಗಂಡಸರು ಭೂಮ ಬಡಿಸಿದರು।।

ಈ ಮದುವೆಯ ಸಂದರ್ಭವನ್ನು ಉಪಯೋಗಿಸಿಕೊಂಡು, ಉರುಟಣೆ, ಭೂಮದ ಹಾಡು, ಹಸೆಕರೆದ ಹಾಡುಗಳನ್ನು ಹೇಳುವಲ್ಲಿ ಹೊಸತನ ಇದೆ.

ಈ ಕವಯಿತ್ರಿಯ ಬೇರೆ ಕೃತಿಗಳು ಉಪಲಬ್ಧವಿಲ್ಲ. ಈ ಕೃತಿಯನ್ನು ಅವರು ಕಾಶಿಯಲ್ಲಿದ್ದು ಬರೆದರಂತೆ.

'ಕಾಶಿಪಟ್ಟಣದಲ್ಲಿ ವಾಸಾದ ಭಾಗಮ್ಮನು ಕಟ್ಟಿದ ಪದ್ಯವನು।
ಭೂಸುರರೆಲ್ಲರು ಉದಾಸೀನಮಾಡದೆ ಲೇಸಾಗಿ ತಿದ್ದುವದು।।

ಎಂದು ವಿನೀತರಾಗಿ ಹೇಳಿಕೊಂಡಿದ್ದಾರೆ. ಇವರಿಗೆ ಭಾಗಮ್ಮ ಎಂದೂ ಕರೆಯುತ್ತಿದ್ದರೆಂದು ಕಾಣುತ್ತದೆ. 'ಪಾಂಡುರಂಗ' ಅಂಕಿತದಿಂದ ಕೆಲವು ಭಕ್ತಿಪರ ಹಾಡುಗಳನ್ನು ಬರೆದಿದ್ದಾರೆಂಬ ನಂಬಿಕೆಯೂ ಇದೆ. ಈ ಉಭಯ ಕವಿಯಿತ್ರಿಯರ ಸಾಹಿತ್ಯ ಸಂಪಾದನೆಯ ಹಾಗು ಅಭ್ಯಾಸದ ಅಗತ್ಯವಿದೆ. ಕರ್ಮಠ ಬ್ರಾಹ್ಮಣರ ಮನೆಯಲ್ಲಿ ಬೆಳೆದು ಆ ದಿನಗಳಲ್ಲಿ ಕನ್ನಡದಲ್ಲಿ ಕೃತಿಗಳನ್ನು ರಚಿಸಿದ್ದು ವಿಶೇಷವಾಗಿದೆ.

ಇಂತು ಮಹಿಪತಿರಾಯರು ಬಾಳಿದ ಕಾಲಾವಧಿಯಲ್ಲಿ ಸ್ತ್ರೀ-ಪುರುಷರಿಬ್ಬರೂ ಸಾಹಿತ್ಯ ರಚಿಸಿದ್ದರು. ಜೊತೆಗೆ ಮತಭೇಧಗಳನ್ನು ಮರೆತು ಹಿಂದು ಧರ್ಮ -ಸಂಸ್ಕೃತಿಗಳನ್ನು ಉಳಿಸಲು -ಬೆಳೆಸಲು ಹೆಣಗಾಡಿದರು. ಈಗ ಮಹಿಪತಿರಾಯರ ಚರಿತ್ರೆ ಹಾಗು ಅವರ ಸಾಹಿತ್ಯದ ಅವಲೋಕನದಿಂದ ಇನ್ನಷ್ಟು ವಿವರವಾಗಿ ಆ ದಿನಗಳನ್ನು ಕಾಣಬಹುದು.

## ಅಡಿ ಟಿಪ್ಪಣಿಗಳು

೧. ಕೆ.ಎ.ಕಿತ್ತೂರ: ಗಳಗನಾಥರು ಮತ್ತು ಅವರ ಕಾದಂಬರಿಗಳು: ಪುಟ ೧೧

೨. ಅರಮನೆಯ ಆವರಣದಲ್ಲಿದ್ದ ನರಸಿಂಹ ದತ್ತ ಮಂದಿರದ ಉಲ್ಲೇಖ ಕಂದಾಯ ಇಲಾಖೆಯ ಇನಾಂ-ರಜಿಸ್ಟರದಲ್ಲಿ ಈ ರೀತಿ ಇದೆ. ಮ್ಯಾನೇಜರ: ಪಾವಡಿ ಬಿನ್ ನಿಂಗಪ್ಪ ಮತ್ತು ಅಮೀನುದ್ದೀನ ಅಲ್ಲೀಸಾಬ ಹೋಲ್ಡರ-ಶಾಮರಾವ ಜನಾ. ವಹಿವಾಟದಾರ-ಆಫತಾಬ ಮಹ್ಮದಸಾಹೇಬ ಖತೀಬ ಮತ್ತು ಸಯ್ಯದ ಶಹಾಬುದ್ದೀನ ಎಕ್ರೆ-೦, ಗುಂಠೆ-೧೮, ಆಕಾರ -೦, ಪೈಸೆ - ೨೫

೩. ರಿಚರ್ಡ ಈಟನ್: ಸೂಫೀಜ ಆಫ್ ಬಿಜಾಪುರ ಪುಟ ೧೧೦-೧೧೧ (೧೯೭೮)

೪. ಪಿ.ಎಂ.ಜೋಶಿ: ಪೋದ್ದಾರ ಅಭಿನಂದನ ಗ್ರಂಥ (ಇಂಗ್ಲೀಷ) ಪುಟ ೧೯೩

೫. ವ. ಅ. ದಿವಾಣಜಿ: ಪ್ರಸಾದ ಯೋಗ ಪುಟ

೬. ರಾ.ಸ್ವಾ. ಪಂಚಮುಖಿ: ಹರಿದಾಸ ಸಾಹಿತ್ಯ ಉಪೋದ್ಘಾತ XXXVIII (೧೯೫೦)

೭. ರಂ. ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ ಪುಟ ೨೭೭-೨೭೮ (೧೯೭೧)

೮. ಪಂಡಿತ ಅವಳಿಕರ: ಜರ್ನಲ್ ಆಫ್ ಕರ್ನಾಟಕ ಯುನಿವರ್ಸಿಟಿ ಪುಟ ೯೯ ಸಂಪುಟ III ಸಂ. ೯

೯. ರುಕ್ಮಾಂಗದ ಚರಿತ್ರೆ: ಅಧ್ಯಾಯ ೧೩ ಓವಿ ೧೦೪.

೧೦. ರಿಚರ್ಡ ಈಟನ್: ಸೂಫಿಜ್ ಆಫ್ ಬಿಜಾಪುರ ಪುಟ ೧೦೯.
(ವಿಜಾಪುರದ ಸೂಫಿಸಂತರ ಚರಿತ್ರೆ 'ಶಾಹಿಫತ್ ಅಹ್-ಇ-ಹುದಾ' ಚರಿತ್ರೆ ಸಂಕಲನವನ್ನು ಕ್ರಿ.ಶ. ೧೬೮೪-೮೫ ರ ಅಬುಲ ಹಸನಕಾದಿರಿ ಅವರ ಮೊಮ್ಮಗನ ಟಿಪ್ಪಣಿಗಳ ಆಧಾರದಿಂದ ಕ್ರಿ.ಶ. ೧೭೯೬-೯೭ ರಲ್ಲಿ ಅವರ ಶಿಷ್ಯನೊಬ್ಬ ಸಂಗ್ರಹಿಸಿದ್ದಾನೆ. ಹಸ್ತಪ್ರತಿಯು ಹೈದರಾಬಾದಿನ ಸಾಲಾರಜಂಗ ವಸ್ತು ಸಂಗ್ರಹಾಲಯದಲ್ಲಿದೆ ಎಂದೂ ಹೇಳಲಾಗಿದೆ)

೧೧. ರುಕ್ಮಾಂಗದ ಚರಿತ್ರೆ - ಅಧ್ಯಾಯ ೧೨ ಓವಿ ೮೬ ಹಾಗೂ ೯೩

೧೨. ರುಕ್ಮಾಂಗದ ಚರಿತ್ರೆ: ಅಧ್ಯಾಯ ೫ ಓವಿ ೩೬/೩೭

೧೩. ನಾ.ಬ.ಜೋಶಿ: ಸಂಶೋಧನ ಮಂಜರಿ (ಮರಾಠಿ) ಪುಟ ೧೧೧.

೧೪. ರುಕ್ಮಾಂಗದ ಚರಿತ್ರೆ: ಅಧ್ಯಾಯ ೨ ಓವಿ ೯೨ ರಿಂದ ೧೦೪

೧೫. ರುಕ್ಮಾಂಗದ ಚರಿತ್ರೆ: ಅಧ್ಯಾಯ ೨ ಓವಿ ೯೧, ೯೨

೧೬. ಅದೇ : ಅಧ್ಯಾಯ ೨ ಓವಿ ೮೨, ೮೩

೧೭. ರುಕ್ಮಾಂಗದರ ಕನ್ನಡ ಪದಗಳು: ಪುಟ ೩ ಕೀರ್ತನೆ -೪

೧೮. ನಾ.ಬ.ಜೋಶಿ: ಸಂಶೋಧನ ಮಂಜರಿ ಪುಟ ೯೯

೧೯: ರಾ.ಚಿಂ ಢೇರೆ - ಗುರು ಗೋರಕ್ಷನಾಥ ಪುಟ ೧೫೫

೨೦. ಸಿಂದಗಿ ಮಠದಿಂದ ಪ್ರಕಟಿತ 'ಶ್ರೀ ಸದ್ಗುರು ಭೀಮಾಶಂಕರ ಸ್ವಾಮಿಗಳ ಚರಿತ್ರೆ'ಯಲ್ಲಿ ಪುಟ ೨೪ರಲ್ಲಿ ಬರುವ ಶ್ರೀಪತಿಗುರು ವಿಠಲಾಂಕಿತ ೧೨ ನುಡಿಗಳ ಕನ್ನಡ ಪದ ಹಾಗು ಪುಟ ೨೯ ರಲ್ಲಿ ಬರುವ ಭೀಮಾಶಂಕರ ಅಂಕಿತದ ೫ ನುಡಿಗಳ ಮರಾಠಿ ಪದ್ಯದಲ್ಲಿ ಈ ಚರಿತ್ರೆಯನ್ನು ಹೇಳಲಾಗಿದೆ.

೨೧. ಸದ್ಗುರು ಭೀಮಾಶಂಕರ ಸಂಕ್ಷಿಪ್ತ ಚರಿತ್ರೆ: ಪುಟ ೫೪ ಹಾಗೂ ೬೭

೨೨. ಸನದಿನ ಇಂಗ್ಲೀಶ್ ಅವತರಣಿಕೆಯನ್ನು -ಮೂಲ ಪರ್ಶಿಯನ್‌ದೊಂದಿಗೆ ಕ್ರಿ.ಶ. ೧೯೪೩ ರಲ್ಲಿ ವ್ಯಾಜ್ಯ ಒಂದರ ಕುರಿತು ವಿಜಾಪುರ ಕಲೆಕ್ಟರನಿಗೆ ಸಲ್ಲಿಸಲಾಗಿತ್ತು. ಅದರಲ್ಲಿಯ ಕೆಲವು ಸಾಲುಗಳು "... ... Accordingly to the grant made by former Officers, a piece of follow land in the Suburbs of Sindgi Village is assigned to and continues to be assigned in the name of Sankhappayya Son of Shankhappayya Mahapurush of the Hindu Communiry of Brahmin mendicants ... ... etc.,"

೨೩. ಆದ್ಯ ಅನಂತಾಚಾರ್ಯರು (ಸಂ): ಆದ್ಯ ವಂಶಪ್ರದೀಪ ಪುಟ ೫೬

೨೪. ಅದೇ ಪುಟ ೫೯

೨೫. ಅದೇ ಪುಟ ೮೩

೨೬. ಅದೇ ಪುಟ ೮೫ - ೮೬

೨೭. ಅದೇ ಪುಟ ೯೫

೨೮. ಭೀ.ಸ್ವಾ.ಕಮಲಾಪುರ: ಸತ್ಕಥಾ ಪುಟ ೨೦೩-೨೦೪ (೧೯೩೧)

೨೯. ಪಂಢರಿನಾಥಾಚಾರ್ಯ ಗಲಗಲಿ(ಸಂ): ಮಾಧ್ವ ವಾಙ್ಮಯ ತಪಸ್ವಿಗಳು ಪು.೧೧೦೪

ಕಾಖಂಡಕಿಯಲ್ಲಿಯ
ಶ್ರೀಮಹಿಪತಿರಾಯರ
ಅಲಂಕೃತ ವೃಂದಾವನ



ಶ್ರೀಮಹೀಪತಿರಾಯರ ಸುವರ್ಣಮುಖ,
ಯೋಗದಂಡ ಹಾಗು ಪಾದುಕೆಗಳು
ಜೊತೆಗೆ ಶ್ರೀಕೃಷ್ಣರಾಯರ ಪಾದುಕೆಗಳು



## ಅಧ್ಯಾಯ - ನಾಲ್ಕು

# ಮಹಿಪತಿರಾಯರು

### ೪.೧ ಚಾರಿತ್ರಿಕ ಅಂಶಗಳು:

ಜೀವನ ಚರಿತ್ರೆಗಳನ್ನು, ಇತಿಹಾಸಗಳನ್ನು ಒಂದು ದಾಖಲೆ ಎಂಬಂತೆ ಬರೆದಿಡುವ ಪರಿಪಾಠ ನಮ್ಮ ಹಿರಿಯರಲ್ಲಿ ಇರಲಿಲ್ಲ. ಅವರಿಗೆ 'ಇಹ'ದಕಿಂತ 'ಪರ'ದ ಚಿಂತೆ ಮಹತ್ವದ್ದಾಗಿತ್ತು. ಪರಮಾತ್ಮನನ್ನು ಕುರಿತು, ಪರಲೋಕದ ಕುರಿತು ಚಿಂತಿಸುತ್ತ ಆ ಚಿಂತನೆಯಲ್ಲಿ ತಾವು ಕಂಡ ಅನುಭವಗಳನ್ನು ಮಾತ್ರ ಬರೆದಿಟ್ಟರು. ಹೀಗಾಗಿ ತಾವು ಇದ್ದ ಜಗತ್ತು, ತಮ್ಮ ಸಂಬಂಧಿಕರು, ಹೆಂಡತಿ, ಮಕ್ಕಳು, ಬಂಧು ಬಳಗ, ತಾವು ಹೊಟ್ಟೆಯ ಪಾಡಿಗಾಗಿ ಮಾಡುವ ಕೆಲಸ, ತಮ್ಮ ಕಾಲದ ಸಮಾಜ ಇವುಗಳತ್ತ ಅವರ ಲಕ್ಷ್ಯವೇ ಇರಲಿಲ್ಲ. ಒಮ್ಮೆ ತಮ್ಮ ಮನಸ್ಸನ್ನು ಆಧ್ಯಾತ್ಮದತ್ತ ಹೊರಳಿಸಿದರೆ ಸಾಕು ಆ ಭಗವಂತನೇ ಅವರಿಗೆ ತಾಯಿ, ತಂದೆ, ಗುರು, ಮಡದಿ, ಮಕ್ಕಳು, ಬಂಧು-ಬಳಗ ಎಲ್ಲವೂ ಆದ. ಇದು ಆಧ್ಯಾತ್ಮದತ್ತ ಒಲಿದ ಅನುಭಾವಿಗಳ ವಿಷಯವಾದರೆ, ಕವಿ-ಸಾಹಿತಿಗಳು ಕೂಡ ಇದಕ್ಕೆ ಹೊರತಾಗಲಿಲ್ಲ. ಅದರಿಂದಾಗಿ ನಮ್ಮವರ ಸಾಂಸ್ಕೃತಿಕ ಇತಿಹಾಸದ ಅನೇಕ ಉಜ್ವಲ ಪುಟಗಳು ಬರೆಯದೆ ಉಳಿದವು.

ರಾಜಕೀಯ ಇತಿಹಾಸ ಅಲ್ಲಲ್ಲಿ ಸಿಗುತ್ತದಾದರೂ ಅವುಗಳಲ್ಲಿ ಯುದ್ಧ -ಸೋಲು- ಗೆಲುವುಗಳ ವ್ಯತಿರಿಕ್ತ ಬೇರೇನನ್ನೂ ಕಾಣೆವು. ಚಾರಿತ್ರಿಕ -ಕಾವ್ಯ ನಾಟಕಗಳಲ್ಲಿ ಕೂಡ ಇದನ್ನೇ ಕಾಣುತ್ತೇವೆ. ಸಾಮಾಜಿಕ -ಸಾಂಸ್ಕೃತಿಕ ಇತಿಹಾಸಕ್ಕೆ ಅಲ್ಲಿಯೂ ಹೇಳಿಕೊಳ್ಳುವಂಥ ನೆಲೆ ಸಿಗಲಿಲ್ಲ. ಮಹಿಪತಿರಾಯರು ತಮ್ಮ ಕಾಲದ ರಾಜಕೀಯದಲ್ಲಿ ಸಕ್ರಿಯ ಪಾತ್ರವಹಿಸಿ ಬಾದಶಹನ ವರೆಗೂ ಪರಿತಚಿರಾಗಿದ್ದರೆಂದು ಪರಂಪರೆಯಿಂದ ಹೇಳಿಕೊಂಡು ಬಂದಿದ್ದಾರೆ. ಅವರು ವಿಜಾಪುರದ ಆದಿಲಶಾಹಿ ಅರಸರ ಆಳ್ವಿಕೆಯಲ್ಲಿ ಆರನೆಯ ಬಾದಶಹ ಮಹ್ಮದ ಆದಿಲಶಹನ (೧೬೨೬-೧೬೫೬) ಆಸ್ಥಾನದಲ್ಲಿ ಕೋಶಾಧಿಕಾರಿಗಳಾಗಿದ್ದರೆಂದು ಒಂದು ನಂಬುಗೆ ದಟ್ಟವಾಗಿದೆ. ಅವರು ಮಂತ್ರಿಗಳಾಗಿದ್ದರು ಎಂದೂ ಕೆಲವರು ಹೇಳುತ್ತಾರೆ. ಆದರೆ ಐತಿಹಾಸಿಕ ದಾಖಲೆಗಳಲ್ಲಿ ಅವರ ಹೆಸರು ಮಾತ್ರ ಈವರೆಗೆ ದೊರೆತಿಲ್ಲ! ಬಹುಶ: ಅವರು ಖಡ್ಗ ಹಿಡಿದು ದಾಳಿಗೆ ಇಳಿದಿಲ್ಲ. ಅಥವಾ ಯಾವೊಂದು ಯುದ್ಧದ ಸೋಲು ಗೆಲುವುಗಳಲ್ಲಿ ಅವರು ಪ್ರಮುಖ ಪಾತ್ರವನ್ನು ವಹಿಸಲಿಲ್ಲ. ಆದ್ದರಿಂದ ಅವರು ಐತಿಹಾಸಿಕ ದಾಖಲೆಗಳಲ್ಲಿ ಕಂಡು ಬರಲ್ಲಿವೇನೋ? ಆದಿಲಶಾಹಿ ಅರಸರ ಕಾಲದ ಇತಿಹಾಸದ ಪುಟಗಳಲ್ಲಿ ಅನೇಕ ಹಿಂದು-ಮುಸ್ಲಿಮರ ಹೆಸರುಗಳು ದೊರೆಯುತ್ತವಾದರೂ ಮಹಿಪತಿರಾಯರ ಹೆಸರು ಕಾಣದೆ ಇರುವದಕ್ಕೆ ಇದುವೆ ಕಾರಣವಾಗಿರಬೇಕು. ಆದರೆ ಮಹಿಪತಿರಾಯರ ಕುರಿತು ಬಂದ ಇತ್ತೀಚಿನ ಸಾಹಿತ್ಯದಲ್ಲೆಲ್ಲ ಅವರು ಆದಿಲಶಹನ ಆಸ್ಥಾನದಲ್ಲಿ ಸಚಿವರಾಗಿದ್ದರೆಂಬ ಅಂಶವನ್ನು ತಪ್ಪದೆ ಉಲ್ಲೇಖಿಸುತ್ತಾರೆ.

ಮಹಿಪತಿರಾಯರು ತಮ್ಮ ಜೀವಿತ ಕಾಲದಲ್ಲಿಯೇ ಪಂಡಿತರಿಂದ ಪಾಮರರ-ವರೆಗೆ, ಜನಸಾಮಾನ್ಯನಿಂದ -ಆಳುವ ಅರಸನವರೆಗೆ ಪರಿಚಿತರಾಗಿದ್ದರೆಂದು ಪರಂಪರೆ ಹೇಳಿದರೂ ಅವರು ಮಾತ್ರ ತಮ್ಮ ಚರಿತ್ರೆಯನ್ನು ಅಪರಿಚಿತವಾಗಿಯೇ ಉಳಿಸಿ ಹೋಗಿದ್ದಾರೆ. ಅವರ ಊರು, ಕುಲ, ಗೋತ್ರ, ತಂದೆ-ತಾಯಿ, ಹೆಂಡತಿ-ಮಕ್ಕಳು, ಬಂಧು-ಬಳಗ ಇವುಗಳ ಕುರಿತು ಖಚಿತವಾಗಿ ಏನನ್ನೂ ಹೇಳಲಿಲ್ಲ. ಸಾವಿರಕ್ಕೆ ಹತ್ತಿರದ ಕೃತಿಗಳನ್ನು ರಚಿಸಿದ್ದರೂ ಅವುಗಳಲ್ಲೆಲ್ಲ ತಮ್ಮ ಆಧ್ಯಾತ್ಮದ, ಯೋಗ-ಸಿದ್ಧಿಯ, ಅನುಭಾವದ ಸ್ವಾನಂದ ಸಾಮ್ರಾಜ್ಯವನ್ನು ವಿಸ್ತರಿಸಿದರೇ ಹೊರತು, ತಮ್ಮ ಭೌತಿಕ ಸಾಮ್ರಾಜ್ಯದ ಮೇರೆಗಳನ್ನು ರಹಸ್ಯವಾಗಿಯೇ ಇಟ್ಟರು. ಅವರ ಕುರಿತು ಕಿಂಚಿತ್ ತಿಳಿದುಕೊಳ್ಳಲು ಅವರು ಕಾಲವಾದ ಅನಂತರ ಒಂದುನೂರು ವರುಷ ಕಾಯಬೇಕಾಗುತ್ತದೆ. ಅವರ ಮರಿಮಗ ತನ್ನ ಮುತ್ತಜ್ಜನ ಕುರಿತು 'ಶ್ರೀಪತಿ ತನುಜ' ಅಂಕಿತದಿಂದ ೨೦ ನುಡಿಗಳನ್ನು ಅಥವಾ ೮೦ ಸಾಲುಗಳನ್ನು ಬರೆದಿದ್ದಾನೆ. ಅದುವೆ ಮಹಿಪತಿರಾಯರ ಕುರಿತು ದೊರೆಯು ಪ್ರಥಮ ಚಾರಿತ್ರಿಕ ದಾಖಲೆ ಎನ್ನಬೇಕು. 'ಕರುಣೆಸಯ್ಯ ದಯವಾರಿಧಿ ಮಹಾರಾಯಾ' ಎಂಬುದು ಆ ಕೃತಿಯ ಮೊದಲ ಸಾಲು. ಅದರಲ್ಲಿ ಕೂಡ ಐತಿಹಾಸಿಕ ಅಥವಾ ಹೇಳಿಕೊಳ್ಳುವಂಥ ಚಾರಿತ್ರಿಕ ಅಂಶಗಳೇನೂ ಇಲ್ಲ. ಅವರು ಕೋನೇರಿರಾಯರ ಮಗನೆಂದು, ವಿಜಾಪುರದಲ್ಲಿ ಜನಿಸಿದರೆಂದು ಗೊತ್ತಾಗುತ್ತದೆ. ಹೆಂಡತಿಯ ಹೆಸರು ತಿಮ್ಮವ್ವ, ಗುರು ಭಾಸ್ಕರಸ್ವಾಮಿ, ಗುರುಗಳ ವಾಸ್ತವ್ಯ ಸಾರವಾಡ ಎಂಬ ಗ್ರಾಮದಲ್ಲಿ, ಅತ್ತಿಗೆಯ ಹೆಸರು ತುಕ್ಕವ್ವ ಹಾಗು ಕೊನೆಯಲ್ಲಿ ಭಕ್ತರು ಕರೆಯಲು, ಕಾಖಂಡಕಿ ಗ್ರಾಮಕ್ಕೆ ಬಂದು ನೆಲೆಸಿದ ವಿಷಯ ಮಾತ್ರ ತಿಳಿಯುತ್ತದೆ. ಆದರೆ ಇದು ನಡೆದ ಕಾಲವಾಗಲಿ, ಅವರು ಬೆಳೆದು ಬಂದ ಬಗೆ, ಇತ್ಯಾದಿಗಳ ವಿವರ ಇಲ್ಲಿಲ್ಲ. ೨೦ ನುಡಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ಅವರ ಯೋಗ ಸಾಧನೆ, ಸಿದ್ಧಿ ಹಾಗು ಕಾಲು ಭಾಗದಲ್ಲಿ ಅವರು ಮಾಡಿದ ಪವಾಡಗಳು ತುಂಬಿಕೊಂಡಿವೆ. ಈ ಕಿರು ಚರಿತ್ರೆಯನ್ನು ಕ್ರಿ.ಶ. ಸುಮಾರು ೧೭೮೦-೯೦ರ ಮಧ್ಯ ರಚಿಸಿರಬಹುದೆಂದು ಅವರ ಮನೆತನದ ವಂಶಾವಳಿಯಿಂದ ಊಹಿಸಬಹುದಾಗಿದೆ.

ಶ್ರೀಪತಿ ತನುಜರ ಕಾಲದಲ್ಲಿಯೆ 'ರುಕ್ಮಜದಾಸ' ಎಂಬ ಕವಿ ಮರಾಠಿ ಭಾಷೆಯಲ್ಲಿ ಮಹಿಪತಿರಾಯರ ಚರಿತ್ರೆಯನ್ನು ಬರೆದಿದ್ದಾನೆ. ಚರಿತ್ರೆಯ ಒಂದು ಅಧ್ಯಾಯ ಮಾತ್ರ ದೊರೆತಿದೆ. ಮುಂದಿನ ಅಧ್ಯಾಯಗಳನ್ನು ಆತನೇ ಬರೆಯಲಿಲ್ಲವೋ ಅಥವಾ ಬರೆದು ದೊರೆತಿಲ್ಲವೋ ಹೇಳಲು ಬರುವಂತಿಲ್ಲ. ಚರಿತ್ರೆಯು ಓವಿ ಪದ್ಧತಿಯಲ್ಲಿದೆ. ದೊರೆತ ಒಂದು ಅಧ್ಯಾಯದಲ್ಲಿ ೨೨೯ ಓವಿಗಳಿವೆ. ಅಂದರೆ ೪೫೮ ಸಾಲುಗಳು. ಈ ಒಂದು ಅಧ್ಯಾಯ ಕೂಡ ಈವರೆಗೆ ಅಪ್ರಕಟಿತವಾಗಿ ಉಳಿದಿದೆ. ಕನ್ನಡ ಕಿರುಚರಿತ್ರೆಗೂ -ಮರಾಠಿ ಚರಿತ್ರೆಗೂ ಇರುವ

ಅಂತರವೆಂದರೆ ಐಗಳಿ ವಿಪ್ರ ಕೋನೇರಿ ಪಂತ, ಆತನ ಮಗ ಮಹಿಪತಿಯ ಜನನ ಐಗಳಿಯಲ್ಲಿ. ಮಗ ದೊಡ್ಡವನಾದ ಮೇಲೆ ಅಶನಾರ್ಥವಾಗಿ ವಿಜಾಪುರಕ್ಕೆ ಆಗಮನ. ಮೊದಲು ಖವಾಸಖಾನ ಎಂಬ ಸರದಾರನಲ್ಲಿ ಕರಣಿಕ ವೃತ್ತಿ. ಈ ವೃತ್ತಿಯಲ್ಲಿದ್ದಾಗಲೇ ಒಂದು ದಿನ ಬಾದಶಹನ ಭೆಟ್ಟಿ. ಬಾದಶಹನ ಅನುಗ್ರಹದಿಂದ ಆಸ್ಥಾನದಲ್ಲಿ 'ಕಾರಭಾರಿ' ಎಂಬ ಕೆಲಸ. 'ಸಂಗಾಶಾಹ' ಎಂಬ ಫಕೀರನ ದರ್ಶನದಿಂದ ಒಂದು ದಿನ ಇಹದ ಕುರಿತು ಮೋಹಭಂಗ. ಸಾರವಾಡದ ಭಾಸ್ಕರ ಸ್ವಾಮಿಗಳ ಶಿಷ್ಯತ್ವ. ಭಾಸ್ಕರ ಸ್ವಾಮಿಗಳು ಮೂಲತ: ಲೋಕಾಪುರದವರು ಎಂಬ ಉಲ್ಲೇಖ. ಹೆಂಡತಿಯ ಹೆಸರು ಇಲ್ಲಿಯೂ ತಿಮ್ಮಾಬಾಯಿ, ಆದರೆ ತುಕ್ಕವ್ವ ಇಲ್ಲಿ 'ಬಹಿಣ' ಅಂದರೆ ಅಕ್ಕ-ತಂಗಿ ಯಾಗಿದ್ದಾಳೆ. ಭಾಸ್ಕರ ಸ್ವಾಮಿಗಳ ಅನುಗ್ರಹದೊಂದಿಗೆ ಚರಿತ್ರೆಯ ಒಂದು ಅಧ್ಯಾಯ ಕೊನೆಗೊಳ್ಳುತ್ತದೆ. ಈ ಮರಾಠಿ ಕೃತಿಯು ಕೂಡ ೧೮ನೆಯ ಶತಮಾನದ ಮಧ್ಯದಲ್ಲಿ ರಚಿತವಾದುದೆಂದು ಈ ಮೊದಲೇ ಉಲ್ಲೇಖಿಸಿದ ಡಾ. ಆವಳೀಕರರು ಅಭಿಪ್ರಾಯಪಡುತ್ತಾರೆ.

ಮಹಿಪತಿರಾಯರ ಕುರಿತು ದೊರೆಯುವ ಮೂರನೆಯ ಉಲ್ಲೇಖವೆಂದರೆ ಕ್ರಿ.ಶ. ೧೮೮೪ರಲ್ಲಿ ಪ್ರಕಟವಾದ ಮುಂಬಯಿ ಇಲಾಖೆಯ ಗೆಝೆಟಿಯರದಲ್ಲಿ. ಪಾಶ್ಚಾತ್ಯರ ಪ್ರಭಾವದಿಂದ ಭಾರತದಲ್ಲಿ ಇತಿಹಾಸದ ಪ್ರಜ್ಞೆ ಮೂಡಿದಾಗ ಪ್ರಾದೇಶಿಕ ತಿಳುವಳಿಕೆಗಾಗಿ ಹಾಗು ಆಡಳಿತಕ್ಕೆ ಅನುಕೂಲವಾಗುವಂತೆ ಬ್ರಿಟಿಶರು ಜಿಲ್ಹಾ ಗೆಝೆಟಿಯರ್‌ಗಳನ್ನು ಪ್ರಕಟಿಸಲು ಪ್ರಾರಂಭಿಸಿದರು. ಕೆಲವು ಪ್ರಮುಖ ಘಟನೆಗಳು, ಪ್ರಮುಖ ವ್ಯಕ್ತಿಗಳು ಹಾಗು ಸ್ಥಳ ಮಹಾತ್ಮೆ ಇತ್ಯಾದಿಗಳ ವಿವರಗಳನ್ನು ಸಂಗ್ರಹಿಸಿದರು. ವಿಜಾಪುರ ಜಿಲ್ಹೆಯ ಗ್ಯಾಝೆಟಿಯರದಲ್ಲಿ ಕಾಖಂಡಕಿ ಗ್ರಾಮದ ಪ್ರಮುಖ ವ್ಯಕ್ತಿ ಎಂದು ಉಲ್ಲೇಖಿಸುತ್ತ ಮಹಿಪತಿರಾಯರ ಕುರಿತು ಅಂದಿನ ಜನರಿಗೆ ಗೊತ್ತಿರುವಷ್ಟನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಗ್ಯಾಝೆಟಿಯರದಲ್ಲಿ ಕಾಣುವ ಹೊಸ ವಿಷಯವೆಂದರೆ ಮಹಿಪತಿರಾಯರು ಔರಂಗಜೇಬನಲ್ಲಿ (೧೬೮೬-೧೭೦೭) ಸಚಿವರಾಗಿದ್ದರು. ಕೊನೆಗೆ ಕೊಲ್ಹಾರ ಗ್ರಾಮದಲ್ಲಿ ಕಾಲವಾದರು. ಅವರ ಪಾರ್ಥಿವ ಶರೀರವನ್ನು ಅವರ ಇಚ್ಛೆಯಂತೆ ಕಾಖಂಡಕಿಗೆ ತಂದು ಅಲ್ಲಿ ಸಮಾಧಿಯನ್ನು ಕಟ್ಟಲಾಯಿತು.

ಇನ್ನು ಉಳಿದದ್ದು ಸಂಸ್ಕೃತ ಸ್ತೋತ್ರ ಕ್ರಿ.ಶ. ೧೮೮೬ರಲ್ಲಿ (ಗತಾಬ್ದಾ:೧೮೦೮) ಸವದತ್ತಿ ರಾಮ ಎಂಬ ಕವಿ ಮಹಿಪತಿರಾಯರ ಸ್ತೋತ್ರವನ್ನು ರಚಿಸಿದ್ದಾನೆ. ಅದರಲ್ಲಿ ೩೫ ಶ್ಲೋಕಗಳಿವೆ. ಕನ್ನಡ ಕಿರುಚರಿತ್ರೆ, ಮರಾಠಿ ಚರಿತ್ರೆಯ ಒಂದು ಅಧ್ಯಾಯಗಳೇ ಈ ಸ್ತೋತ್ರದ ಮುಖ್ಯ ಆಕರಗಳಾಗಿವೆ. ಸ್ತೋತ್ರದಲ್ಲಿ ಬರುವ ಹೊಸ ವಿಷಯವೆಂದರೆ ಮಹಿಪತಿರಾಯರು ಮಾಡಿದ ಒಂದು ಪವಾಡ. ಆಗಲೇ ಸುಮಾರು

ಜನ ಸಾಧು ಸಂತರು ಸ್ವಾಮಿಗಳ ಚರಿತ್ರೆಗಳಲ್ಲಿ ಬರುವ ಮಾಂಸದ ನೈವೇದ್ಯವನ್ನು ಫಲ-ಪುಷ್ಪಗಳನ್ನಾಗಿ ಪರಿವರ್ತಿಸಿದ ಪವಾಡ ಇಲ್ಲಿಯೂ ನಡೆಯುತ್ತದೆ. ಪಠಣಕ್ಕೆ ಅನುಕೂಲವಾಗಿದ್ದರೂ ಸ್ತೋತ್ರವು ಪ್ರಚಲಿತದಲಿಲ್ಲ. ಪ್ರಕಟವೂ ಆಗಿಲ್ಲ.

ಹೀಗೆ ಮಹಿಪತಿರಾಯರ ಚಾರಿತ್ರಿಕ ಅಂಶಗಳುಳ್ಳ ನಾಲ್ಕು ದಾಖಲೆಗಳು ಬಾಹ್ಯ ಪ್ರಮಾಣಗಳಾಗಿ ದೊರೆಯುತ್ತವೆ. ಇವುಗಳಲ್ಲೆಲ್ಲ ಕಾಣುವ ಒಂದು ಮುಖ್ಯ ಅಂಶವೆಂದರೆ ಚರಿತ್ರೆಯನ್ನು ಹೇಳುವಾಗ ಭಾವುಕತನಕ್ಕೆ ಹೆಚ್ಚು ಒತ್ತು ಕೊಟ್ಟುದು. ಆದರಿಂದಾಗಿ ನಮಗೆ ದೊರೆಯುವ ಕಥಾನಕಗಳಲ್ಲಿ ವಾಸ್ತವಿಕಕ್ಕಿಂತ ಕಲ್ಪನೆಗೆ ಹೆಚ್ಚು ಮಹತ್ವ ಕೊಟ್ಟದ್ದು ಕಂಡು ಬರುತ್ತದೆ. ಆದ್ದರಿಂದ ಇಂಥವುಗಳಲ್ಲಿ ಉಲ್ಲೇಖಿತವಾದ ಕೆಲವು ಅತಿರಂಜಿತ ಕಲ್ಪನೆಗಳನ್ನು, ಅಸಾಧ್ಯದ ಪವಾಡಗಳನ್ನು ಅವಾಸ್ತವಿಕ ದೃಷ್ಟಿಯಿಂದ ಬದಿಗೆ ಸರಿಸಬೇಕಾಗುತ್ತದೆ. ಆದರಿಂದಾಗಿ ಮಹಾಪುರುಷರ ಅಲೌಕಿಕತೆಯನ್ನು ಪ್ರಶ್ನಿಸಿದ ಹಾಗೆ ಎಂದು ಯಾರೂ ಭಾವಿಸಬೇಕಾಗಿಲ್ಲ.

ಇನ್ನು ಮಹಿಪತಿರಾಯರ ಜೀವನದ ಮೇಲೆ ಬೆಳಕು ಬೀರಲು ಸಹಾಯವಾಗುವ ಕೆಲವು ಆಂತರಿಕ ಪ್ರಮಾಣಗಳೂ ದೊರೆಯುತ್ತವೆ. ಅವುಗಳಲ್ಲಿ ಅವರೇ ರಚಿಸಿದ 'ನೆನೆದು ನಮಿಸುವೆನು ವಾರಂ ವಾರ' ಎಂಬ ಸ್ತೋತ್ರ ಪದ್ಯ. ಅವರ ಮಗ ಕೃಷ್ಣರಾಯರು ರಚಿಸಿದ ಖಂಡಕಾವ್ಯ 'ಆನಂದ ಲಹರಿ'ಯ ಕೊನೆಯ ಪದ್ಯ ಹಾಗು ದೊರೆತ ಹಸ್ತಪ್ರತಿಗಳಲ್ಲಿ ಕೆಲವೆಡೆ ನಮೂದಿತವಾದ ಕಾಲ ನಿರ್ದೇಶನಗಳು ಪ್ರಮುಖವಾಗಿವೆ.

ಈ ಬಾಹ್ಯ ಹಾಗು ಆಂತರಿಕ ಪ್ರಮಾಣಗಳ ಆಧಾರದಿಂದ ಹಾಗು ಪರಂಪರೆಯಿಂದ ಕೇಳಿ ಬಂದ ಸಂಗತಿಗಳಿಂದ ಈ ಶತಮಾನದಲ್ಲಿ ಕೂಡ ಮಹಿಪತಿರಾಯರ ಚರಿತ್ರೆಯನ್ನು ಹಲವೆಡೆ ಬರೆದು ಪ್ರಕಟಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳು ಶ್ರೀ ಬೇಲೂರ ಕೇಶವದಾಸರ 'ಕರ್ಣಾಟಕ ಭಕ್ತ ವಿಜಯ'ದಲ್ಲಿ ಬರುವ ರಾಯರ ಚರಿತ್ರೆ. ಅವರ ಮನೆತನದವರೇ ಆದ ಶ್ರೀ ಅಣ್ಣಪ್ಪಯ್ಯ ಹರಿದಾಸರು ಸಂಪಾದಿಸಿದ 'ಶ್ರೀ ಮಹಿಪತಿರಾಯರ ಕೀರ್ತನೆಗಳ ಸಂಗ್ರಹ' (೧೯೫೩) ಹಾಗೂ ಶ್ರೀ ಶ್ರೀಪತಯ್ಯ ಹರಿದಾಸರು ಸಂಗ್ರಹಿಸಿದ 'ಸೇವಾತತ್ವ' (೧೯೬೩) ಗಳ ಪೀಠಿಕೆಗಳಲ್ಲಿ ಬರುವ ರಾಯರ ಸಂಕ್ಷಿಪ್ತ ಚರಿತ್ರೆ. ಶ್ರೀ ಮ.ಶ್ರೀ. ದೇಶಪಾಂಡೆ ಅವರ 'ಸ್ವಾನಂದ ಸಾಮ್ರಾಜ್ಯ' (೧೯೬೨) ಹಾಗು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಡಾ. ಜಿ. ವರದರಾಜರಾವ ಅವರು ಸಂಪದಾಸಿದ 'ಶ್ರೀ ಮಹಿಪತಿ ರಾಯರ ಕೀರ್ತನೆಗಳು' (೧೯೭೬) ಸಂಗ್ರಹದ ಪೀಠಿಕೆಯಲ್ಲಿ ಬಂದ ಚರಿತ್ರೆ ಇವುಗಳಲ್ಲದೆ ಸಾಂದರ್ಭಿಕವಾಗಿ ನಿಯತಕಾಲಿಕೆಗಳಲ್ಲಿ ಕೆಲವು ಬಿಡಿ ಲೇಖನಗಳೂ ಪ್ರಕಟವಾಗಿವೆ.

ಈಗ ಇವೆಲ್ಲವುಗಳ ಆಧಾರಗಳಿಂದ ಮಹಿಪತಿರಾಯರ ವಸ್ತು ನಿಷ್ಠವಾದ ಚರಿತ್ರೆಯನ್ನು ನೋಡುವ ಮೊದಲು ಅವರ 'ಕಾಲ ವಿಚಾರ'ವನ್ನು ಚರ್ಚಿಸಬಹುದು.

### ೪.೨ ಕಾಲ-ವಿಚಾರ

ಪೂರ್ವೋಕ್ತ ಚಾರಿತ್ರಿಕ ಅಂಶಗಳುಳ್ಳ ಕೃತಿಗಳಲ್ಲಿ ಶ್ರೀ. ಮ.ಶ್ರೀ. ದೇಶಪಾಂಡೆ ಅವರು ಹಾಗೂ ಶ್ರೀ ಶ್ರೀಪತಯ್ಯ ಹರಿದಾಸರು ತಮ್ಮ ಕೃತಿಗಳಲ್ಲಿ ಮಹಿಪತಿರಾಯರ ಕಾಲ ವಿಚಾರದ ಕುರಿತು ಚರ್ಚಿಸಿದ್ದಾರೆ. ಅವುಗಳನ್ನು ಡಾ. ಜಿ. ವರದರಾಜರಾವ್ ಅವರು ವಿಶೇಷ ಚರ್ಚೆ ಇಲ್ಲದೆ ಒಪ್ಪಿಕೊಂಡಿದ್ದಾರೆ.//೧// ಇವರುಗಳ ಪ್ರಕಾರ,

| | | |
|---|---|---|
| ಮಹಿಪತಿರಾಯರ ಜನನ | ಕ್ರಿ.ಶ.ಸು. | ೧೬೧೧ |
| ಸಚಿವರಾದದ್ದು | ,, | ೧೬೩೫ |
| ಗುರುಗಳ ಅನುಗ್ರಹ | ,, | ೧೬೫೧ |
| ವಿಜಾಪುರ ತ್ಯಾಗ | ,, | ೧೬೫೫ |
| ಕಾಖಂಡಕಿಯಲ್ಲಿ ನೆಲಸಿದ್ದು | ,, | ೧೬೫೯ |
| ಮಗ ಕೃಷ್ಣರಾಯರ ಜನನ | ,, | ೧೬೬೩ |
| ಮಹಿಪತಿರಾಯರ ಮರಣ | ,, | ೧೬೮೧ |

ಹೀಗೆ ಕ್ರಿ.ಶ.ಸು ೧೬೧೧ ರಿಂದ ೧೬೮೧ರ ವರೆಗೆ ಅಂದರೆ ೭೦ ವರುಷಗಳವರೆಗೆ ಜೀವಿಸಿದ್ದರೆಂದು ಹೇಳಲಾಗಿದೆ.

ಮೊದಲು ಅವರುಗಳು ಆಧರಿಸಿದ ಗ್ರಂಥಗಳನ್ನು ನೋಡಬಹುದು.

'ಮಹಿಪತಿರಾಯರು ಖವಾಸಖಾನನೆಂಬ, ಬಾದಶಹನ ಅಧಿಕಾರಿಯಲ್ಲಿ ಮೊದಲು ಕಾರಕೂನನಾಗಿ ಕೆಲಸ ಮಾಡಹತ್ತಿದರೆಂದು 'ಗುರು ಮಾಲಿಕೆ'ಯು ಹೇಳುತ್ತದೆ. ಈ ಖವಾಸಖಾನನು ವಿಜಾಪುರದಲ್ಲಿ ಕ್ರಿ.ಶ. ೧೬೨೬ರಿಂದ ೧೬೫೬ರ ವರೆಗೆ ಆಳಿದ ಮಹ್ಮದಶಹನ ದಿವಾಣನೇ ಇರುವ ಸಂಭವವಿದೆ. ಅವನನ್ನು ಶಾಹನು ಕ್ರಿ.ಶ. ೧೯೩೫ರಲ್ಲಿ ಪಿತೂರನೆಂದು ಕೊಲ್ಲಿಸಿದನು ಎಂದು ಇತಿಹಾಸ ಹೇಳುತ್ತದೆ.' ಎಂದು ಶ್ರೀ ಮ.ಶ್ರೀ. ದೇಶಪಾಂಡೆ ಅವರು ಮಹಿಪತಿರಾಯರ ಮರಾಠಿ ಚರಿತ್ರೆಯಲ್ಲಿ ಬಂದ ವಿಷಯವನ್ನು ಇತಿಹಾಸದೊಂದಿಗೆ ಜೋಡಿಸಿದ್ದಾರೆ.//೨//

ವಿಜಾಪುರದ ಎರಡುನೂರು ವರುಷಗಳ ಆದಿಲಶಾಹಿ ರಾಜ್ಯದಲ್ಲಿ ಇಬ್ಬರು ಖವಾಸಖಾನರು ಆಗಿಹೋದರೆಂದು ಚರಿತ್ರೆ ಹೇಳುತ್ತದೆ. ಒಬ್ಬ ಖವಾಸಖಾನನು ಶ್ರೀ ದೇಶಪಾಂಡೆ ಅವರು ಹೇಳುವ ಮಹ್ಮದ ಆದಿಲಶಹನ (೧೯೨೬-೧೯೫೬) ಕಾಲದಲ್ಲಿ ಇದ್ದದ್ದು ನಿಜ. ಇನ್ನೊಬ್ಬ ಖವಾಸಖಾನನು ೨ನೆಯ ಅಲಿ ಆದಿಲಶಹ

(೧೬೫೬-೧೬೨೯) ಹಾಗು ಸಿಕಂದರ ಆದಿಲಶಹನ (೧೬೨೯-೧೬೮೬) ಕಾಲದಲ್ಲಿ ಇದ್ದನು.//೩// ಈ ಇಬ್ಬರು ಖವಾಸಖಾನರಲ್ಲಿ ಮೊದಲನೆಯವನ ಮೂಲ ಹೆಸರು ದೌಲತಖಾನ ಎಂದಾಗಿತ್ತು. ಮಹ್ಮದ ಆದಿಲಶಹನು ಪಟ್ಟಕ್ಕೆ ಬರುವಲ್ಲಿ ಈತ ಸಹಾಯ ಮಾಡಿದನೆಂದೂ, ಅನಂತರ ಅವನಿಗೆ 'ಖವಾಸಖಾನ' ಎಂಬ ಬಿರುದನ್ನು ಕೊಡಲಾಗಿತ್ತು.//೪// ಶ್ರೀ ದೇಶಪಾಂಡೆಯವರು ಹೇಳುವಂತೆ ಈತನು ಬಾದಶಹನಿಂದ ಕೊಲ್ಲಲ್ಪಡಲಿಲ್ಲ. ಕೊನೆಯವರೆಗೂ ಬಾದಶಹನ ಪ್ರೀತಿಯನ್ನು ಸಂಪಾದಿಸಿದ್ದನು. ಆದರೆ ಸಿಕಂದರನ ಕಾಲದಲ್ಲಿದ್ದ ಖವಾಸಖಾನನು ಕೊಲ್ಲಲ್ಪಟ್ಟನು. ಅದು ಸುಮಾರು ೧೬೭೪-೭೫ ರಲ್ಲಿ ನಡೆದ ಘಟನೆ.//೫//

'ಗುರುಮಾಲಿಕೆಯಲ್ಲಿ ಮಹಿಪತಿರಾಯರು ಖವಾಸ ಖಾನನಲ್ಲಿ ಕರಣಿಕರಾಗಿದ್ದರೆಂತಲೂ ಮುಂದೆ ಅವನ ಹಾಗು ಬಾದಶಹನ ಪ್ರೀತ್ಯಾದರಗಳಿಗೆ ಪಾತ್ರರಾಗಿ ದಿವಾನ (ಸಚಿವ) ಪದವಿಗೆ ಏರಿದರೆಂತಲೂ ಹೇಳಿದೆ ಎಂದು ಶ್ರೀ ದೇಶಪಾಂಡೆ ಅವರು ಸ್ವಾನಂದ ಸಾಮ್ರಾಜ್ಯದಲ್ಲಿ ಹೇಳಿದ್ದನ್ನು ಡಾ. ವರದರಾಜರಾವ್ ಅವರು ಅನುಮೋದಿಸಿದ್ದಾರೆ.//೬// ಆದರೆ ಗುರುಮಾಲಿಕೆ ಎಂದು ಕರೆಯುವ ಮರಾಠಿ ಚರಿತ್ರೆಯಲ್ಲಿ ದಿವಾನ ಪಟ್ಟಕ್ಕೆ ಏರಿದರೆಂದು ಹೇಳಿಲ್ಲ. ಒಂದು ದಿನ ತನ್ನ ಮತ್ತು ಬಾದಶಹನ ಮಧ್ಯದ ಲೆಕ್ಕಪತ್ರದ ವಿಷಯದಲ್ಲಿ ವಿವರಣೆ ಕೊಡಲು ಮಹಿಪತಿರಾಯರನ್ನು ಬಾದಶಹನ ಹತ್ತಿರ ಕಳಿಸಿದನು. ರಾಯರ ವಿವರಣೆಯಿಂದ ಬಾದಶಹ ತೃಪ್ತಿಪಟ್ಟು, ಇಂಥ ವ್ಯಕ್ತಿ ತನ್ನ ಆಸ್ಥಾನದಲ್ಲಿರಬೇಕೆಂದುಕೊಂಡು 'ಅಖ್ತಿಯಾರ'ನೆಂದು ನಿಯಮಿಸಿದ.//೭//

ಶ್ರೀ ದೇಶಪಾಂಡೆ ಹಾಗೂ ಶ್ರೀ ಶ್ರೀಪತಯ್ಯನವರು ಈ ಐತಿಹಾಸಿಕ ಆಧಾರಗಳ ಜೊತೆಗೆ ಶ್ರೀಪತಿತನುಜರು ಬರೆದ ಕನ್ನಡ ಕಿರುಚರಿತ್ರೆಯಲ್ಲಿಯ ಕೆಲವು ವಿಷಯಗಳನ್ನು ಸೇರಿಸಿ ಕಾಲ ನಿರ್ಣಯಿಸಲು ಪ್ರಯತ್ನಿಸಿದ್ದಾರೆ.//೮// ಚರಿತ್ರೆಯಿಂದ ತೆಗೆದುಕೊಂಡ ನುಡಿಗಳು ಹೀಗಿವೆ.

'ಅಂತರಂಗದಲ್ಲಿ ತಿಳಿಯುತಲಾಗ್ರಾಮಾ। ತ್ಯಜಿಸಿದ್ಯೋ ನಿಸ್ಸೀಮಾ।।
ಸಂತಸದಲ್ಲಿ ಶಾಪೂರಕ್ಹೋಗುತ ಧಾಮಾ। ಮಾಡಿದ್ಯೋ
ನಿಷ್ಕಾಮಾ।।೧೧।।

ಅಲ್ಲಿ ಮೂರು ಸಂವತ್ಸರ ಇರಲಾಗಿ। ಶರಣಾಳಿಯು ಬಾಗಿ।।
ಇಲ್ಲಿ ನೀವು ದಯಮಾಡುವುದೊಳಿತಾಗಿ। ಸರಿಬಾರದಾಗಿ।।
ಅಲ್ಲಿಂದ ಪಯಣಮಾಡುತ ಪಥಸಾಗಿ। ಬಂದ್ಯೋ ಮಹಾತ್ಮಾಗಿ।।
ಮೆಲ್ಲನೆ ಕಾಖಂಡಕಿ ಸ್ಥಳಕನುವಾಗಿ। ಬರಲು ವರಯೋಗಿ।।೧೨।।'

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮರಾಠಿ ಚರಿತ್ರೆಯನ್ನು ಬರೆದ ರುಕ್ಮಾಂಗದಾಸನ ಸಮಕಾಲೀನರು ಅಥವಾ ತುಸು ಮೊದಲಿನವರೇ ಆದ ಶ್ರೀಪತಿ ತನುಜರು ತಮ್ಮ ಮುತ್ತಜ್ಜನ ಈ ಚರಿತ್ರರೂಪದ ಪದ್ಯಗಳಲ್ಲಿ ಮಹಿಪತಿರಾಯರು ನೌಕರಿಗೆ ಇದ್ದುದನ್ನಾಗಲೀ, ಅನಂತರ ದಿವಾಣ ಪದವಿಗೆ ಏರಿದರೆಂದಾಗಲೀ ಹೇಳಲಿಲ್ಲ. ನೇರ ಸಂಬಂಧವುಳ್ಳ ಶ್ರೀಪತಿ ತನುಜರು ಈ ವಿಷಯದಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಹುದಾಗಿತ್ತು. ಮಹಿಪತಿರಾಯರ ಜೀವನದ ಪ್ರಾರಂಭದ ದಿನಗಳನ್ನು ಹೇಳುವಾಗ ಅವರು ಕೊಡುವ ಚಿತ್ರ ಹೀಗೆ ಇದೆ.

> 'ಜನಿಸಿದೆ ಮೊದಲೀ ವಿಜಾಪುರದಲಿ ನೀನು। ಭಕ್ತರ ಸುರಧೇನು।।
> ಜನದೊಳೆನಿಸಿ ಕೋನೇರಿರಾಯನ ಮಗನು। ಐಗಳಿ ವೃತ್ತಿಯನು।।
> ಮನಕೆ ತಾರದೆ ಘನ ವ್ಯಾಪಾರವನು। ಮಾಡುತ ಭಾಗ್ಯವನು।।
> ಅನುಭವಿಸುತಲಿರೆ ಸುತರಾಪೇಕ್ಷೆಯನು। ಮಾಡಲು ತಿಮ್ಮವ್ವನು।।೧।।

ಇಲ್ಲಿ ಬರುವ ಅರ್ಥ- ಮಹಿಪತಿರಾಯರು - ಐಗಳಿ ವೃತ್ತಿ (ಐಗಳ -ವೃತ್ತಿ ಭಿಕ್ಷಾವೃತ್ತಿ) ಯನ್ನು ಬಿಟ್ಟು ಘನ ವ್ಯಾಪಾರವನ್ನು ಮಾಡುತ್ತ ಭಾಗ್ಯವನ್ನು ಅನುಭವಿಸುತ್ತಿರುವಾಗ ಅವರ ಹೆಂಡತಿ ತಿಮ್ಮವ್ವನು ಮಕ್ಕಳ ಅಪೇಕ್ಷೆಯನ್ನು ಮಾಡಿ ಸಾರವಾಡದಲ್ಲಿದ್ದ ಭಾಸ್ಕರ ಸ್ವಾಮಿಗಳ ಸೇವೆಯನ್ನು ಮಾಡಿದಳೆಂದು ಕಥೆ ಸಾಗುತ್ತದೆ.

ಇಲ್ಲಿಯ 'ಅಂತರಂಗದಲ್ಲಿ ತಿಳಿಯುತಲಾಗ್ರಾಮಾ' ಎನ್ನುವ ವಿಷಯವನ್ನು ಕ್ರಿ.ಶ. ೧೬೫೬ ರಲ್ಲಿ ಔರಂಗಜೇಬನು ವಿಜಾಪುರದ ಮೇಲೆ ದಂಡೆತ್ತಿ ಬಂದುದನ್ನು ತೋಲಿಸಿ, ರಾಯರು ಈ ದಂಡು ದಾಳಿಯೇ ವಿಪತ್ತು ಎಂದು ತಮ್ಮ ಅಂತರ್‌ಜ್ಞಾನದಿಂದ ತಿಳಿದು ಇನ್ನು ಇಲ್ಲಿರುವುದು ಉಚಿತವಲ್ಲವೆಂದು 'ಶಾಪೂರ'ಕ್ಕೆ ಹೋದರೆಂದು ಶ್ರೀ ಶ್ರೀಪತಯ್ಯನವರು ಹೇಳುತ್ತಾರೆ.//೯// ಕ್ರಿ.ಶ. ೧೬೫೬ರಲ್ಲಿ ಔರಂಗಜೇಬನು ವಿಜಾಪುರದ ಮೇಲೆ ದಂಡೆತ್ತಿ ಬಂದುದು ನಿಜ. ಆದರೆ ಶಾಹಜಹಾನನ ಅಸ್ವಸ್ಥತೆಯನ್ನು ಕೇಳಿ ತನ್ನ ಸಿಂಹಾಸನ ಹೋದೀತೆಂದು ವಿಜಾಪುರದ ದಾಳಿಯನ್ನು ಅಷ್ಟಕ್ಕೆ ನಿಲ್ಲಿಸಿ ಅವನು ದಿಲ್ಲಿಗೆ ಮರಳಿದನು.//೧೦// ಹೀಗಾಗಿ ಬಂದ ವಿಪತ್ತು ಇಲ್ಲವಾಯಿತು. ಆದ್ದರಿಂದ ಈ ಸಮಯದಲ್ಲಿ ಮಹಿಪತಿರಾಯರು ವಿಜಾಪುರವನ್ನು ಬಿಟ್ಟು ಶಾಹಪುರಕ್ಕೆ ಹೋಗಿ ಅಲ್ಲಿ ಮೂರುವರ್ಷ ಇರುವ ಅವಶ್ಯಕತೆ ಇರಲಿಲ್ಲ. ಆದರೆ ಶ್ರೀಪತಿತನುಜರು ಹೇಳಿದಂತೆ 'ಶಾಹಪುರಕ್ಕೆ ಹೋಗಿ ಮೂರು ವರುಷ ಅವರು ಅಲ್ಲಿ ಇದ್ದುದನ್ನು ಅಲ್ಲಗಳೆಯುವಂತಿಲ್ಲ. ಅವರು ಶಾಹಪುರಕ್ಕೆ ಹೋಗಿದ್ದು ನಿಜ. ಕಲಬುರ್ಗಿ ಜಿಲ್ಲೆಯ ತಾಲೂಕಿನ ಸ್ಥಳ ಶಾಹಪುರದಲ್ಲಿ ಇಂದಿಗೂ ಅವರು ಉಳಿದುಕೊಂಡಿದ್ದ ಕುರುಹುಗಳು ಇವೆ. ಆದ್ದರಿಂದ ಒಂದು ದೊಡ್ಡ ವಿಪತ್ತನ್ನು ಎದುರಿಗಿಟ್ಟುಕೊಂಡು ಅವರು ಶಾಹಪುರಕ್ಕೆ ಹೋಗಿರಬೇಕು. ಪ್ರಸ್ತುತ ವಿಜಾಪುರಕ್ಕೆ

ಬಂದ ಅಂಥ ದೊಡ್ಡ ವಿಪತ್ತನ್ನು ಗುರುತಿಸಬೇಕು.

ಕ್ರಿ.ಶ. ೧೬೮೪ರಲ್ಲಿ ಔರಂಗಜೇಬನು ಮತ್ತೆ ದಕ್ಷಿಣಕ್ಕೆ ದಂಡೆತ್ತಿ ಬಂದನು. ವರುಷಗಟ್ಟಲೇ ಕಾಡಾಡಿ, ಮರಾಠಾ, ಮೊಗಲ ಹಾಗೂ ವಿಜಾಪುರಗಳಲ್ಲಿ ಪರಸ್ಪರ ಅನೇಕ ಒಡಕುಗಳನ್ನು ಸೃಷ್ಟಿಸಿ ಕೊನೆಗೆ ೧೬೮೬ರಲ್ಲಿ ವಿಜಾಪುರವನ್ನು ಆತ ವಶಪಡಿಸಿಕೊಂಡನು. ವಿಜಾಪುರದ ಕೊನೆಯ ಬಾದಶಹ ತರುಣ ಸಿಕಂದರನನ್ನು ಕೈದು ಮಾಡಿಕೊಂಡು ಹೊರಟಾಗ ನಗರದ ಜನತೆ ಕಣ್ಣೀರು ಹರಿಸಿತೆಂದು ಇತಿಹಾಸದ ಪುಟಗಳು ಹೇಳುತ್ತವೆ. ಅಂತು ಹೀಗೆ ವಿಜಾಪುರದ ಪತನವಾದಾಗ ಅದರ ಬೆನ್ನ ಹಿಂದೆಯೇ ಕ್ರಿ.ಶ. ೧೬೮೬ ರಿಂದ ೧೬೮೯ರ ವರೆಗೆ ಮೂರು ವರುಷ ವಿಜಾಪುರ ನಗರವು ಪ್ಲೇಗಿನಿಂದ ಧಗಧಗಿಸಿತು.//೧೧// ಇದು ವಿಜಾಪುರಕ್ಕೆ ಬಂದ ಬಹುದೊಡ್ಡ ವಿಪತ್ತು ಎಂದು ಹೇಳಬೇಕು. ಇದಕ್ಕೆ ಪೂರಕವಾಗಿ ಶ್ರೀಪತಿ ತನುಜರು ತಮ್ಮ ಮುತ್ತಜ್ಜನ ಕಿರುಚರಿತ್ರೆಯ ಹತ್ತನೆಯ ನುಡಿಯ ಕೊನೆಯ ಸಾಲಿನಲ್ಲಿ ಹಾಗೂ ಹನ್ನೊಂದನೆಯ ನುಡಿಯ ಮೊದಲನೆಯ ಸಾಲು ಈ ವಿಷಯವನ್ನು ಒತ್ತಿ ಹೇಳಿದ್ದನ್ನು ಶ್ರೀ ದೇಶಪಾಂಡೆ ಅವರಾಗಲಿ, ಶ್ರೀ ಶ್ರೀಪತಯ್ಯ ಹರಿದಾಸರಾಗಲಿ ಗಮನಿಸಿದಂತಿಲ್ಲ.

'ಅನಿತರೊಳಗೆ ನೀ ಆ ನಗರಕೆ ತ್ವರಿತ। ವೇಧಿಯು ಬಂತೆನುತ ।।೧೦।।
ಅಂತರಂಗದಲಿ ತಿಳಿಯುತಲಾಗ್ರಾಮಾ। ತ್ಯಜಿಸಿದ್ಯೋ ನಿಸ್ಸೀಮಾ।

ಆದ್ದರಿಂದ ಈ ಅವಧಿಯಲ್ಲಿ ಅಂದರೆ ಕ್ರಿ.ಶ. ಸುಮಾರು ೧೬೮೫-೮೬ರ ಹೊತ್ತಿಗೆ ಮಹಿಪತಿರಾಯರು ವಿಜಾಪುರವನ್ನು ಬಿಟ್ಟು ಶಾಪುರಕ್ಕೆ ಹೋಗಿರಬಹುದು. ಪ್ಲೇಗಿನಲ್ಲಿ ಊರ: ಬಿಟ್ಟು ಹೋಗುವದು ಸಹಜ ವಿಷಯ. 'ವೇಧಿಯು ಬಂತೆನುತ' 'ಅಂತರಂಗದಲಿ ತಿಳಿಯುತಲಾಗ್ರಾಮಾ' ಹಾಗೂ 'ಅಲ್ಲಿ ಮೂರು ಸಂವತ್ಸರ ಇರಲಾಗಿ' ಎಂಬ ಪದಗಳು ಇಲ್ಲಿ ಸಾಕಷ್ಟು ಅರ್ಥಪೂರ್ಣವೆನಿಸುತ್ತವೆ. ಶಾಪುರದಲ್ಲಿ ಮೂರು ವರುಷ ಇದ್ದು ತಿರುಗಿ ವಿಜಾಪುರಕ್ಕೆ ಬಂದಾಗ, ಹಾಳು ಬಿದ್ದ ವಿಜಾಪುರವನ್ನು ನೋಡಿ, ಅಲ್ಲಿರದೆ ಸಮೀಪದ ಕಾಖಂಡಕಿ ಎಂಬ ಗ್ರಾಮಕ್ಕೆ ಪ್ರಯಾಣ ಬೆಳೆಸಿ ಅಲ್ಲಿಯೆ, ಸ್ಥಾಯಿಯಾಗಿ ಉಳಿದಿರಬಹುದು. ಈ ಕಾರಣಗಳಿಂದ ಮಹಿಪತಿರಾಯರು ಮಹ್ಮದಶಾಹನ (೧೬೨೬-೧೬೫೬) ಕಾಲದಲ್ಲಿರದೆ ಸಿಕಂದರನ (೧೬೭೨-೧೬೮೬) ಕಾಲದಲ್ಲಿ ಇದ್ದರೆಂದು ಹೇಳುವದು ಸೂಕ್ತವೆನಿಸುತ್ತದೆ.

ಈಗ ಶ್ರೀ ದೇಶಪಾಂಡೆ ಹಾಗೂ ಶ್ರೀ ಶ್ರೀಪತಯ್ಯನವರು ಚಾರಿತ್ರಿಕ ದಾಖಲೆಗಳಲ್ಲಿ ಇರದ ಆದರೆ ಪರಂಪರೆಯಿಂದ ಕೇಳಿಕೊಂಡ ಬಂದ ಒಂದು ಸಂಗತಿಯನ್ನು ತಮ್ಮ ಚರಿತ್ರೆಗಳಲ್ಲಿ ಉಲ್ಲೇಖಿಸಿದ್ದನ್ನು ಗಮನಿಸೋಣ.

ಮಹಿಪತಿರಾಯರ ಗುರುಗಳೆಂದು ಹೇಳಿಕೊಳ್ಳುತ್ತ ಬಂದ ಉಮರ್ಜಿ ಕೃಷ್ಣಾಚಾರ್ಯರ ಹೆಸರನ್ನು ಶ್ರೀ ದೇಶಪಾಂಡೆ, ಶ್ರೀ ಶ್ರೀಪತಯ್ಯ ಹಾಗೂ ಡಾ. ಜಿ. ವರದರಾಜರಾವ ತಂತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ.//೧೨// ಆದರೆ ಅವರ ಕಾಲವನ್ನು ಗಮನಿಸಿದಂತಿಲ್ಲ. ಈ ಉಮರ್ಜಿಯವರು ಯಾರು?

ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರು ಉತ್ತರಾದಿಮಠದ ಶ್ರೀ ಸತ್ಯಾಭಿನವ ತೀರ್ಥರೊಡನೆ ಇರುತ್ತಿದ್ದರು. ಶ್ರೀ ಸತ್ಯಾಭಿನವ ತೀರ್ಥರು ಉತ್ತರಾದಿ ಮಠವನ್ನು ಆಳಿದ್ದು ಕ್ರಿ.ಶ. ೧೬೭೩ ರಿಂದ ೧೭೦೩.//೧೩// ಈ ಕಾಲದಲ್ಲಿ ಉಮರ್ಜಿಯವರು ಇದ್ದರೆನ್ನಬಹುದು. ಆದರೆ ಗ್ರಹಿತ ಕ್ರಿ.ಶ. ೧೬೧೧ ರಲ್ಲಿ ಹುಟ್ಟಿರಬಹುದಾದ 'ಬಾಲ ಮಹಿಪತಿಯ ಜಾತಕವನ್ನು ಪ್ರಲ್ಹಾದ ಕೃಷ್ಣಾಚಾರ್ಯರು ನೋಡಿದರು' ಎಂಬ ಶ್ರೀಪತಯ್ಯನವರ ಹೇಳಿಕೆ,//೧೪// 'ಒಂದು ದಿನ ಏನೋ ಕಾರಣದಿಂದ ಮಹಿಪತಿಯ ಜನ್ಮ ಪತ್ರಿಕೆಯನ್ನು ನೋಡುವ ಕುತೂಹಲವು ಆಚಾರ್ಯರಿಗುಂಟಾಯಿತು' ಎಂಬ ಶ್ರೀ ದೇಶಪಾಂಡೆಯವರ ಹೇಳಿಕೆ//೧೫// ಹಾಗೂ 'ಬಾಲಕ ಮಹಿಪತಿಯ ಜಾತಕವನ್ನು ಕಂಡ ಆಚಾರ್ಯರು .... .. ' ಎಂಬ ಡಾ. ಜಿ. ವರದರಾಜರಾವ ಅವರ ಹೇಳಿಕೆಗಳು //೧೬// ಅಸಂಗತವೆನಿಸುತ್ತವೆ. ಇಷ್ಟಾಗಿಯೂ ಉಮರ್ಜಿ ಅವರ ಹೆಸರು ಗ್ರಂಥಸ್ಥವಾಗಿ ಈ ವರೆಗೆ ಎಲ್ಲಿಯೂ ದೊರೆತಿಲ್ಲ. ಶ್ರೀಪತಿ ತನುಜರಾಗಲಿ, ರುಕ್ಮಜದಾಸನಾಗಲಿ, ತಮ್ಮ ಚರಿತ್ರೆಗಳಲ್ಲಿ ಉಮರ್ಜಿ ಅವರ ಹೆಸರನ್ನು ಉಲ್ಲೇಖಿಸುವುದಿಲ್ಲ. ಮಹಿಪತಿರಾಯರು ತಮ್ಮ ಗುರು ಭಾಸ್ಕರ ಸ್ವಾಮಿಗಳ ಕುರಿತು ನೂರಾರು ಪದಗಳನ್ನು ಬರೆದಿರುವರಾದರೂ ಉಮರ್ಜಿ ಅವರ ಹೆಸರನ್ನು ಎಲ್ಲಿಯೂ ಉಲ್ಲೇಖಿಸದೇ ಇದ್ದುದು ಗಮನಾರ್ಹವಾಗಿದೆ.

ಈವರೆಗೆ ಚರ್ಚಿಸಿದ ವಿಷಯಗಳಿಂದ ಮಹಿಪತಿರಾಯರು ೧೭ನೆಯ ಶತಮಾನದ ಆದಿಯಲ್ಲಿರದೆ - ಆ ಶತಮಾನದ ಅಂತ್ಯ ಹಾಗೂ ೧೮ನೆಯ ಶತಮಾನ ಆದಿಯಲ್ಲಿರಬಹುದೆಂದು ಊಹಿಸಲು ಅವಕಾಶವಿದೆ. ಈ ಬಾಹ್ಯ ಪ್ರಮಾಣಗಳ ಜೊತೆಗೆ, ಈಗ ಕೆಲವು ಆಂತರಿಕ ಪ್ರಮಾಣಗಳನ್ನು ಚರ್ಚಿಸುತ್ತ ರಾಯರ ಸಂಭಾವ್ಯ ಕಾಲವನ್ನು ನಿರ್ಧರಿಸಬಹುದು.

ಮಹಿಪತಿರಾಯರ ಮಗ ಕೃಷ್ಣರಾಯರು ರಚಿಸಿದ 'ಆನಂದ ಲಹರಿ' ಖಂಡ ಕಾವ್ಯದ ಕೊನೆಯ ಪದ್ಯ ಹೀಗಿದೆ.

'ಸುಭಾನು ಸಂವತ್ಸರದ ಆ ಭಾದ್ರಪದ ಮಾಸ।
ಶಭವಾರ ದಶಮಿ ಗುರುವಾರದಿನ ದೇವ।
ಪ್ರಭುವಿನ ದಯದಿಂದ ಸಂಪೂರ್ಣ ।।೧೧೫।।

ಇಲ್ಲಿ ಹೇಳಿದ ಸುಭಾನು ಸಂವತ್ಸರದ ಭಾದ್ರಪದ ಮಾಸದ ಶುದ್ಧ ದಶಮಿ

ಗುರುವಾರವು ಕ್ರಿ.ಶ. ೧೭೦೩ರ ಸಪ್ಟಂಬರ ಏಳನೆಯ ದಿನಾಂಕಕ್ಕೆ ಸರಿಯಾಗಿ ಹೊಂದುತ್ತದೆ.//೧೭// ಆದ್ದರಿಂದ ಕ್ರಿ.ಶ. ೧೭೦೩ ರಲ್ಲಿ ಕೃಷ್ಣರಾಯರು ಆನಂದ ಲಹರಿಯನ್ನು ರಚಿಸಿದರು ಎಂಬುದು ಖಚಿತವಾಗುತ್ತದೆ. ಇದಕ್ಕೆ ಪೂರಕವಾಗಿ ದೊರೆತ ಹಸ್ತ ಪ್ರತಿಗಳಲ್ಲಿಯ 'ಅ' ಪ್ರತಿಯಲ್ಲಿ ಕೃಷ್ಣರಾಯರ ಮಗ ಯತಿರಾಯರು ತಮ್ಮ ತಂದೆ ಬರೆದ ಭಾವಾರ್ಥ ರಾಮಾಯಣ ಕಾವ್ಯವನ್ನು ನಕಲು ಮಾಡಿದ್ದಾಗಿ ಹೇಳುತ್ತಾರೆ. ನಕಲು ಮಾಡಿದ ಕಾಲವನ್ನು ಊಹಿಸಲು ಅದೇ ಹಸ್ತಪ್ರತಿಯ ೮೦ನೆಯ ಪುಟದಲ್ಲಿ ಅವರ ಮನೆಯಲ್ಲಿ ಹುಟ್ಟಿದ ಒಂದು ಮಗುವಿನ ಜನನ ವಿವರ ಸಹಾಯವಾಗುತ್ತದೆ. ಅದು 'ಶಕೆ ೧೬೫೪ ಪರಿಧಾವಿ ಸಂವತ್ಸರ ಆಷಾಢ ಶುದ್ಧ ದಶಮಿ ಬುಧವಾರ ಸ್ವಾತಿ ನಕ್ಷತ್ರ ದ್ವಿತೀಯ ಚರಣ ಘಟಿಕಾ.....' ಇತ್ಯಾದಿಗಳ ಉಲ್ಲೇಖವಿದೆ. ಇದು ಕ್ರಿ.ಶ. ದಿನಾಂಕ ೨೧-೬-೧೭೩೨ ಕ್ಕೆ ಸರಿಯಾಗಿ ಹೊಂದುತ್ತದೆ. ಆದ್ದರಿಂದ ಹಸ್ತಪ್ರತಿಯು ಕ್ರಿ.ಶ. ೧೭೩೨ರ ಯತಿರಾಯರ ಹಸ್ತಪ್ರತಿ ಎಂಬುದು ಖಚಿತವಾಗುತ್ತದೆ. ಅಂದರೆ ಕ್ರಿ.ಶ. ೧೭೦೩ ರಲ್ಲಿ ಕೃಷ್ಣರಾಯರು, ಅವರ ಮಗ ಯತಿರಾಯ ಕ್ರಿ.ಶ. ೧೭೩೨ರಲ್ಲಿ ಇದ್ದರು.

ಈಗ 'ನೆನೆದು ನಮಿಸುವೇನು ವಾರಂ ವಾರ' ಎಂಬ ಕೀರ್ತನೆಯನ್ನು ನೋಡುವ. ಇದೊಂದು ಸ್ತುತಿ ಕೀರ್ತನೆ. ಇದು ಮಹಿಪತಿರಾಯರ ಮಗ ಕೃಷ್ಣರಾಯರು ರಚಿಸಿದ ಕೀರ್ತನೆ ಎಂದು ಈವರೆಗೆ ಗ್ರಹಿತವಾಗಿದೆ. ಆದರೆ ಕೀರ್ತನೆಯ ಕೊನೆಯಲ್ಲಿ ಬಳಸಿದ ಅಂಕಿತ 'ಮಹಿಪತಿಗುರು' ಎಂದಾಗಿದ್ದು ಇದು ಮಹಿಪತಿರಾಯರ ಅಂಕಿತ ಎನ್ನುವುದು ಗ್ರಾಹ್ಯವಾಗಿದೆ. ಆದರೆ ಈ ಕೀರ್ತನೆಯ ಅನೇಕ ಮುದ್ರಿತ ಹಾಗು ಹಸ್ತಪ್ರತಿಗಳ ಪಾಠದಲ್ಲಿ ಪ್ರಕ್ಷಿಪ್ತ ಸಾಲುಗಳು ಸೇರಿಕೊಂಡು ಕೃತಿಕಾರನ ಕುರಿತು ಅನುಮಾನಕ್ಕೆ ಎಡೆ ಮಾಡಿ ಕೊಟ್ಟಿದೆ. ಈ ಕುರಿತು 'ಅಂಕಿತ - ಕೃತಿ ಸಂಖ್ಯೆ' ಅಧ್ಯಾಯದಲ್ಲಿ ಸವಿವರವಾಗಿ ಚರ್ಚಿಸಲಾಗಿದೆ. ಪ್ರಸ್ತುತ ಕೀರ್ತನೆಯ ಮೂಲ ಪಾಠದ ಎರಡನೆಯ ನುಡಿಯು ಹೀಗಿದೆ.

> 'ಇತ್ತ ವಿದ್ಯಾದೀಶ ಈ ವೇದ ನಿಧಿ ಘೋಪ।
> ಸತ್ಯವ್ರತರ ನಾಮ ಸತ್ಯನಿಧಿಯ ನೇಮ।
> ಸತ್ಯ ನಾಥಾಖ್ಯಾತ ಸತ್ಯಾಭಿನವ ತೀರ್ಥ।
> ಮತ್ತಿಳೆಯೊಳಗಿರ್ಪ ಮನಕೆ ಸೂಚಿಸಿ ಬಪ್ಪ।
> ಕೃತ್ಯಮ್ ಸುಜ್ಞಾನ ಕೃಷ್ಣ ದ್ವೈಪಾಯನ।
> ಇತ್ಯಧಿಕ ಸರ್ವರ ಜನದಲಿ -----।
> ಉತ್ತುಮದಲಿರುವರಾ ---- ವಾರಂ --- ವಾರಂ' ।।೨।।

ಇಲ್ಲಿ ಹಾಗೂ ಮೊದಲನೆಯ ನುಡಿಯಲ್ಲಿ ಬರುವ ಹೆಸರುಗಳು ಮಾಧ್ವ ಪರಂಪರೆಯಲ್ಲಿ ಬಂದ ಉತ್ತರಾದಿ ಮಠದ ಪೀಠವನ್ನೇರಿದ ಎಲ್ಲ ಸ್ವಾಮಿಗಳನ್ನು

ಕ್ರಮವಾಗಿ ನಮಿಸಿದ್ದಾರೆ. ಕೊನೆಯಲ್ಲಿ ಬರುವ ಶ್ರೀ ಸತ್ಯಾಭಿನವ ತೀರ್ಥರು ಉತ್ತರಾದಿಮಠದ ಸಂಸ್ಥಾನವನ್ನು ಕ್ರಿ.ಶ. ೧೬೭೩ ರಿಂದ ೧೭೦೩ ರವರೆಗೆ ಆಳಿದರೆಂದು ಈ ಹಿಂದೆ ನೋಡಿದ್ದೇವೆ. ಅನಂತರ ಉಲ್ಲೇಖಿತ ಕೃಷ್ಣದ್ವೈಪಾಯನರು ಸಮಕಾಲೀನ ಬಿಡಿ ಸನ್ಯಾಸಿಗಳು. ಮಹಿಪತಿರಾಯರು ಶ್ರೀ ಸತ್ಯಾಭಿನವ ತೀರ್ಥರನ್ನು ಉಲ್ಲೇಖಿಸಿದ್ದರಿಂದ ಅವರು ಕ್ರಿ.ಶ. ೧೬೭೩ ಹಾಗೂ ೧೭೦೬ ರ ಮಧ್ಯೆ ಜೀವಿಸಿದ್ದರೆಂದೂ ಮತ್ತು ಕ್ರಿ.ಶ. ೧೭೦೬ ರ ಮೊದಲು ಕಾಲವಾಗಿರಬೇಕೆಂದೂ ಊಹಿಸಬಹುದು. ಯಾಕೆಂದರೆ ಕ್ರಿ.ಶ. ೧೭೦೬ ರನಂತರ ಜೀವಿಸಿದ್ದರೆ ಆವರೆಗೆ ಉಲ್ಲೇಖಿಸಿದ ಉತ್ತರಾದಿ ಮಠದ ಎಲ್ಲ ಸ್ವಾಮಿಗಳ ಜೊತೆಗೆ ಶ್ರೀ ಸತ್ಯಾಭಿನವ ತೀರ್ಥರ ಅನಂತರ ಪೀಠಕ್ಕೆ ಬಂದ ಶ್ರೀ ಸತ್ಯಪೂರ್ಣ ತೀರ್ಥರನ್ನೂ ಸ್ತುತಿಸುತ್ತಿದ್ದರು.

ಮಹಿಪತಿರಾಯರಿಗೆ ಇಬ್ಬರು ಗಂಡುಮಕ್ಕಳು ಅವಳಿ ಜವಳಿ ಎಂದು ನಂಬಲಾಗಿದೆ. ದೇವರಾಯ ಹಾಗೂ ಕೃಷ್ಣರಾಯ ಎಂದು ಅವರ ಹೆಸರುಗಳು. ದೇವರಾಯನು ಕ್ಷಾತ್ರ ತೇಜದಿಂದ ದೇಸಗತಿಯನ್ನು ಸಂಪಾದಿಸಿ ಜಾಲವಾದಿಯಲ್ಲಿ ನೆಲೆಸಿದನು. ಕೃಷ್ಣರಾಯರು ಹರಿದಾಸ ಪರಂಪರೆಯನ್ನು ಮುಂದುವರಿಸಿ ಕಾಖಂಡಕಿಯಲ್ಲಿಯೇ ನೆಲೆಸಿದರು. ಅವರಿಗೆ ಏಳು ಜನ ಗಂಡು ಮಕ್ಕಳು. ಅವರುಗಳಲ್ಲಿ ಮೊದಲನೆಯವ ರಾಮಯ್ಯ, ಎರಡನೆಯವ ಯಾದಪ್ಪ ಮೂರನೆಯವನ ಹೆಸರು ಗುರು ಅಥವಾ ಗುರುರಾಯ. ಈ ಮೂರನೆಯ ಮಗ ಹುಟ್ಟುವ ಹೊತ್ತಿಗೆ ಮಹಿಪತಿರಾಯರು ಕಾಲವಾಗಿರಬೇಕು. ಅವರ ನೆನಪಿನಲ್ಲಿಯೇ ಈ ಮಗುವಿಗೆ 'ಗುರು' ಎಂದು ನಾಮಕರಣ ಮಾಡಿದ್ದಾರೆ. ಮಹಿಪತಿ ಎಂಬ ಹೆಸರನ್ನು ಆರು ತಲೆಮಾರಿನವರೆಗೆ ಅವರ ಮನೆತನದಲ್ಲಿ ಇಟ್ಟಿಲ್ಲ. ಅದಕ್ಕೆ ಬದಲಾಗಿ ಹಿರಿಯರ ನೆನಪಿಗೆ 'ಗುರು' ಎಂದು ಕರೆದಿದ್ದಾರೆ.

ಕೃಷ್ಣರಾಯರ ನಾಲ್ಕನೆಯ ಮಗ ಯತಿರಾಯ ಐದು; ಆರನೆಯವರು ಶ್ರೀಪತಿ ಹಾಗೂ ಗಿರಿಯಪ್ಪ ಕೊನೆಯವನ ಹೆಸರು ದೇವರಾಯ. ಈ ಹೊತ್ತಿಗೆ ಕೃಷ್ಣರಾಯರ ಸಹೋದರ ದೇವರಾಯನ ಕಾಲವಾಗಿರಬೇಕು. ಅವನ ನೆನಪಿನಲ್ಲಿ ಕೊನೆಯ ಮಗ ದೇವರಾಯನಾಗಿದ್ದಾನೆ. ಅದರಂತೆ ಕೃಷ್ಣರಾಯರ ಜೇಷ್ಠ ಪುತ್ರ ರಾಮನ ಮಗ ಕೃಷ್ಣನಾಗಿದ್ದಾನೆ. ಈ ಹೊತ್ತಿಗೆ ಕೃಷ್ಣರಾಯರೂ ಕಾಲವಾಗಿರಬೇಕು. ಯತಿರಾಯರ ಒಬ್ಬನೇ ಮಗ ರಾಮನೆಂದು ಇದೆ. ಇದು ಅಣ್ಣನ ನೆನಪಿನಲ್ಲಿ ಇಟ್ಟ ಹೆಸರು. ದೊರೆತ ಹಸ್ತಪ್ರತಿಯಲ್ಲಿ ಯತಿರಾಯರ ಕೈಬರಹದ ಜನ್ಮ ವಿವರ ಈ ಮಗುವಿನದಾಗಿದ್ದರೆ ಅದು ೨೧-೬-೧೭೩೨ ಎಂದಾಗುತ್ತದೆ. ಆ ಹೊತ್ತಿಗೆ ಕೃಷ್ಣರಾಯರ ಹಿರಿಯ ಮಗ ರಾಮಚಂದ್ರ ತೀರಿಕೊಂಡಿದ್ದರು.

ಕಾಖಂಡಕಿಯ ಹರಿದಾಸರ ಮನೆತನದಲ್ಲಿ ಭಾಸ್ಕರ, ಮಹಿಪತಿ, ಕೃಷ್ಣ,

ರಾಮ ಹಾಗೂ ಯತಿ ಈ ಐವರು ಪ್ರಾತ: ಸ್ಮರಣೀಯರು. ಅವರುಗಳಲ್ಲಿಯ ಭಾಸ್ಕರ ಎಂಬ ಹೆಸರನ್ನು ಯಾರಿಗೂ ಕರೆದಿಲ್ಲ. ಉಳಿದ ನಾಲ್ವರಲ್ಲಿ, ಕೃಷ್ಣರಾಯರ ಏಳು ಮಕ್ಕಳ ಏಳು ತಲೆಮಾರುಗಳಲ್ಲಿ (ಈಗ ನಡೆದದ್ದು ೮ನೆಯದು) ಬರುವ ೧೯೯ ಗಂಡುಮಕ್ಕಳ ಹೆಸರುಗಳಲ್ಲಿ ೨೫ ಸಲ ಗುರು, ೨೧ ಸಲ ಕೃಷ್ಣ, ೧೯ ಸಲ ರಾಮ ಎಂಬ ಹೆಸರುಗಳನ್ನು ಇಟ್ಟಿದ್ದಾರೆ. ಅನಂತರ ಪ್ರಮುಖವಾಗಿ ಕೇಳಿಬರುವ ಹೆಸರು ಅವರ ಕುಲದೈವತವಾದ 'ವೆಂಕಟೇಶ' ಎಂಬ ಹೆಸರು. ಅದನ್ನು ೧೬ ಸಲ ಇಟ್ಟಿದ್ದಾರೆ. ಇನ್ನುಳಿದವುಗಳಲ್ಲಿ ೧೩ ಸಲ ಅಣ್ಣಪ್ಪಯ್ಯ ೮ ಸಲ ದೇವಪ್ಪಯ್ಯ ಉಳಿದ ಕೇವಲ ೧೭ ಹೆಸರುಗಳು ಒಂದೊಂದು ಅಥವಾ ಎರಡು ಸಲ ಬಂದಿವೆ. ಕೃಷ್ಣರಾಯರ ನಾಲ್ಕನೆಯ ಮಗ ಯತಿರಾಯರ ಮನೆತನದಲ್ಲಿ ಇಂದು ಜೀವಂತ ಇದ್ದ ಹಿರಿಯರಾದ ಗುರಪ್ಪಯ್ಯ ಹುಟ್ಟಿದ್ದು ೧೯೧೬ ರಲ್ಲಿ ಅವರು ನೇರವಾದ ಏಳನೆಯ ತಲೆಮಾರಿನವರು.

ಹೀಗೆ ಈವರೆಗೆ ಚರ್ಚಿಸಿದ ಆಧಾರಗಳಿಂದ ಮಹಿಪತಿರಾಯರ ಸಂಭಾವ್ಯ ಕಾಲವನ್ನು ಬೇರೆ ಪ್ರಮಾಣಗಳು ದೊರೆಯುವವರೆಗೆ ಈ ರೀತಿಯಾಗಿ ನಿರ್ದೇಶಿಸಬಹುದು.

| | | |
|---|---|---|
| ಮಹಿಪತಿರಾಯರ ಜನನ | ಕ್ರಿ.ಶ.ಸು | ೧೬೪೦ |
| ಖವಾಸಖಾನನ ಹತ್ತಿರ ಕರ್ಣಿಕ | '' | ೧೬೫೮-೫೯ |
| ಬಾದಶಹನ ಭೆಟ್ಟಿ ಪ್ರಿತ್ಯಾದರ | '' | ೧೬೬೦ |
| ಭಾಸ್ಕರ ಸ್ವಾಮಿಗಳ ಅನುಗ್ರಹ | '' | ೧೬೭೦ |
| ಅವಳಿ ಮಕ್ಕಳ ಜನನ | '' | ೧೬೭೨-೭೩ |
| ಶಾಹಪುರ (ಕಲಬುರ್ಗಿ) ವಾಸ | '' | ೧೬೮೬-೮೯ |
| ಕಾಖಂಡಕಿಗೆ ಆಗಮನ | '' | ೧೬೯೦ |
| ಕೃಷ್ಣರಾಯರಿಂದ ಆನಂದಲಹರಿ ರಚನೆ | '' | ೯-೯-೧೭೦೩ |
| ಮಹಿಪತಿರಾಯರ ಮರಣ | '' | ೧೭೦೫ |

ಹೀಗೆ ಮಹಿಪತಿರಾಯರ ಕಾಲವನ್ನು ಕ್ರಿ.ಶ. ಸು ೧೬೪೦ ರಿಂದ ೧೭೦೫ ರವರೆಗೆ ಎಂದು ಗುರುತಿಸಬಹುದು. ಅಂದರೆ ಅವರು ಸುಮಾರು ೬೫ ವರುಷ ಬದುಕಿರಬಹುದು. ಅದರಂತೆ ಅವರ ಇಬ್ಬರು ಮಕ್ಕಳಲ್ಲಿ ದೇವರಾಯ ಕ್ರಿ.ಶ. ಸು ೧೬೭೩ ರಿಂದ ೧೭೧೪ ವರೆಗೆ ಸುಮಾರು ೪೦ ವರುಷ ಬದುಕಿದ್ದರೆ ಕೃಷ್ಣರಾಯರು ಕ್ರಿ.ಶ. ಸು ೧೭೨೯ ರವರೆಗೆ ಸುಮಾರು ೫೪ ವರುಷ ಬದುಕಿರುವ ಸಾಧ್ಯತೆ ಇದೆ. ಅದರಂತೆ ಮತ್ತೆ ಕೃಷ್ಣರಾಯರ ಮಕ್ಕಳಲ್ಲಿ ಹಿರಿಯವ ರಾಮಚಂದ್ರ ಅಲ್ಪಾಯುವಾಗಿ ೪೦ ವರುಷ (೧೬೯೨-೧೭೩೨) ಯತಿರಾಯರು ಧೀರ್ಘಾಯುಗಳಾಗಿ ಸುಮಾರು ೬೦ ವರುಷ (೧೭೦೮-೧೭೬೮) ಬದುಕಿದ್ದರೆಂದು ಹೇಳಬಹುದು.

## ೪.೨ ಜೀವನ ಚರಿತ್ರೆ

ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಐಗಳಿ ಎಂಬ ಗ್ರಾಮದಲ್ಲಿ ೧೭ ನೆಯ ಶತಮಾನದ ಮಧ್ಯದಲ್ಲಿ ಮೌನಭಾರ್ಗವ ಗೋತ್ರದ ಕೋನೇರಿರಾಯನೆಂಬ ವೈಷ್ಣ ಬ್ರಾಹ್ಮಣನಿದ್ದನು. ಸದಾಚಾರ ಸಂಪನ್ನನಾದ ವಿಪ್ರನು ಐಗಳಿಯ ವೆಂಕಟೇಶ ದೇವರನ ಅರ್ಚಿಸುತ್ತ ಕರ್ಣಿಕ ವೃತ್ತಿಯೊಂದಿಗೆ ಸುಖವಾಗಿ ಕಾಲಕಳೆಯುತ್ತಿದ್ದನು.//೧೮// ಅವ ವಿದ್ವಾಂಸನೂ, ಷಟ್‌ಶಾಸ್ತ್ರ ಪಂಡಿತನೂ ಆಗಿದ್ದನು. ಸಾಹಿತ್ಯ ಸಂಗೀತಗಳಲ್ಲಿ ತುಂಬ ಆಸ ಇದ್ದಿತು. ಕನ್ನಡ -ಮರಾಠಿ ಭಾಷೆಗಳಲ್ಲಿ ಕೃತಿಗಳನ್ನು ರಚಿಸುತ್ತಿದ್ದನೆಂ ತಿಳಿಯುತ್ತದೆ.//೧೯// ಅವನಿಗೆ ಇಬ್ಬರು ಗಂಡು ಮಕ್ಕಳು. ಹಿರಿಯವನ ವೆಂಕಟೇಶನೆಂದೂ, ಎರಡನೆಯ ಮಗನಿಗೆ ಗುರುರಾಯನೆಂದೂ ಹೆಸರನ್ನಿಟ್ಟಿದ್ದರ ಗುರುರಾಯ ಹುಟ್ಟಿದ್ದು ಕ್ರಿ.ಶ. ಸು. ೧೬೪೦ರಲ್ಲಿ. ಮಕ್ಕಳ ಆಟ-ಪಾಟಗಳಲ್ಲಿ ವೆಂಕಟೇ ದೇವರ ಅರ್ಚನೆಯೊಂದಿಗೆ ಕೋನೇರಿರಾಯ ಸಂಭ್ರಮದಿಂದ ಕಾಲ ಕಳೆಯುತ್ತಿದ್ದರೂ, ಗಂ ಹೆಂಡತಿ ಇಬ್ಬರು ಮಕ್ಕಳ ಉದರ ನಿರ್ವಹಣೆಗೆ ತೊಂದರೆಯಾಗುತ್ತಿತ್ತು. ಮಕ್ಕ ಬೆಳೆಯುತ್ತಿದ್ದಂತೆ ಅವರುಗಳ ಉಪನಯನ, ವಿದ್ಯಾಭ್ಯಾಸದ ಚಿಂತೆಯೂ ಕಾಡುತ್ತಿತ್ತು ಅದೆಲ್ಲ ಐಗಳಿಯಲ್ಲಿ ಸಾಧ್ಯವಾಗಲಾರದೆಂದು ಅನಿಸಿತು. ಅಂತೆಯೇ ಊರು ಬಿಡುವುದೆಂ ನಿರ್ಧರಿಸಿದನು. ಹತ್ತಿರದಲ್ಲಿಯ ವಿಜಾಪುರ ನಗರವು ಆದಿಲಶಾಹಿ ಅರಸರ ರಾಜಧಾ ಸಮಕಾಲೀನ ವಿಶ್ವದ ದೊಡ್ಡ ನಗರ, ವಿಜಯಪುರವು ವಿದ್ಯಾಪುರವೆಂದೂ ಹೆಸರಾಗಿತ್ತು. ರಾ ಮುಸ್ಲಿಮರದಾಗಿದ್ದರೂ ಹಿಂದು -ಮುಸ್ಲಿಮ ಉಭಯತರಲ್ಲಿ ದ್ವೇಷದ ವಾತಾವರಣ ಕಂ ಬರುತ್ತಿರಲಿಲ್ಲ. ಅನೇಕ ಹಿಂದುಗಳು ಬಾದಶಹನ ಆಸ್ಥಾನದಲ್ಲಿ ಹೆಸರಾಂತ ಯೋಧರೂ ಸರದಾರ - ಸೇನಾಪತಿಗಳೂ ಆಗಿದ್ದರು. ಅಲ್ಲದೆ ಮುಸ್ಲಿಮರು ಕೂಡ ಬ್ರಾಹ್ಮಣರನ ಗೌರವದಿಂದ ಕಾಣುತ್ತಿದ್ದರು. ಆದ್ದರಿಂದ ಕೋನೇರಿರಾಯನು ವಿಜಾಪುರಕ್ಕೆ ಹೋ ನೆಲೆಸುವುದೆಂದು ನಿರ್ಧರಿಸಿದ. ಆಗ ವಿಜಾಪುರದಲ್ಲಿ ಮಹ್ಮದ ಆದಿಲಶಹ (೧೬೨೬-೧೬೫೬) ರಾಜ್ಯವಾಳುತ್ತಿದ್ದನು. ಕೋನೇರಿರಾಯನು ತನ್ನ ಕರ್ಣಿಕ ವೃತ್ತಿಯನ ಹಾಗೂ ವೆಂಕಟೇಶ ದೇವರ ಅರ್ಚಕ ವೃತ್ತಿಯನ್ನು ಸಂಬಂಧಿಕರೊಬ್ಬರಿಗೆ ಕೊಟ ಸಹಕುಟುಂಬ ವಿಜಾಪುರಕ್ಕೆ ಬಂದು ನೆಲೆಸಿದನು.

ಕೋನೇರಿರಾಯ ವಿಜಾಪುರಕ್ಕೆ ಬಂದ ದಿನಗಳಲ್ಲಿ ಬಾದಶಹನ ಆಸ್ಥಾನದ ಮುರಾರಿಪಂತ, ಶಹಾಜಿ ಭೋಸಲೆ ಅವರಂಥ ಹಿಂದುಗಳು ಪ್ರಭಾವಯುತರಾಗಿದ್ದರ ಆದ್ದರಿಂದ ಬ್ರಾಹ್ಮಣ ವಿದ್ವಾಂಸರಿಗೆ ಆದರವಿರುವುದು ಸಹಜವಾಗಿತ್ತು. ಸದಾಚಾ ಸದ್ಗುಣಿಯಾದ ಕೋನೇರಿರಾಯನು ವಿಜಾಪುರಕ್ಕೆ ಬಂದ ಆರು ತಿಂಗಳುಗಳಲ್ಲಿ ತನ್ನ ಸ್ನೇಹಪ ವೃತ್ತಿಯಿಂದ ಸುಮಾರು ಜನರೊಡನೆ ಗೆಳತನವನ್ನು ಬೆಳೆಸಿಕೊಂಡು ಕುಟುಂಬದ ಪಾಲ

-ಪೋಷಣೆಯ ಭಾರವನ್ನು ಹಗುರು ಮಾಡಿಕೊಂಡಿದ್ದನು.//೨೦// ಹಲವು ಸಿರಿವಂತರ ಸಹಕಾರವೂ ದೊರೆಯಿತು. ಈ ದಿನಗಳಲ್ಲಿಯೇ ಬೆಳೆದು ನಿಂತ ಮಕ್ಕಳಿಬ್ಬರ ಉಪನಯನವನ್ನು ಸ್ನೇಹಿತರ - ಉದಾರಿಗಳ ನೆರವಿನಿಂದ ಮಾಡಿದನು.//೨೧//

ಮಕ್ಕಳಿಬ್ಬರೂ ತಂದೆಯ ಕಣ್ಣರಿಕೆಯಲ್ಲಿ ಬೆಳೆದು ವಿದ್ಯಾಭ್ಯಾಸವನ್ನು ಪಡೆದರು. ಹಿರಿಯ ಮಗ ವೆಂಕಟೇಶನು ಕುಲದ ಕರ್ಣಿಕ ವೃತ್ತಿಯನ್ನು ಹಾಗೂ ವೆಂಕಟೇಶದೇವರ ಅರ್ಚಕ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗಲು ಐಗಳಿಗೆ ಬಂದು ನೆಲೆಸಿದನು.//೨೨// ಕಿರಿಯ ಮಗ ಗುರುರಾಯ ತಂದೆ ತಾಯಿಗಳೊಂದಿಗೆ ವಿಜಾಪುರದಲ್ಲಿಯೇ ಉಳಿದನು. ರಾಮಾಯಣ ಮಹಾಭಾರತ, ಭಾಗವತ ಗ್ರಂಥಗಳ ಅಭ್ಯಾಸದ ಜೊತೆಗೆ ಸಾಹಿತ್ಯದಲ್ಲಿಯೂ ಗುರುರಾಯನಿಗೆ ಆಸಕ್ತಿ ಇದ್ದಿತು. ಮಧುರ ಕಂಠ, ನಿರರ್ಗಳ ವಾಕ್ ಸರಣಿ, ಗುರುರಾಯ ಹೇಳುತ್ತಲಿದ್ದರೆ ಕೇಳುಗರು ಮಂತ್ರಮುಗ್ಧರಾಗಿ ಕುಳಿತುಕೊಳ್ಳುತ್ತಿದ್ದರು. ತಂದೆಯ ಸ್ಥಾನದಲ್ಲಿ ಆಗೀಗ ಪ್ರವಚನಗಳನ್ನು ಕೊಡುತ್ತಿದ್ದ, ಹರಿಕಥೆ ಆತನ ಮೆಚ್ಚಿಗೆಯ ವಿಷಯ, ಸುಶ್ರಾವ್ಯ ಹರಿಕಥೆಯಿಂದ ಆತ ಬಹುಬೇಗ ಜನಪ್ರಿಯನಾದನು.

ಕೋನೇರಿರಾಯರ ಪರಿಚಿತ ಹಿಂದು ಸರದಾರನೊಬ್ಬನ ಮುಖಾಂತರ ಗುರುರಾಯನು ಪ್ರಾರಂಭದಲ್ಲಿ 'ಖವಾಸಖಾನ' ಎಂಬ ಹಬಶೀ ಸರದಾರನ ಹತ್ತಿರ ಕರ್ಣಿಕ ವೃತ್ತಿಯನ್ನು ಕೈಕೊಂಡನು.//೨೩// ಅಂದಿನ ದಿನಗಳಲ್ಲಿ ಈ ಖವಾಸಖಾನನು ದಖಣೀ ಸರದಾರರ ಮುಖ್ಯಸ್ಥನಾಗಿದ್ದನಲ್ಲದೆ ರಾಜ್ಯದಲ್ಲಿ ತುಂಬ ಪ್ರಭಾವಯುತನಾದ ವ್ಯಕ್ತಿಯಾಗಿದ್ದ. ಆದಾಗ ಮಹ್ಮದ ಆದಿಲಶಹನ ಅಂತ್ಯವಾಗಿ ಅವನ ಮಗ ಎರಡನೆಯ ಅಲಿ ಆದಿಲಶಹನು ರಾಜ್ಯವಾಳುತ್ತಿದ್ದನು.

ಯಜಮಾನ ಖವಾಸಖಾನನಲ್ಲಿ ಇಂಥದೇ ಕೆಲಸವನ್ನು ಮಾಡಬೇಕೆಂಬ ಅಹಮ್ಮನ್ಯತೆ ಗುರುರಾಯನಲ್ಲಿರಲಿಲ್ಲ. ಇದರಿಂದಾಗಿ ಬಹುಬೇಗ ಆತ ಖವಾಸಖಾನನ ಪ್ರೀತಿಗೆ ಪಾತ್ರನಾದನು. ಕೆಲಸದಲ್ಲಿಯ ಅವನ ಚಾಕಚಕ್ಯತೆ, ಜಾಣತನ ಖವಾಸಖಾನನಿಗೆ ತುಂಬ ಪ್ರಿಯವಾಯಿತು. ಕೆಲವೇ ದಿನಗಳಲ್ಲಿ ಆತ ಖವಾಸಖಾನನ ಆಪ್ತ ಸಹಾಯಕರಲ್ಲಿ ಒಬ್ಬನಾದನು.

ತನ್ನ ಕೆಲಸದಲ್ಲಿಯ ತನ್ಮಯತೆಯೊಂದಿಗೆ ಗುರುರಾಯ, ಮಾತಾಪಿತೃಗಳ ಸೇವೆಯನ್ನು ಕಡೆಗಣಿಸಲಿಲ್ಲ. ವೃದ್ಧಾಪ್ಯದಿಂದ ತಂದೆ -ತಾಯಿಗಳು ಮನೆಯಲ್ಲಿಯೇ ಇದ್ದರೂ ತಾನು ಮನೆಯ ಯಜಮಾನ 'ಕರ್ತಾ' ಎಂಬ ಅಹಂಕಾರವು ಬಂದಿರಲಿಲ್ಲ. ಏಕ ನಿಷ್ಠೆಯಿಂದ ಅವರ ಸೇವೆಯನ್ನು ಮಾಡುತ್ತಿದ್ದನು. //೨೪//

ಈ ಮಧ್ಯ ವಯಸ್ಸಿಗೆ ಅನುಗುಣವಾಗಿ ತಂದೆ ತಾಯಿಗಳು ಮಕ್ಕಳಿಬ್ಬರ ವಿವಾಹವನ್ನೂ

ಮಾಡಿದ್ದರು. ಹಿರಿಯವನ ಹೆಂಡತಿ 'ತುಕ್ಕವ್ವ' ಕಿರಿಯವನ ಹೆಂಡತಿ 'ತಿಮ್ಮವ್ವ'. ತುಕ್ಕವ್ವ ಗಂಡನೊಂದಿಗೆ ಐಗಳಿಯಲ್ಲಿ ಇರುತ್ತಿದ್ದರೆ ತಿಮ್ಮವ್ವ ವಿಜಾಪುರದಲ್ಲಿ ಇರುತ್ತಿದ್ದಳು.//೨೫//

ಗುರುರಾಯರಿಗೆ ಚಿಕ್ಕಂದಿನಿಂದಲೂ ಆಧ್ಯಾತ್ಮದ ಕಡೆಗೆ ಒಲವು ಹೆಚ್ಚು. ಮಾಧ್ವ ಸಂಪ್ರದಾಯದ ಮನೆಯಾದ್ದರಿಂದ ಮನೆಯಲ್ಲಿ ನಿತ್ಯ -ನೇಮಗಳನ್ನು ತೀರಿಸಿಕೊಂಡು, ಪಾರಾಯಣ, ಜಪ, ತಪಗಳನ್ನು ತಪ್ಪದೆ ಮಾಡುತ್ತಿದ್ದರು. ಅನಂತರ ದೇವರ ಪೂಜೆ ನಿಗದಿತ ಅವಧಿಯಲ್ಲಿ ಈ ಕಾರ್ಯಗಳನ್ನು ಪೂರೈಸಿಕೊಂಡು ನೌಕರಿಗೆ ಸರಿಯಾದ ವೇಳೆಗೆ ಹೋಗುತ್ತಿದ್ದರು. ಮಧ್ಯಾಹ್ನ ಊಟಕ್ಕೆ ಬಂದಾಗ ಪ್ರತಿನಿತ್ಯ ಬ್ರಾಹ್ಮಣರಿಗೆ ಅನ್ನಸಂತರ್ಪಣೆಯಾಗಬೇಕು. ಸಾಯಂಕಾಲ ಹರಿಕೀರ್ತನೆ ಹಾಗು ಮಧ್ವ ಮುನಿಕೃತ ಸರ್ವಮೂಲ ಗ್ರಂಥಗಳ ಪಠಣ.//೨೬// ಇದು ಅವರ ದಿನಚರಿ ಹೀಗಾಗಿ ಅವರ ದಿನನಿತ್ಯದ ಬದುಕಿನಲ್ಲಿ ಪಾರಮಾರ್ಥದ ಒಲವು ಹೆಚ್ಚಾದುದು ಸಹಜವಾಗಿತ್ತು. ಅಂದಿನಿಂದಲೇ ಒಂದು ತರದ ವೈರಾಗ್ಯ ಅವರ ಬದುಕಿನಲ್ಲಿ ಕಾಲಿಟ್ಟಿತು. 'ಕರ್ಮಣ್ಯೇ -ವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬ ಗೀತೋಕ್ತಿಯಂತೆ, ಮಾಡುವ ಕೆಲಸವನ್ನು ಯಾವ ಫಲಾಪೇಕ್ಷೆಯಿಲ್ಲದೆ ಮಾಡುತ್ತಿದ್ದರು. ಅದು ಮಾತಾ ಪಿತೃಗಳ ಸೇವೆ ಇರಲಿ, ಹೊರಗೆ ಖವಾಸಖಾನನ ಹತ್ತಿರದ ಕರ್ಣಿಕ ವೃತ್ತಿಯಿರಲಿ, ಪೂರ್ಣ ಮನಸ್ಸಿನಿಂದ ಮಾಡುತ್ತಿದ್ದುದರಿಂದ ಮನೆಯ ಒಳ-ಹೊರಗೆ ಅವರ ಗೌರವ ಇಮ್ಮಡಿಯಾಯಿತು.

ಮನೆಯಲ್ಲಿ ತಿಮ್ಮವ್ವನಿಗೆ ಯಾವ ಕೊರತೆ ಇರದಿದ್ದರೂ ಮಕ್ಕಳಾಗದ ಚಿಂತೆ ಕಾಡುತ್ತಿತ್ತು. ಅತ್ತೆ ಮಾವಂದಿರು ಇರುವವರೆಗೆ, ಅವರ ಸೇವೆಯಲ್ಲಿ ಹಾಗೂ ಮನೆಗೆಲಸಗಳಲ್ಲಿ ಹೊತ್ತು ಕಳೆದು ಹೋಗುತ್ತಿತ್ತು. ಹೀಗಾಗಿ ಮಕ್ಕಳಿಲ್ಲದ ಕೊರತೆ ಅಷ್ಟಾಗಿ ಅನಿಸುತ್ತಿರಲಿಲ್ಲ. ಸ್ತ್ರೀಸಹಜವಾದ ಹಂಬಲದಿಂದ, ಅತ್ತೆ ಮಾವಂದಿರು ಮೊಮ್ಮಕ್ಕಳ ನೆನಪು ಮಾಡಿದಾಗ ಆಗೀಗ ಆಡುವ ಕಂದನ ಚಿತ್ರವು ಕಣ್ಣು ಮುಂದೆ ಹಾದು ಹೋಗುತ್ತಿತ್ತು. ಆದರೆ ಅತ್ತೆ-ಮಾವಂದಿರು ಇಹಲೋಕವನ್ನು ತ್ಯಜಿಸಿದ ಮೇಲೆ, ತನ್ನ ವಯಸ್ಸು ಕಳೆದಂತೆಲ್ಲ ಮಕ್ಕಳ ಚಿಂತೆ ಅಧಿಕವಾಯಿತು. ಮಗುವಿನ ಚಿತ್ರ ಕಣ್ಣು ಮುಂದೆ ಸ್ಥಿರವಾಗಿ ಉಳಿಯಿತು. ಗಂಡನಿಗೋ ಬಿಡುವಿಲ್ಲದ ಕೆಲಸ. ಬೆಳಗಿನಿಂದ ಸಾಯಂಕಾಲದ ವರೆಗೆ ಧ್ಯಾನ-ಜಪ-ತಪ ಅಭ್ಯಾಸ- ರಾಜಕಾರಣ ಅನ್ನಸಂತರ್ಪಣೆ- ಕೀರ್ತನೆ -ಪ್ರವಚನ ಒಂದೆ ಎರಡೇ, ಏಕಾಂತದಲ್ಲಿ ಗಂಡ ದೊರೆವುದೇ ಅಪರೂಪ, ಅಳುವ ಕಂದನ ಕೇಕೆಗಾಗಿ ಮನದಲ್ಲಿಯೇ ಹಂಬಲಿಸತೊಡಗಿದಳು. ಗಂಡನ ಪೂಜೆ -ಪುನಸ್ಕಾರಗಳಲ್ಲಿ ಹರಕೆ ಹೊತ್ತದ್ದಾಯಿತು, ಅವನ ಹಿಂದೆ ಕಂಡ ದೇವರ ಕೈ ಮುಗಿದದ್ದಾಯಿತು. ಹಿಂದು ದೇವರ ಮುಂದೆ ದಿಂಡು ಉರುಳಿದ್ದೂ ಆಯಿತು. ಅವಳ ಈ ಉಪಾಸನೆಯಿಂದ ಸಂತಾನ ಸೌಭಾಗ್ಯ ಮಾತ್ರ

ಸಿಗಲಿಲ್ಲ. ಆದರೆ ಅವಳ ಉಪಾಸನೆಯ ಫಲವಾಗಿ ಎಂಬಂತೆ ಗಂಡನ ಅಂತಸ್ತು -ಮರ್ಯಾದೆ ದಿನದಿಂದ ದಿನಕ್ಕೆ ಪ್ರವರ್ಧಮಾನವಾಗತೊಡಗಿತು.

ದಿನದಂತೆ ಒಂದು ದಿನ ಗುರುರಾಯ ಕೆಲಸಕ್ಕೆ ಬಂದಾಗ, ಯಜಮಾನ ಖವಾಸಖಾನನ ಮುಖವು ಮ್ಲಾನವಾಗಿತ್ತು. ಆ ಹೊತ್ತಿಗೆ ಕಾರಣ ಕೇಳುವ ಸಲುಗೆಯೂ ಬೆಳೆದಿತ್ತು. ಬಾದಶಹನಿಗೂ - ಖವಾಸಖಾನನಿಗೂ ಲೆಕ್ಕ -ಪತ್ರದ ವಿಷಯದಲ್ಲಿ ತಕರಾರು ಬಂದಿತ್ತು. ಬಾದಶಹನಿಗೆ ತೃಪ್ತಿಯಾಗುವಂತೆ ವಿಷಯವನ್ನು ತಿಳಿಸಿ ಹೇಳುವುದರಲ್ಲಿ ಸಫಲನಾಗಿರಲಿಲ್ಲ. ಜೊತೆಗೆ ಬಾದಶಹನ ಮನದಲ್ಲಿ ತನ್ನ ಕುರಿತು ಭ್ರಷ್ಟತೆಯ ಬೀಜವನ್ನು ಬಿತ್ತಿದಂತಾಗಿತ್ತು. ಮನಸ್ಸು ಕೆಟ್ಟಿತ್ತು. ಆಗ ಗುರುರಾಯ ಬಂದದ್ದನ್ನು ನೋಡಿ ಖವಾಸಖಾನನಿಗೆ ಖುಶಿಯಾಯಿತು. ಬಂದ ವಿಪತ್ತನ್ನು ಈತ ದೂರಮಾಡಬಲ್ಲನೆಂಬ ಭರವಸೆ ಅವನಲ್ಲಿತ್ತು. ಅಂತೆಯೇ ಬಾದಹರ ಹತ್ತಿರ ಹೋಗಿ ತನ್ನಿಂದ ಸಾಧ್ಯವಾಗದ -ಅನ್ಯಥಾ ಸಂಶಯಕ್ಕೆ ಎಡೆ ಮಾಡಿದ ವಿಷಯವನ್ನು ಬಾದಶಹನಿಗೆ ಮನವರಿಕೆಯಾಗುವಂತೆ ತಿಳಿಸಿ ಹೇಳಿ ಬರಲು ಗುರುರಾಯರನ್ನು ಬಿನ್ನವಿಸಿಕೊಂಡನು.//೨೭//

ಯಜಮಾನನ ಆಜ್ಞೆಯನ್ನು ಶಿರಸಾವಹಿಸಿ, 'ಆಗಲಿ' ಎಂದು, ವಿಷಯದ ವಿವರಗಳನ್ನು ಸಂಗ್ರಹಿಸಿಕೊಂಡು ಬಾದಶಹನನ್ನು ಕಾಣಲು ಗುರುರಾಯ ಬಂದರು. ಬಾದಶಹನನ್ನು ಮುಖಾ-ಮುಖಿಯಾಗಿ ಕಾಣುವುದು ಇದೇ ಮೊದಲಸಲವಾಗಿತ್ತು. ಎದೆಯಲ್ಲಿ ಡುಗು-ಡುಗಿ ಬಾದಶಹನನ್ನು ಕಾಣುವುದು ಹೇಗೆ? ಅವನೊಂದಿಗೆ ಮಾತನಾಡುವ ರೀತಿ -ನೀತಿಗಳ ಕುರಿತು ಮನಸ್ಸು ಕಿಂಚಿತ್ ಅಸ್ಥಿರವಾಯಿತು. ಸಮವಯಸ್ಕನಾದ ಬಾದಶಹನ ಕುರಿತು ಯಜಮಾನನ ಬಾಯಿಯಿಂದ ಅನೇಕ ಸಲ ಕೇಳಿದ್ದರು. ಆತನ ವಿಲಾಸೀ ಜೀವನ, ಕಾವ್ಯದಲ್ಲಿಯ ಆಸಕ್ತಿ, ಮದ್ಯ -ಮದಿರಾಕ್ಷಿಯರ ಸಹವಾಸಗಳು ಸ್ವತ: ಕವಿತೆಗಳನ್ನು ಬರೆಯುವ ವಿಷಯ, ಇತರ ಕವಿ-ಸಾಹಿತಿಗಳ ಕುರಿತು ಅವನಿಗಿರುವ ಸಹೃದಯತೆ, ಉದಾರ ಆಶ್ರಯ ಇವುಗಳನ್ನೆಲ್ಲ ಖವಾಸಖಾನನಿಂದ ಕೇಳಿ ಬಲ್ಲವರಾಗಿದ್ದರು. ಆದರೂ ಈಗ ಬಾದಶಹನ ಎದುರಿಗೆ ನಿಲ್ಲುವ ಸಂದರ್ಭ ಬಂದಾಗ ಕ್ಷಣಕಾಲ ಅಧೀರರಾದರು. ಮತ್ತೆ ಖವಾಸಖಾನನೇ ಧೈರ್ಯ ಕೊಟ್ಟು, ಮುಂದಾಗಿ ಒಬ್ಬ ದೂತನ ಮುಖಾಂತರ ಗುರುರಾಯ ಬರುವ ಹಾಗೂ ವಿವರ ತಿಳಿಸುವ ವಿಷಯವನ್ನು ಬಾದಶಹನ ಕಿವಿಗೆ ಮುಟ್ಟಿಸಿದನು. ಆಗ ಗುರುರಾಯ ನೇರವಾಗಿ ಅರಮನೆಗೆ ಹೋಗಿ ಬಾದಶಹನನ್ನು ಕಂಡು, ಅವನಿಗೆ ಸಲ್ಲಿಸುವ ಮುಜುರೆಯನ್ನು ಸಲ್ಲಿಸಿ ನಿಂತುಕೊಂಡರು.//೨೮//
ಯಜಮಾನನ ಆಣತಿಯಂತೆ, ಅವನ ಹಾಗು ಬಾದಶಹನ ನಡುವೆ ಉದ್ಭವಿಸಿದ ಸಂಶಯವನ್ನು ಅತಿ ಸುಲಭದಲ್ಲಿ ತಿಳಿಯುವಂತೆ ತಿಳಿಸಿ ಎಲ್ಲಿಯೂ ಭ್ರಷ್ಟತನವಾಗಿಲ್ಲ ಎಂಬುದನ್ನು ಬಾದಶಹನಿಗೆ ಮನವರಿಕೆ ಮಾಡಿದರು. ಗುರುರಾಯರ ವಿವರಣೆಯಿಂದ

ಬಾದಶಹನಿಗೆ ತೃಪ್ತಿಯಾಯಿತು. ಜೊತೆಗೆ ಈ ಪ್ರಥಮ ಸಂದರ್ಶನದಲ್ಲಿಯೇ ಬಾದಶಹನು ಗುರುರಾಯರಿಂದ ಆಕರ್ಷಿತನಾದನು. ಅವರ ಮಾತಿನ ಮೋಡಿ, ಅವರ ಚಾಣಾಕ್ಷತೆ, ಬಾದಶಹನನ್ನು ಮುಗ್ಧಗೊಳಿಸಿತು. ಅದನ್ನು ತನ್ನ ಆಪ್ತ ಕಾರ್ಯದರ್ಶಿಯ ಹತ್ತಿರ ಬಾದಶಹನು ಹೇಳಿಯೂ ತೋರಿಸಿದ. ಇತ್ತ ಗುರುರಾಯರು ಮರಳಿ ಬಂದು ಯಜಮಾನನಿಗೆ ನಡೆದ ಸಂಗತಿಯನ್ನು ತಿಳಿಸಿದಾಗ ಆತ ಸಂತುಷ್ಟನಾಗಿ ಗುರುರಾಯರ ವೇತನವನ್ನು ದ್ವಿಗುಣಗೊಳಿಸಿದನು.//೨೯//

ಮರುದಿನ ಖವಾಸಖಾನನು ಅರಮನೆಗೆ ಬಂದಾಗ ಬಾದಶಹನು ಗುರುರಾಯರನ್ನು ಅರಮನೆಗೆ ಕರೆಸಲು ಹೇಳಿದನು. ಅಲ್ಲದೆ ಆತ ಚತುರರಾಗಿದ್ದರಿಂದ ಅವರ ಸೇವೆ ಅರಮನೆಯಲ್ಲಿ ಹೆಚ್ಚು ಉಪಯುಕ್ತ ಎಂದೂ ಹೇಳಿದನು. ಬಾದಶಹನ ಮಾತನ್ನು ಕೇಳಿ ಖವಾಸಖಾನನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ತಾನೇ ಸ್ವತ: ಹೋಗಿ ಯಥೋಚಿತವಾದ ಆದರದೊಂದಿಗೆ, ಗುರುರಾಯರನ್ನು ಅರಮನೆಗೆ ಕರೆದುಕೊಂಡು ಬಂದನು. ಅಂದಿನಿಂದ ಗುರುರಾಯರ ಸೇವೆ ರಾಜದರಬಾರದಲ್ಲಿ ಆರಂಭವಾಯಿತು. ಬಾದಶಹನು ಅವರನ್ನು 'ಅಖತ್ಯಾರ್' ಎಂದು ನಿಯಮಿಸಿದನು.//೩೦// ರಾಜಹಸ್ತದಿಂದ ವಸ್ತ್ರಾಲಂಕಾರ ಸನ್ಮಾನವಾಗಿ ಅಂದಿನಿಂದ ಕರ್ಣಿಕ ಗುರುರಾಯನು, ಅಖ್ತ್ಯಾರ್ ಗುರುರಾವ್ ಆದರು. ತಮ್ಮ ಕೆಲಸವನ್ನು ಪ್ರಾರಂಭಿಸಿದರು. ಅವರ ಸತ್ಯ-ಧರ್ಮದ ನಡತೆಯಿಂದ ತುಸು ದಿನಗಳಲ್ಲಿಯೇ ಬಾದಶಹನ ಅತಿ ಪ್ರೀತಿಗೆ ಪಾತ್ರರಾದರು.

ಇದರಿಂದಾಗಿ ಗುರುರಾಯರ ದೈನಂದಿನ ಕಾರ್ಯದಲ್ಲೇನೂ ವ್ಯತ್ಯಯವಾಗಲಿಲ್ಲ. ಮರಾಠಿ ಚರಿತ್ರಕಾರ ಕವಿ ರುಕ್ಮಜದಾಸನು ಇದನ್ನು ಒಂದು ಸುಂದರ ದೃಷ್ಟಾಂತದೊಂದಿಗೆ ಹೇಳುತ್ತಾನೆ. 'ಮೊದಲೆ ಕರ್ಣನಂತಿದ್ದ ದಾತಾರನಿಗೆ ದುರ್ಯೋಧನನು ಪಟ್ಟಾಭಿಷೇಕ ಮಾಡಿದಂತಾಯಿತು. ದಾತೃತ್ವ ವೃದ್ಧಿಯಾಗಿ ಯಾಚಕ ಜನ ತೃಪ್ತಿಪಟ್ಟರಂತೆ.//೩೧//

ರಾಯರು ಸರ್ವರನ್ನು ಸಮಭಾವದಿಂದ ಕಾಣುತ್ತ ಅರಮನೆಯಲ್ಲಿ ಮೂವತ್ತು ವರುಷ ಸೇವೆಯನ್ನು ಮಾಡಿದರೆಂದು ಮರಾಠಿ ಚರಿತ್ರಕಾರ ಹೇಳುತ್ತಾನೆ. //೩೨// ಆದರೆ ಇದು ಅತಿರಂಜಿತವೆನ್ನಬಹುದು. ಯಾಕೆಂದರೆ ಎರಡನೆಯ ಅಲಿ ಆದಿಲಶಹನ ಆಳ್ವಿಕೆಯ ಕಾಲ ಕ್ರಿ.ಶ. ೧೬೫೬ರಿಂದ ೧೬೭೨ರ ವರೆಗೆ. ಪಟ್ಟಕ್ಕೆ ಬಂದಾಗ ಆತನಿಗೆ ೧೮ ವರುಷ. ಭೋಗ ವಿಲಾಸ ಜೀವನದಿಂದ ಪಾರ್ಶ್ವವಾಯು ಪೀಡಿತನಾಗಿ ಆತ ಸತ್ತದ್ದು ದಿನಾಂಕ ೨೪-೧೧-೧೬೭೨ ರಂದು.//೩೩// ಅಂದರೆ ಆತ ರಾಜ್ಯವಾಳಿದ್ದು ಕೇವಲ ೧೬ ವರುಷ. ರಾಯರು ಖವಾಸಖಾನನಲ್ಲಿ ಕರಣಿಕ ವೃತ್ತಿಗೆ ಸೇರಿದ್ದು ಸುಮಾರು ೧೮ರ ವಯಸ್ಸಿನಲ್ಲಿ ಎಂದು ಹಿಡಿದರೆ ಕ್ರಿ.ಶ. ಸು. ೧೬೫೮

ಎಂದು ಆಗುತ್ತದೆ. ಆದಾಗ ಆಲಿ ಪಟ್ಟವೇರಿ ಎರಡು ವರುಷವಾಗಿತ್ತು. ಮುಂದಿನ ಒಂದೆರಡು ವರುಷಗಳಲ್ಲಿ ರಾಯರಿಗೂ ಬಾದಶಹನಿಗೂ ಸಂಬಂಧ ಬಂದಿರಲು ಸಾಕು. ಸುಮಾರು ಸಮ ವಯಸ್ಕರಾದ ಉಭಯತರಲ್ಲಿಯ ಸಾಹಿತ್ಯಾಸಕ್ತಿ ಹೆಚ್ಚೆಂದರೆ ಹತ್ತೆಂಟು ವರುಷ ಸಖ್ಯದಲ್ಲಿ ಕಳೆದಿರಲು ಸಾಧ್ಯವಿದೆ. ಉಭಯತರಲ್ಲಿಯ ಸಾಹಿತ್ಯಾಸಕ್ತಿ ಹಾಗೂ ಕಾವ್ಯರಚನೆ ಇವುಗಳನ್ನು ಬಿಟ್ಟರೆ ಉಳಿದ ಆಸಕ್ತಿಗಳಲ್ಲಿ ಒಬ್ಬರದು ಉತ್ತರ ಧ್ರುವವಾದರೆ ಇನ್ನೊಬ್ಬರದು ದಕ್ಷಿಣ ಧ್ರುವ!. ರಾಯರದು ನಿಯಮ ನಿಷ್ಠೆಗಳ ಆಧ್ಯಾತ್ಮದ ಪಾರಮಾರ್ಥದ ಪಥ. ಬಾದಶಹನದು ಮದ್ಯ ಮದಿರಾಕ್ಷಿಯರ ಸುಖಲೋಲುಪದ ಜೀವನ ಪಥ. ಅಂತೆಯೇ ಅವರ ಸಖ್ಯ ಬಹಳದಿನ ಉಳಿದಿರಲಾರದು. ಅದಕ್ಕೊಂದು ನಿಮಿತ್ತ ಬೇಕಾಗಿತ್ತು.

ದಿನದಂತೆ ಅಂದು ರಾಯರು ಮನೆಯಿಂದ ರಾಜ ದರಬಾರಕ್ಕೆ ಬರುತ್ತಿದ್ದರು. ದಾರಿಯಲ್ಲಿ ಒಬ್ಬ ಬೆತ್ತಲೆ ಫಕೀರ ಅವರನ್ನು ಕಂಡು ಹತ್ತಿರ ಕರೆದನು. ಆವನ ಹೆಸರು 'ನಂಗಾಶಾಹ' ಎಂದು. ಆತ ಸೂಫಿ ಪಂಥದ ಫಕೀರನಾಗಿದ್ದನು. ಬಹುತೇಕ ಸಮಯ ಸಮಾಧಿ ಸ್ಥಿತಿಯಲ್ಲಿರುತ್ತಿದ್ದನು. ಬೆತ್ತಲೆಯಾಗಿ ತಿರುಗುತ್ತಿದ್ದನು. ಅವನು ರಾಯರನ್ನು ಹತ್ತಿರ ಕರೆದು ಒಂದು ಗಳಿಗೆ ಕುಳಿತುಕೊಳ್ಳಲು ಹೇಳಿದ. ರಾಯರಿಗೆ ಉಭಯ ಸಂಕಟ ಆತನನ್ನು ತಿರಸ್ಕರಿಸಿ ಮುಂದೆಯೂ ಹೋಗರು. ನಿಂತರೆ ಏನು ರಾದ್ಧಾಂತವೊ. ಯಾಕೆಂದರೆ ಆತನಿಗೆ ವಾಕ್ ಸಿದ್ಧಿ ಇದ್ದಿತೆಂದು ಕೇಳಿದ್ದರು. ಏನಾದರು ಅಂದು ಬಿಟ್ಟರೆ? ಇಂಥವರ ಜೊತೆ ಇರುವುದೂ ಕಷ್ಟ ಬಿಡುವುದೂ ಕಷ್ಟ ಎಂದು ಮನದಲ್ಲಿ ಕ್ಷಣ ಮಾತ್ರ ವಿಚಾರಿಸುತ್ತಿದ್ದಂತೆ ಮತ್ತೆ ಆ ಫಕೀರ 'ಬಾರಲ್ಲಾ, ಅಪ್ಪ್ಯಾಕೆ ಚಿಂತೆ' ಎಂದ. ಹತ್ತಿರ ಹೋಗಿ ಕುಳಿತರು. ನಂಗಾಶಾಹ ರಾಯರನ್ನು ಒಂದು ಕ್ಷಣ ರತ್ನ ಪರೀಕ್ಷಕರಂತೆ ದಿಟ್ಟಿಸಿ ನೋಡಿದ. ಮರುಕ್ಷಣ ರಾಯರ ಕೈಯನ್ನು ಓಡಿದು ಅತ್ತಿತ್ತ ತಿರುಗಿಸಿ ನೋಡಿದ. ಬೆರಳಿನಲ್ಲಿದ್ದ 'ಪವಿತ್ರ'ದ ಉಂಗುರವನ್ನು ದಿಟ್ಟಿಸಿ ತನ್ನ ಕೈಯಿಂದ ಅದನ್ನು ಕಿತ್ತು ತೆಗೆದುಕೊಂಡ. ರಾಯರು ಮೌನ ವಿಸ್ಮಿತರಾಗಿ ಫಕೀರನನ್ನು ನೋಡುತ್ತ ಕುಳತರು. ಕೈಯಲ್ಲಿ ತೆಗೆದುಕೊಂಡ ಪವಿತ್ರದ ಉಂಗುರವನ್ನು ಮೇಲೆ ಕೆಳಗೆ ಒಂದೆರಡು ಬಾರಿ ತಿರುಗಿಸಿ ನೋಡುತ್ತ ತುಸುಹೊತ್ತು ಫಕೀರ ಸುಮ್ಮನೆ ಕುಳಿತನು. ಮತ್ತೆ ಒಮ್ಮೆಲೆ 'ಇದು ವಿಷಯ ಸೂತ್ರ' ಎನ್ನುತ್ತ ಎದ್ದು ನಿಂತು ಎದುರಿನ ಕಂದಕದಲ್ಲಿ ಆ ಉಂಗುರವನ್ನು ಒಗೆದುಬಿಟ್ಟ. ರಾಯರಿಗೆ ಏನು ಹೇಳಲೂ ತಿಳಿಯದು. ಆಶ್ಚರ್ಯದಿಂದ ಫಕೀರನ ಮುಖವನ್ನು ಟಕ-ಮಕ ನೋಡುತ್ತ ನಿಂತರು. ಫಕೀರ ಮತ್ತೆ ಏನೂ ಮಾತನಾಡಲಿಲ್ಲ. ರಾಯರು ತಮ್ಮ ಕಾರ್ಯದ ಅವಸರವನ್ನು ಗಮನಿಸಿ ಹಾಗೆಯೇ ದರಬಾರಿಗೆ ಹೋಗಿಬಿಟ್ಟರು. ಮನಸ್ಸು ಸರಿಯಾಗಿರಲಿಲ್ಲ. ಕೆಲಸದ ಮೇಲಿನ ಏಕಾಗ್ರತೆ ಹಾರಿಹೋಗಿತ್ತು ಫಕೀರ ನುಡಿದ 'ಇದು ವಿಷಯ ಸೂತ್ರ' ಎಂಬ ಮಾತು ಕಿವಿಯಲ್ಲಿ ಸುತ್ತಾಡುತ್ತಿತ್ತು. ದಿನದ ಕೆಲಸವನ್ನು ಅರೆ-ಬರೆಯಾಗಿ ಬೇಗ ಮುಗಿಸಿ ತಿರುಗಿ ನಂಗಾ ಶಹನ ಹತ್ತಿರ ಬಂದರು. ರಾಯರು ಬಂದದ್ದನ್ನು ನೋಡಿ

ನಂಗಾಶಾಹ ನಗಹತ್ತಿದ. ಬಿದ್ದು-ಬಿದ್ದು ನಗಹತ್ತಿದ. ರಾಯರು ಹುಚ್ಚನಂತೆ ಅವನನ್ನು ನೋಡುತ್ತ ನಿಂತರು. ನಗು -ನಗುತ್ತಲಿದ್ದ ನಂಗಾಶಾಹ ಗಂಭೀರನಾದ. 'ಇನ್ನೂ ನಿನಗೆ ಆ ಉಂಗುರದ ವ್ಯಾಮೋಹವೇ?' 'ಸರಿ -ತಂದು ಕೊಡುತ್ತೇನೆ ನಿಲ್ಲು' ಎಂದು ಹೇಳಿ ಎದುರಿನ ಕಂದಕದಲ್ಲಿ ಟಣ್ಣನೆ ಜಿಗಿದು ಬಿಟ್ಟ. ಒಂದು ಮುಳುಗು ಹಾಕಿ ಮುಷ್ಠಿ ಬಿಗಿ ಹಿಡಿದುಕೊಂಡು ಮೇಲಿ ಎದ್ದು ಬಂದ. 'ತೆಗೆದುಕೋ ನಿನ್ನ ಉಂಗುರವನ್ನು!' ಎನ್ನುತ್ತ ರಾಯರ ಮುಂದೆ ಮುಷ್ಠಿ ಬಿಚ್ಚಿದಾಗ ಒಂದೇ ತರದ ಮೂರು ಉಂಗುರಗಳು! ರಾಯರಿಗೆ ಆಶ್ಚರ್ಯವಾಯಿತು. ಒಮ್ಮೆ ಫಕೀರನ ಮುಖವನ್ನು ಇನ್ನೊಮ್ಮೆ ಅವನ ಕೈಯಲ್ಲಿದ್ದ ಉಂಗುರಗಳ ಕಡೆಗೆ ನೋಡಹತ್ತಿದರು. 'ತಕ್ಕೊಳ್ಳಯ್ಯ ಹಾಗೇನು ಮುಖ ನೋಡ್ತಿ' ಎಂದು ಫಕೀರ ಗದರಿಸಿದಾಗ ಒಂದು ಕ್ಷಣ ರಾಯರ ಮೈ ರೋಮಾಂಚನಗೊಂಡಿತು. ತಮ್ಮ ಉಂಗುರವನ್ನು ಗುರುತಿಸುವುದು ಸಾಧ್ಯವಾಗಲೊಲ್ಲದು. ದೇಹಸ್ಮೃತಿ ತಪ್ಪುತ್ತಿದೆ ಎಂದು ರಾಯರಿಗೆ ಭಾಸವಾಗಹತ್ತಿತು. ಸಾವರಿಸಿಕೊಂಡ ಮರುಕ್ಷಣದ ರಾಯರೇ ಬೇರೆಯಾದರು. ಸತ್-ಚಿತ್-ಆನಂದ ಎಂಬ ಮೂರು ಶಬ್ದಗಳು ಬೇರೆಯಾಗಿದ್ದರೂ, 'ಸಚ್ಚಿದಾನಂದ' ಎಂಬ ಪದ ಒಂದೇ ಎಂಬ ಅಖಂಡತ್ವದ ಅರಿವಾಯಿತು. ರಾಯರ ಅಜ್ಞಾನದ ಸೂತ್ರ ಹರಿದು ಹೋಯಿತು. ಹೃದಯದಲ್ಲಿ ಜ್ಞಾನದ ಮೊಳಕೆ ಒಡೆಯಿತು. ದಿಗ್ಗನೆ ಬಂದು ನಂಗಾಶಾಹನ ಕಾಲುಗಳನ್ನು ಹಿಡಿದುಕೊಳ್ಳಲು ಮುಂದೆ ಬಂದರು. ಆದರೆ ಫಕೀರ ಅದಕ್ಕೆ ಆಸ್ಪದ ಕೊಡಲಿಲ್ಲ. ಹಿಂದೆ ಸರಿದು ಹೇಳಿದ.

'ಛೀ ನನ್ನ ಕಾಲು ಹಿಡಿಯಬೇಡ, ನಾನು ಯವನ, ನೀನು ಶುದ್ಧ ಬ್ರಾಹ್ಮಣ, ನಿನ್ನಿಂದ ನಮಸ್ಕಾರ ಮಾಡಿಸಿಕೊಳ್ಳುವದು ನನಗೆಯೇ ಯೋಗ್ಯವಲ್ಲ. ಆದರೆ ನಿನ್ನ ಮನದ ಬಾಗಿಲು ತೆರೆದಿದೆ. ನಿನಗೊಬ್ಬ ಗುರುವಿನ ಅವಶ್ಯಕತೆ ಇದೆ. ಅವನಿರುವ ತಾಣವನ್ನು ತೋರಿಸುವೆ. ಸಾರವಾಡಕ್ಕೆ ಹೋಗು ಅಲ್ಲಿ ಭಾಸ್ಕರ ಸ್ವಾಮಿಗಳಿದ್ದಾರೆ. ಅವರು ನಿನಗೆ ಯೋಗ್ಯ ಗುರು'//೩೪// ಎಂದು ಫಕೀರ ಹೇಳಿದ. ಅವನ ಮಾತು ಕೇಳಿ ರಾಯರು ಜರ್ರನೆ ಇಳಿದರು. ಮ್ಲಾನವದನರಾಗಿ ಮೌನದಿಂದ ಮನೆಯ ದಾರಿ ಹಿಡಿದರು. 'ಮಳೆ ಇಲ್ಲದೆ ಒಣಗಿದ ಬೆಳೆಯಂತೆ, ಔಷಧವಿಲ್ಲದ ರೋಗಿಯಂತೆ' ವಿಷಣ್ಣವದನರಾಗಿ ಗುರುರಾಯರು ಮನೆಗೆ ಬಂದರು. ದಿನದಕ್ಕಿಂತ ಬೇಗ ಮನೆಗೆ ಬಂದ ಚಿಂತಾಗ್ರಸ್ತರಾದ ರಾಯರನ್ನು ಮನೆಯಲ್ಲಿ ಅತ್ತಿಗೆ 'ತುಕ್ಕವ್ವ' ಬರಮಾಡಿಕೊಂಡಳು.//೩೫// ಹೆಂಡತಿಯ ಸಪ್ಪಿಲ್ಲ. ವಿಚಾರಿಸಿದಾಗ 'ಮಂದಿರ'ಕ್ಕೆ ಹೋಗಿರುವದಾಗಿ ಹಾರಿಕೆಯ ಉತ್ತರ ಬಂದಿತು. ರಾಯರಿಗೆ ತಮ್ಮ ಅಂದಿನ ಘಟನೆಯನ್ನು ಹೇಳುವ ತವಕ. ಆದರೆ ಕೇಳುವವರು ಮನೆಯಲ್ಲಿಯೇ ಇಲ್ಲವಲ್ಲ. ಸಾಯಂಕಾಲದ ವರೆಗೆ ಕಾಯಬೇಕಾಯಿತು. ಸಾಯಂಕಾಲ ತಿಮ್ಮವ್ವ ಮನೆಗೆ ಬಂದಾಗ 'ಗಂಡ' ಮನೆಯಲ್ಲಿದ್ದುದ್ದನ್ನು ಕಂಡು ಹೆದರಿದಳು. ತನ್ನ ಹುಳುಕು ಹೊರಬಿತ್ತೆಂಬ ಅಂಜಿಕೆ ಅವಳದು. ರಾಯರಿಗೆ ಅದೆಲ್ಲದರ ಪರಿವೆ ಇಲ್ಲದೆ 'ಅದೇನು ಅದೆಂಥ

ಮಂದಿರ ಇಷ್ಟು ಹೊತ್ತು?' ಎಂದು ಕೇಳುತ್ತ ಅಂದು ನಡೆದ ಘಟನೆಯನ್ನು ಹೇಳಹತ್ತಿದರು. ಅವಾಕ್ಕಾಗಿ ಕೇಳುತ್ತ ನಿಂತ ತಿಮ್ಮವ್ವ, ಕೊನೆಗೆ 'ಸಾರವಾಡದ ಭಾಸ್ಕರ ಸ್ವಾಮಿಗಳ ಹತ್ತಿರ ಹೋಗಲು ಹೇಳಿದ' ಎಂದು ಗಂಡ ಹೇಳಿದಾಗ ರೋಮಾಂಚನಗೊಳ್ಳುವ ಸರದಿ ಅವಳದಾಯಿತು. ಆಶ್ಚರ್ಯ, ಸಂತೋಷ, ಉದ್ವೇಗ ಎಲ್ಲವೂ ಒಮ್ಮೆಲೆ ಆದಂತಾಗಿ ಏನು ಹೇಳಬೇಕೆಂದು ತಿಳಿಯದೆ ಸುಮ್ಮನೆ ನಿಂತಾಗ, ಗಂಡ ಹೆಂಡತಿಯರ ಮಾತುಗಳನ್ನು ಕೇಳುತ್ತಿದ್ದ ಅತ್ತಿಗೆ ತುಕ್ಕವ್ವ ಬಂದು ಹೇಳಿದಳು.

'ನಾನು ಆಗಲೇ ಹೇಳಿದ್ದೆನಲ್ಲ ಮಂದಿರಕ್ಕೆ ಹೋಗಿರುವಳೆಂದು ಅದು ಸುಳ್ಳು ಸಾರವಾಡಕ್ಕೆ ಹೋಗಿದ್ದಳು. ಈಗ ಆರು ತಿಂಗಳುಗಳಿಂದ ಭಾಸ್ಕರ ಸ್ವಾಮಿಗಳಿಗೆ ನಡೆದು ಕೊಳ್ಳುತ್ತಿದ್ದಾಳೆ.- ಮಕ್ಕಳಿಗಾಗಿ' ಎಂದಾಗ ರಾಯರಿಗೆ ಇನ್ನಷ್ಟು ಆಶ್ಚರ್ಯ 'ಹೌದಾ' ಎಂದು ಹೆಂಡತಿಯ ರಟ್ಟೆಯನ್ನು ಹಿಡಿದು ಕೇಳಿದಾಗ ತಿಮ್ಮವ್ವ ಅವನತ ಮುಖಿಯಾಗಿ ಹೇಳಹತ್ತಿದಳು.

'ಹೌದು ಆರು ತಿಂಗಳಾಯಿತು ಹೋಗಹತ್ತಿ. ಆದರೆ ದರುಶನ ಆದದ್ದು ಇವತ್ತೇ - ಅವರೂ ಅಪ್ಪಣೆ ಕೊಡಿಸಿದ್ದರು, ನಿಮ್ಮನ್ನು ಕರೆದುಕೊಂಡು ಬರಲು ಹೇಳಿದ್ದರು. ನೀವು ಅಲ್ಲಿಗೆ ಬರುವ ಕುರಿತು ಚಿಂತೆಯಾದಾಗ ಅವರೇ ಹೇಳಿದ್ದರು. ಚಿಂತಿಸಬೇಡ ಬರುತ್ತಾರೆ ಹೋಗು' ಎಂದು ಆನಂದಾಶ್ರುಗಳಿಂದ ತಿಮ್ಮವ್ವ ಅಂದಿನ ಘಟನೆಯನ್ನು ಗಂಡನೆದುರಿಗೆ ಹೇಳಿದ್ದಳು. ಮರುದಿನ ಬೆಳಿಗ್ಗೆ ಸಾರವಾಡಕ್ಕೆ ಹೋಗುವುದೆಂದು ದಂಪತಿಗಳು ನಿರ್ಧರಿಸಿದರು.//೩೬//

ಸಂಗಾಶಹನ ಭೆಟ್ಟಿ - ಉಂಗುರದ ಸಂಗತಿ, ಅಂದೇ ತಿಮ್ಮವ್ವನಿಗೆ ಭಾಸ್ಕರ ಸ್ವಾಮಿಗಳ ದರ್ಶನ, ಗಂಡನನ್ನು ಕರೆದುಕೊಂಡು ಬರಲು ಹೇಳಿದ್ದು ಇವುಗಳೆಲ್ಲ ಒಂದು ರೀತಿ ಪವಾಡ ಎನಿಸಿದರೂ, ಇಂಥ ಯಾವುದೋ ಒಂದು ಸನ್ನಿವೇಶದಲ್ಲಿ ರಾಯರ ಮನಸ್ಸು ಪರಿವರ್ತಿತವಾಗಿ ಅವರು ಸಾರವಾಡದ ಭಾಸ್ಕರ ಸ್ವಾಮಿಗಳ ಹತ್ತಿರ ಹೋದರು. ಅಥವಾ ಯಾವುದೋ ಒಂದು ಸಂದರ್ಭದಲ್ಲಿ ಭಾಸ್ಕರ ಸ್ವಾಮಿಗಳಿಗೂ ರಾಯರಿಗೂ ಮುಖಾ -ಮುಖಿ ಭೆಟ್ಟಿಯಾದಾಗ ರಾಯರು ಭಾಸ್ಕರ ಸ್ವಾಮಿಗಳಿಂದ ಆಕರ್ಷಿತರಾಗಿ ಅವರ ಸಂಪರ್ಕವನ್ನು ಪಡೆದಿರಬೇಕು.

ಭಾಸ್ಕರ ಸ್ವಾಮಿಗಳ ಕುರಿತು ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಅವರು ಲೋಕಾಪುರದಲ್ಲಿ ಇದ್ದರು. ಅಲ್ಲಿಂದ ಸಾರವಾಡಕ್ಕೆ ಸ್ವ ಇಚ್ಛೆಯಿಂದ ಬಂದು ನೆಲೆಸಿದರು ಎಂದು ಮರಾಠಿ ಚರಿತ್ರೆ ಹೇಳುತ್ತದೆ. ಅವರ ಮೂಲ ಸ್ಥಳ, ಗುರುಪರಂಪರೆ, ಮಠ, ಪಂಥ, ಸಾಧನೆ, ಸಿದ್ಧಿ, ಇವುಗಳ ಕುರಿತು ಏನನ್ನೂ ತಿಳಿಯುವುದು ಸಾಧ್ಯವಾಗಿಲ್ಲ. ಶ್ರೀಪತಿ ತನುಜರು ಕೂಡ ತಮ್ಮ ಕನ್ನಡ

ಕಿರುಚರಿತ್ರೆಯಲ್ಲಿ 'ಸಾರವಾಡ ಗ್ರಾಮದಲಂದು, ಭಾಸ್ಕರ ಮುನಿ ಬಂದು, ಧಾರುಣಿ ಜನರುದ್ಧರಿಸಲಲ್ಲೆ ನಿಂದು। ಇರಲು ದಯಾಸಿಂಧು।। ಎಂದು ಮುಂತಾಗಿ ಅಷ್ಟೇ ಹೇಳುತ್ತಾರೆ. ಸವದತ್ತಿ ರಾಮ ತನ್ನ ಸಂಸ್ಕೃತ ಸ್ತೋತ್ರದಲ್ಲಿ' ಮುನೇಶ್ವರ ಸ್ಥಿತಿಂ ಸಾರ್ವಾಡ ಗ್ರಾಮೇ ಶ್ರುತಂ।।' ಎಂದು ಹೇಳುತ್ತಾನೆ. ಆದರೆ ಶ್ರೀ ಶ್ರೀಪತಯ್ಯ ಹರಿದಾಸರು ತಮ್ಮ ಸೇವಾತತ್ವ ಪೀಠಿಕೆಯಲ್ಲಿ 'ಸಾರ್ವಾಡದ ಬ್ರಾಹ್ಮಣ ಸದ್ಗೃಹಸ್ಥರೊಬ್ಬರು ಕೃಷ್ಣಾ ತೀರಕ್ಕೆ ಸ್ನಾನಕ್ಕೆಂದು ಹೋದಾಗ ಪ್ರವಾಹದ ಗುಂಟ ತೇಲಿ ಬರುವ ತೆಪ್ಪದಲ್ಲಿ ದೊರೆತ ಮಗು ಭಾಸ್ಕರ ಸ್ವಾಮಿ ಎಂದು ಪ್ರಸಿದ್ಧರಾದರು.' ಎಂದು ಹೇಳುತ್ತಾರೆ! ಯಾರು? ಎಲ್ಲಿ? ಆಧಾರಗಳನ್ನೊಂದೂ ಕೊಡುವುದಿಲ್ಲ. ಇಂದು ಸಾರವಾಡದಲ್ಲಿ ಅಲ್ಲಿಯ ಕುಲಕರ್ಣಿಗಳ ಹಾಳುಬಿದ್ದ ಮನೆಯೊಂದರಲ್ಲಿ ಭಾಸ್ಕರ ಸ್ವಾಮಿಗಳ 'ಸಮಾಧಿ' ಯನ್ನು ತೋರಿಸುತ್ತಾರೆ. ಮರಾಠಿ ಚರಿತ್ರಕಾರನು ಅವರ ಕುರಿತು ಹೇಳುತ್ತ 'ಜನರು ಅವರನ್ನು ಈಶ್ವರನ ಅವತಾರವೆಂದು ಭಾವಿಸುತ್ತಿದ್ದರು. ಸಮಾಧಿ ಸ್ಥಿತಿಯಿಂದ ಹೊರಬಂದು ಅವರ ದರ್ಶನವಾಗಬೇಕಾದರೆ ಜನರು ತಿಂಗಳುಗಟ್ಟಲೆ ಕಾಯಬೇಕಾಗುತ್ತಿತ್ತು.' ಎಂದು ಮುಂತಾಗಿ ಹೇಳುತ್ತಾನೆ.//೩೭//

ಮರುದಿನ ರಾಯರು ಬಾದಶಹನ ಅಪ್ಪಣೆ ಪಡೆದು ಸಹಕುಟುಂಬರಾಗಿ ಸಾರವಾಡಕ್ಕೆ ಹೋದರು. ಅವರು ಸ್ವಾಮಿಗಳ ಆಶ್ರಮಕ್ಕೆ ಹೋದಾಗ ಭಾಸ್ಕರ ಸ್ವಾಮಿಗಳು ಸಮಾಧಿ ಸ್ಥಿತಿಯಲ್ಲಿದ್ದರು. ಸ್ವಾಮಿಗಳ ದರ್ಶನಕ್ಕಾಗಿ ಕಾಯುತ್ತ ಹೊರಗೆ ನಿಂತರು. ತುಸು ಹೊತ್ತಿನಲ್ಲಿ ಭಾಸ್ಕರ ಸ್ವಾಮಿಗಳು ಸಹಜ ಸ್ಥಿತಿಗೆ ಬಂದರು. ರಾಯರು ಸಹಕುಟುಂಬರಾಗಿ ದರ್ಶನಾಪೇಕ್ಷಿಗಳಾಗಿ ಬಂದ ವಿಷಯವನ್ನು ಸೇವಕರು ಹೇಳಿದಾಗ 'ಅವರನ್ನು ಒಳಗೆ ಕರೆದುಕೊಂಡು ಬರಲು ಸ್ವಾಮಿಗಳು ಅಪ್ಪಣೆ ಕೊಡಿಸಿದರು. ರಾಯರು ಹಾಗೂ ಅವರ ಹೆಂಡತಿ ಇಬ್ಬರೂ ಒಳಗೆ ಬಂದು ಸ್ವಾಮಿಗಳಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿದರು. ಸ್ವಾಮಿಗಳು ಸಸ್ಮಿತವದನರಾಗಿ ರಾಯರನ್ನು ಎಬ್ಬಿಸುತ್ತ,

'ನಾವು ಬಂದು ಆರು ತಿಂಗಳುಗಳ ಮೇಲಾಯಿತು! ನಿಮಗೆ<br>
ಬರುವುದಾಗಲಿಲ್ಲವಲ್ಲ! ಇಂದು ಅಕಸ್ಮಾತ್ತಾಗಿ ಆ<br>
ಗಳಿಗೆ ಬಂದಿತಲ್ಲವೆ?' ಎಂದು ಕೇಳಿದಾಗ

ರಾಯರ ಮೈ ಜುಮ್ ಎಂದಿತು. ಮತ್ತೊಮ್ಮೆ ನಮಸ್ಕರಿಸಿ, 'ಸ್ವಾಮಿ ನಾನು ಅಪರಾಧಿ, ಪಾಮರನು, ನೀವು ಕರುಣಿಸಿ ನನ್ನನ್ನು ಉದ್ಧರಿಸಬೇಕು' ಎಂದು ಅನನ್ಯ ಭಾವದಿಂದ ಭಾಸ್ಕರ ಸ್ವಾಮಿಗಳನ್ನು ಸ್ತುತಿಸಲು ಅವರು ರಾಯರನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡರು.//೩೮// ಒಬ್ಬ ಶಿಷ್ಯನನ್ನು ಕರೆದು ಒಂದು ಪಾತ್ರೆಯಲ್ಲಿ ತುಸು ಹಾಲನ್ನು ತರಲು ಹೇಳಿದರು. ಶಿಷ್ಯ ತಂದ ಹಾಲನ್ನು ಕ್ಷಣಹೊತ್ತು ದಿಟ್ಟಿಸಿ ನೋಡಿ, ಆದನ್ನು ರಾಯರಿಗೆ ಕುಡಿಯಲು ಕೊಟ್ಟರು.//೩೯// ಪರಮ ಪ್ರಸಾದವೆಂದು ತಿಳಿದು ರಾಯರು ಹಾಲನ್ನು ಕುಡಿದು ಮತ್ತೊಮ್ಮೆ ಗುರುಗಳಿಗೆ ನಮಸ್ಕರಿಸಿದರು.

ಪ್ರಸನ್ನರಾದ ಗುರುಗಳು ಶಿಷ್ಯನ ಮಸ್ತಕದ ಮೇಲೆ ಕ್ಷಣಹೊತ್ತು ಹಸ್ತವನ್ನಿಟ್ಟರು. ಆದಾಗಲೇ ಹೊತ್ತಿದ್ದ ಜ್ಞಾನದ ಕಿಡಿಯು ಸಚ್ಚಿದಾನಂದನ ದರ್ಶನವನ್ನು ಮಾಡಿಸಿತು. ಆ ಅಪರೂಪದ ಘಟನೆಯನ್ನು ರಾಯರು ತಮ್ಮ ಒಂದು ಪದದಲ್ಲಿ ಸುಂದರವಾಗಿ ಹೇಳಿದ್ದಾರೆ. 'ಇಂದೆನ್ನ ಜನ್ಮ ಪಾವನವಾಯಿತು. ತಂದೆ ಶ್ರೀ ಗುರುಗಳ ಚರಣ ದರುಶನದಿಂದ' ಎಂದು ಪ್ರಾರಂಭವಾಗುವ ೬ ನುಡಿಗಳ ಕೀರ್ತನೆಯಲ್ಲಿ ಗುರುಗಳ ದಯದಿಂದ ತಮಗೆ ಸಾಕ್ಷಾತ್ಕಾರವಾದ ಬಗೆಯನ್ನು ವಿವರಿಸಿದ್ದಾರೆ.//೪೦// ಕೊನೆಯಲ್ಲಿ

> ಭಾಸ್ಕರ ಸ್ವಾಮಿಯು ಕರುಣಾಳು ಮೂರ್ತಿಯು।
> ಮೂಢ ಮಹಿಪತಿಯ ಕೃಪಾಂಬುಧಿಯು।
> ಕರುಣದಭಯ ಹಸ್ತವನು ಶಿರಸದಲ್ಲಿಡಲಾಗಿ।
> ಧನ್ಯನಾದೆನು ಸತಿಪತಿ ಸಹಿತವಾಗಿನ್ನು ।।೬।।

ಎಂದು ಹೇಳುತ್ತಾರೆ. ಬಹುಶ: ಈ ಕೃತಿಯೇ ರಾಯರು ತಮ್ಮ ಗುರುಗಳನ್ನು ಕಂಡ ಮೇಲೆ ರಚಿಸಿದ ಮೊದಲ ಕೀರ್ತನೆಯೂ ಆಗಿರಬೇಕು. ಅಂದಿನಿಂದ 'ಮಹಿಪತಿ' ಎಂಬ ಅಂಕಿತದಿಂದ ತಮ್ಮ ಅನುಭವಗಳನ್ನು ಕೀರ್ತನೆಯ ರೂಪದಲ್ಲಿ ಹೇಳಲು ಪ್ರಾರಂಭಿಸಿರಬೇಕು. ಚಾರಿತ್ರಿಕವಾಗಿಯೂ ಈ ಕೀರ್ತನೆ ಮಹತ್ವದ್ದೆನಿಸುತ್ತದೆ. ಭಾಸ್ಕರ ಸ್ವಾಮಿಗಳ ದರ್ಶನ, ಅವರ ಕೃಪೆಯಿಂದ ಸಾಕ್ಷಾತ್ಕಾರದ ಅನುಭವದ ಜೊತೆಗೆ ಸತಿ-ಪತಿ ಸಹವಾಗಿ ಗುರುಗಳ ಹತ್ತಿರ ಹೋಗಿದ್ದನ್ನು ಹಾಗು ಅವರು ಕರುಣದಿಂದ ಅಭಯ ಹಸ್ತವನ್ನು ರಾಯರ ಶಿರದ ಮೇಲೆ ಇಟ್ಟುದನ್ನು ಮಹಿಪತಿರಾಯರೇ ಸ್ವತ: ಹೇಳುವುದು ವಿಶೇಷವೆನಿಸುತ್ತದೆ. ಹೀಗೆ ಇನ್ನೊಂದು ಕೀರ್ತನೆಯಲ್ಲಿ ಗುರುಗಳ ದರ್ಶನದಿಂದ ತಮ್ಮ ಜನ್ಮ ಸಾಫಲ್ಯವಾದ ಬಗೆಯನ್ನು ವಿವರಿಸುತ್ತಾರೆ. ಸಾರವಾಡಕ್ಕೆ ಬಂದ ಮೇಲೆ ಅವರ ಪುಣ್ಯ ಕೈಗೂಡಿದ್ದನ್ನು, ಭಾನುಕೋಟಿ ತೇಜರೂಪವಾಗಿ ಕಂಡಿದ್ದನ್ನು ಹೇಳಿದ್ದಾರೆ.//೪೧//

ಹೀಗೆ ಪ್ರಥಮ ದರುಶನದಲ್ಲಿಯೇ ಭಾಸ್ಕರ ಸ್ವಾಮಿಗಳು ಮಹಿಪತಿರಾಯರಿಗೆ ಬ್ರಹ್ಮ ಸಾಕ್ಷಾತ್ಕಾರವನ್ನು ಮಾಡಿಸಿದರು. ಅದರಂತೆ, ತಿಮ್ಮವ್ವನಿಗೆ 'ಜಗಪ್ರಸಿದ್ಧ'ರಾದ ಪುತ್ರದ್ವಯರ ವರವನ್ನೂ ಕೊಟ್ಟರು. ಒಬ್ಬ ಜ್ಞಾನವಂತ -ಗುಣವಂತನಾದರೆ ಇನ್ನೊಬ್ಬ ಶೂರನಾಗಿ -ಕೀರ್ತಿವಂತ ನಾಗುತ್ತಾನೆಂದು ಹೇಳಿದರು.//೪೨// ಗುರುಗಳ ವರದಾನದಿಂದ ಹರುಷಪಟ್ಟ ತಿಮ್ಮವ್ವ ಮತ್ತೆ ಮತ್ತೆ ಗುರುಗಳ ಚರಣಗಳಿಗೆ ಎರಗಿದಳು. ಅಂದಿನ ದಿನವನ್ನೆಲ್ಲ ದಂಪತಿಗಳು ಗುರುಗಳ ಸಾನಿಧ್ಯದಲ್ಲಿಯೇ ಕಳೆದರು. ಜೊತೆಗೆ ಬಂದಿದ್ದ ಪರಿವಾರವನ್ನೆಲ್ಲ ಹಿಂತಿರುಗಿ ವಿಜಾಪುರಕ್ಕೆ ಕಳಿಸಿ ಗುರುಗಳ ಆಜ್ಞೆಯಂತೆ ತುಸುದಿನ ಸಾರವಾಡದಲ್ಲಿಯೇ ಇರುವುದೆಂದು ನಿಶ್ಚಯಿಸಿದರು.

ಒಂದು ದಿನ ಹೋಗಿ ಬರುತ್ತೇನೆಂದು ಹೇಳಿ ಹೋದ ರಾಯರು ನಾಲ್ಕಾರು ದಿನಗಳಾದರೂ ತಿರುಗಿ ಬರದ್ದನ್ನು ಕಂಡ ಬಾದಶಹನು ಸೇವಕನೊಬ್ಬನನ್ನು ಸಾರವಾಡಕ್ಕೆ ಕರೆಯಲು ಕಳಿಸಿದನು. ಆದರೆ ರಾಯರು ವಿಜಾಪುರಕ್ಕೆ ಬರಲಿಲ್ಲ. ತಮ್ಮ ಕುರಿತು ತೋರಿದ ಪ್ರೀತಿ ವಿಶ್ವಾಸಗಳಿಗೆ ಪ್ರತಿಯಾಗಿ ಸೇವಕನ ಮುಖಾಂತರ ಕೃತಜ್ಞತೆಗಳನ್ನು ತಿಳಿಸಿದರು. ತಮ್ಮ ನಿಜವಾದ ಬಾದಶಹ ದೊರಕಿರುವುದಾಗಿಯೂ ಹೇಳಿ ಕಳಿಸುತ್ತ. ಇನ್ನು ಆ ಬಾದಶಹನನ್ನು ಕಾಣುವ ಹಂಬಲದಿಂದ ಅವನ ಸೇವೆಯನ್ನು ಮಾಡುವುದಾಗಿ ಹೇಳಿ ಕಳಿಸಿದರು. ಈವರೆಗೆ ವಿಜಾಪುರದಲ್ಲಿರುವ ತಮ್ಮದೆನಬಹುದಾದ ಎಲ್ಲ ಚರ-ಸ್ಥಿರ ಆಸ್ತಿಯನ್ನು ರಾಜಭಾಂಡಾರಕ್ಕೆ ಒಪ್ಪಿಸಿಕೊಳ್ಳಬೇಕೆಂದು ಪತ್ರಮುಖೇನ ಬಾದಶಹರಿಗೆ ಬಿನ್ನವಿಸಿಕೊಂಡರು.//೪೨//

ಬಾದಶಹನು ಸೇವಕನ ಮುಖಾಂತರ ಕಳಿಸಿದ ಪತ್ರವನ್ನು ಓದಿ, ಅಲ್ಲಿಯ ಸಾದ್ಯಂತ ವಿಷಯವನ್ನು ಕೇಳಿ ವ್ಯಥೆ ಪಟ್ಟನು. ಮತ್ತೊಮ್ಮೆ ಹೇಳಿ ಕಳಿಸಿ ನೋಡಿದನು. ಅವರ ಬಾದಶಹನ ಸೇವೆಯನ್ನು ವಿಜಾಪುರದಲ್ಲಿದ್ದುಕೊಂಡೇ ಮಾಡಬಹುದಲ್ಲ ಎಂದೂ ಹೇಳಿಕಳಿಸಿದನು. ಆದರೆ ರಾಯರು ಅದಕ್ಕೆ ಒಪ್ಪಲಿಲ್ಲ. ಆಗ ಬಾದಶಹನು ನಿರುಪಾಯನಾದ. ಆದರೆ ಅವರು ಒಂತಿರುಗಿಸಿದ ಆಸ್ತಿಗೆ ಅವನು ಕೈ ಹಚ್ಚಲಿಲ್ಲ. ಅದು ರಾಯರ ಆಸ್ತಿ. ಅದನ್ನು ಯಾವಕಾಲಕ್ಕೂ ರಾಜಭಾಂಡಾರಕ್ಕೆ ಸೇರಿಸಬಾರದು. ತಮ್ಮ ಆಸ್ತಿಯನ್ನು ಅವರು ಮನ ಬಂದಂತೆ ವಿನಿಯೋಗಿಸಲಿ ಎಂದು ಫರ್ಮಾನು ಹೊರಡಿಸಿದ. ಅದನ್ನು ಕೇಳಿದ ರಾಯರು ಹೆಂಡತಿಯನ್ನು ವಿಜಾಪುರಕ್ಕೆ ಕಳಿಸಿ ತಮ್ಮ ಆಸ್ತಿಯನ್ನೆಲ್ಲ ಬಡಬಗ್ಗರಿಗೆ ಹಂಚಿದರು.//೪೩//

ಪತಿಯ ಆಜ್ಞೆಯಂತೆ ತುಕ್ಕವ್ವ ವಿಜಾಪುರಕ್ಕೆ ಬಂದು ತಮ್ಮದೆನ್ನುವ ಆಸ್ತಿಯನ್ನೆಲ್ಲ ಸತ್ಪಾತ್ರರಿಗೆ ದಾನಮಾಡಿ ಸಾರವಾಡಕ್ಕೆ ಮರಳಿದಳು. ಆಗ ರಾಯರಿಗೆ ಇನ್ನಷ್ಟು ಪರಮಾನಂದವಾಯಿತು. ಎಲ್ಲವನ್ನು ತ್ಯಾಗಮಾಡಿ ಗುರುಗಳ ಸಾನಿಧ್ಯದಲ್ಲಿ ಇರುವುದು ಮುನ್ನ ಮಾಡಿದ ಪುಣ್ಯದ ಫಲವೆಂದೂ, ಆದರಿಂದ ತಮ್ಮ ಜೀವನ ಪಾವನವಾಯಿತೆಂದು ಹಲವಾರು ಕೀರ್ತನೆಗಳಲ್ಲಿ ತುಂಬು ಹೃದಯದಿಂದ ಹಾಡಿ ನಲಿದಿದ್ದಾರೆ.

'ಇನ್ನೇನಿನ್ನೇನು ಎನಗಿನ್ನು ಇನ್ನೇನಿನ್ನೇನು
ಎನ್ನೊಳು ಗುರು ತನ್ನ ಮರ್ಮವು ದೋರಿದ ಇನ್ನೇನಿನ್ನೇನು।

........

ಮಹಿಪತಿ ಜೀವನ್ನ ಪಾವನ್ನವಾಯಿತು ಇನ್ನೇನಿನ್ನೇನು।

ಎಂದು ಒಂದು ಕೀರ್ತನೆಯಲ್ಲಿ ಹೇಳಿದ್ದಾರೆ. ಮತ್ತೊಂದು ಕೀರ್ತನೆಯಲ್ಲಿ

'ಪುಣ್ಯ ಕ್ಷೇತ್ರವಹುದಿದು ಸಾರವಾಡ ಗ್ರಾಮ

ಕಂಠಾರೆ ಕಂಡು ಯಾತ್ರೆಗೆ ಬಾಹುದು ಬ್ರಹ್ಮ ಸ್ತೋಮ'
ಎಂದು ಗುರುಸ್ಥಾನದ ಮಹಿಮೆಯನ್ನು ಹೇಳಿದ್ದಾರೆ.

ಮರಾಠಿ ಚರಿತ್ರೆಯ ಉಪಲಬ್ಧ ಒಂದು ಅಧ್ಯಾಯದಲ್ಲಿಯ ವೃತ್ತಾಂತವು ಇಲ್ಲಿಗೆ ನಿಲ್ಲುತ್ತದೆ. ಮುಂದಿನ ಚರಿತ್ರೆಗೆ ಅವರ ಆಧ್ಯಾತ್ಮಿಕ ಸಾಧನೆಯಲ್ಲಿಯ ಅಭಿವೃದ್ಧಿ, ಉತ್ತರ ಕಾಲದ ಅವರ ಜೀವನದ ಕುರಿತು ಬೆಳಕು ಚೆಲ್ಲಲು ಶ್ರೀಪತಿ ತನುಜರ ಕನ್ನಡ ಕಿರುಚರಿತ್ರೆ ಹಾಗು ಸಂಸ್ಕೃತ ಸ್ತೋತ್ರಗಳೇ ಮುಖ್ಯ ಆಕರಗಳು. ಜೊತೆಗೆ ರಾಯರು ತಮ್ಮ ಅನುಭವಗಳನ್ನು ಉಲ್ಲೇಖಿಸಿ ರಚಿಸಿದ ಸ್ವಕೃತಿಗಳು, ಅವರ ಮಗ, ಮೊಮ್ಮಕ್ಕಳು ರಚಿಸಿದ ಹಲವಾರು ಕೀರ್ತನೆಗಳು, ಮತ್ತು ಪರಂಪರೆಯಿಂದ ಕೇಳಿ ಬಂದ ಸಂಗತಿಗಳು ಸಹಾಯವಾಗುತ್ತವೆ.

ಗುರುಗಳ ದರ್ಶನ ಹಾಗು ಸ್ಪರ್ಶಮಾತ್ರದಿಂದ ಮಹಿಪತಿರಾಯರು ಪರಮಾತ್ಮನ ಸಾಕ್ಷಾತ್ಕಾರದ ಅನುಭವವನ್ನು ಹೊಂದಿದ್ದರು. ಅದಕ್ಕೆ ಕಾರಣ, ಅವರ ಬೌದ್ಧಿಕ, ಭಾವನಾತ್ಮಕ ಹಾಗೂ ನೈತಿಕ ಸಿದ್ಧತೆಯು ಆಗಲೇ ತುಂಬ ಮುಂದುವರೆದಿತ್ತು. 'ಅವರ ಹೃದಯದಲ್ಲಿ ಮುಮುಕ್ಷತೆಯ ಭಕ್ತಿ ಭಾವದ ಸಿಡಿಮದ್ದು ಜಡಿದು ತುಂಬಲಾಗಿದ್ದಿತು. ಅದಕ್ಕೆ ಸದ್ಗುರುಗಳ ಅನುಗ್ರಹದ ಕಿಡಿಯೊಂದೇ ಬೇಕಾಗಿತ್ತು. ಅದು ಈಗ ಲಭಿಸಿದ ಮೂಲಕ, ಅವರಲ್ಲಿ ಅನುಭಾವದ ಸ್ಫೋಟವು ಕಂಗೊಳಿಸಲು ಬಹುಕಾಲ ಬೇಕಾಗಲಿಲ್ಲ ಅವರ ಈ ಸಾಧನದ ಸ್ವರೂಪವನ್ನು ಅವರ ಮರಿಮಗ ಶ್ರೀಪತಿತನುಜರ ಬಾಯಿಂದ ಕೇಳಬೇಕು.

'ಯೋಗಧಾರಣದ ಕೀಲವ ದೋರಿಸಲು। ದೂದಿಯ ವ್ಹೋಲ್।
ಆಗಲಿ ದೊರಕಿತು ಮನ ನೆಲೆಗೊಳ್ಳಿಸಲು। ನಾನಾ ಬಯಕೆಗಳು।
ತ್ಯಾಗವ ಮಾಡುತ ಅನ್ನ ಉದಕಗಳು। ಕ್ಲಪ್ತಕೆ ನಿಲ್ಲಿಸಲು।
ಸಾಗಲು ಮುಂದಕೆ ಪರಿಪರಿ ಸಿದ್ಧಿಗಳು- ಮುಗಿದವು ಹಸ್ತಗಳು ।।೫।।

ನಾಲ್ಕು ಆರು ದಶದ್ವಾದಶ ಷೋಢಶದಾ। ಭ್ರೂಮಧ್ಯದ್ವಿದಳದಾ।
ಆ ಕಮಲವ ಮೆಟ್ಟುತ ಕಾಕಿಯ ಮುಖದಾ। ದ್ವಾರವತ್ಯಜಿಸುತ್ತಾ।
ತ್ರಿಕುಟ ಶ್ರೀಹಟ ಗೋಲ್ಹಟ ಗೋಪುರದಾ। ನೋಡುತಾ ಸಂಭ್ರಮದಾ।
ಸೋಂಕೆಳೆ ಗುಂಫದೊಳಾಡಿ ಸಾಸಿರದಳದಾ। ಪಂಕಜದೊಳಗಿದ್ದ ।।೬।।

ನಿರುಪಮ ನಿರ್ಗುಣ ನಿತ್ಯನಿರಂಜನಾ। ಪ್ರಭೆಯು ಅನುದಿನಾ।
ಹರಿಶಶಿ ಕೋಟಿ ಪ್ರಕಾಶ ಭಾಸುವದನಾ। ಕಾಣುತ ಸಂಪೂರ್ಣಾ।
ಇರಲು ಪಶ್ಚಿಮದ ಮಾರ್ಗದ ಸಾಧನಾ। ತಿಳಕೊಂಡ್ಯೋ ಪ್ರವೀಣಾ।
ಎರಡು ಹಾದಿ ಸುಲಭವಾಯಿತು ಗುರುಕರಣಾ। ದಿಂದಲಿ ಭಯಹರಣಾ।।೭।।

ಹೀಗೆ ಸದ್ಗುರುಗಳು 'ಯೋಗಧಾರಣದ ಕೀಲನ್ನು' ಅರುಹಲು ಜ್ವಾಲಾಗ್ರಾಹಿಯಾದ ದೂದಿಗೆ ಕಿಡಿಯು ಸೋಂಕಿದಂತಾಯಿತು. ಅದು ಒಮ್ಮೆಲೆ ಪ್ರಜ್ವಲಿಸುವಂತೆ ರಾಯರ ಅಂತರಂಗದಲ್ಲಿ ಪರಮಾತ್ಮನ ಚಿತ್ಪ್ರಕಾಶವು ಹೊಳೆಯತೊಡಗಿತು. ಅಂತೆಯೇ ರಾಯರು 'ಹನ್ನೆರಡು ವರುಷಗಳಲ್ಲಿ ಮುಗಿಯುವಂಥ ಯೋಗವನ್ನು ಹನ್ನೊಂದು ತಿಂಗಳುಗಳಲ್ಲಿ' ಮುಗಿಸಿದರು. ಮತ್ತು ಆದರಿಂದಾಗಿ ಅವರು ಪರಿಪರಿಯ ಸಿದ್ಧಿಗಳನ್ನೂ, ದಿವ್ಯ ಅನುಭವಗಳನ್ನು ಪಡೆದು ಧನ್ಯರಾದರು. ಅವರು ಪಡೆದ ಈ ದಿವ್ಯ ಅನುಭವಗಳನ್ನು ಸ್ಥಿರಗೊಳಿಸಲು ಅನೇಕ ಸಾಧನೆಗಳನ್ನು ಮಾಡಬೇಕಾಯಿತು.

ಶಿಷ್ಯನ ಸಿದ್ಧಿಗಳನ್ನು ಕಂಡು ಭಾಸ್ಕರ ಸ್ವಾಮಿಗಳಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಇನ್ನು ಸಾರವಾಡದಿಂದ ಹೊರಡಲು ಅಡ್ಡಿ ಇಲ್ಲ ಎಂದರು. ಗುರುಗಳ ಅಪ್ಪಣೆ ಪಡೆದು ಮಹಿಪತಿರಾಯರು ತಮ್ಮ ಪತ್ನಿಯೊಂದಿಗೆ ತಿರುಗಿ ವಿಜಾಪುರಕ್ಕೆ ಬಂದರು.//೪೪//

ರಾಯರು ತಿರುಗಿ ವಿಜಾಪುರಕ್ಕೆ ಬರುವ ಸುದ್ದಿಯನ್ನು ಕೇಳಿ ಖವಾಸಖಾನನಿಗೆ ತುಂಬ ಸಂತೋಷವಾಯಿತು. ರಾಯರು ವಿಜಾಪುರವನ್ನು ಬಿಟ್ಟು ಹೋದಂದಿನಿಂದ ಅವನ ಬಲಗೈ ಹೋದಂತಾಗಿತ್ತು. ಅವರು ತನ್ನಲ್ಲಿಂದ ರಾಜದರಬಾರಕ್ಕೆ ಹೋದಮೇಲೆ ಕೂಡ ಅವನು ಪ್ರತಿಯೊಂದು ವಿಷಯದಲ್ಲಿಯೂ ಅವರ ಸಲಹೆಯನ್ನು ಕೇಳದೆ ಮುಂದಿನ ಹೆಜ್ಜೆಯನ್ನು ಇಡುತ್ತಿರಲಿಲ್ಲ. ರಾಯರು ಸಾರವಾಡಕ್ಕೆ ಹೋದನಂತರ ಖವಾಸಖಾನನು ಹಲವಾರು ಸಲ ಹೋಗಿ ಅವರನ್ನು ಕಂಡು ಬಂದಿದ್ದನು. ಈಗ ಅವರು ತಿರುಗಿ ವಿಜಾಪುರಕ್ಕೆ ಬರುತ್ತಾರೆ ಎಂದು ತಿಳಿದಾಗ ಉಳಿದವರಿಗಿಂತ ಮೊದಲು ಸೇವಕರನ್ನು ಪಲ್ಲಕ್ಕಿಗಳನ್ನು ತೆಗೆದುಕೊಂಡು ಸಾರವಾಡಕ್ಕೆ ಅವರನ್ನು ಕರೆಯಲು ಹೋದನು. ಆದರೆ ರಾಯರಿಗೆ ಆ ವೈಭವವೆಲ್ಲ ಬೇಕಾಗಿರಲಿಲ್ಲ ಅವನ ಪ್ರೀತಿ ವಿಶ್ವಾಸಗಳಿಗೆ ಸಸ್ಮಿತರಾದರು. ಅವನ ಸೇವೆಯನ್ನು ಒಪ್ಪಲಿಲ್ಲ. ಕಾಲು ನಡಿಗೆಯಲ್ಲಿ ವಿಜಾಪುರಕ್ಕೆ ಬರುವುದಾಗಿ ತಿಳಿಸಿದರು. ಹಾಗೂ ಅಲ್ಲಿ ತಾವು ಹರಿದಾಸರಂತೆ ಭಿಕ್ಷೆ ಬೇಡಿ ಉಂಬುವುದಾಗಿ ಹೇಳಿದರು. ಅವರಿಗೆ ದ್ರವ್ಯ-ಧಾನ್ಯ -ಮನೆ- ಮಠಗಳು ಬೇಕಾಗಿರಲಿಲ್ಲ. ಖವಾಸಖಾನನು ಪರಿ ಪರಿಯಿಂದ ಹೇಳಿಕೊಂಡರೂ ಮಹಿಪತಿರಾಯರು ತಮ್ಮ ದೃಢ ನಿರ್ಧಾರವನ್ನು ಬದಲಿಸಲಿಲ್ಲ. ಖವಾಸಖಾನನ ಮನಸ್ಸಿಗೆ ತುಂಬ ನೋವಾಯಿತು. ಕೊನೆಗೆ ಒಂದೇ ಒಂದು ಕೃಪೆಯನ್ನು ಮಾಡಬೇಕೆಂದು ಕೇಳಿಕೊಂಡನು. 'ವಿಜಾಪುರದಲ್ಲಿ ಇರಲು ವಾಸಸ್ಥಾನಕ್ಕಾಗಿ ತನ್ನ ಸೇವೆಯನ್ನು ಸ್ವೀಕರಿಸಬೇಕು' ಎಂದು ಬಿನ್ನವಿಸಿಕೊಂಡಾಗ ರಾಯರು ಆಗಲಿ ಎಂದು ಹೇಳಿ ತಾವು ಇರಬಯಸುವ ಸ್ಥಳ ಬಯಲು

ಗುಡಿಸಲಾಗಿರಬೇಕು. ಹತ್ತಿರದಲ್ಲಿ ಒಂದು ಬಾವಿ, ಇಷ್ಟನ್ನು ಬಿಟ್ಟು ಬೇರೆ ಯಾವ ಸೌಲಭ್ಯಗಳೂ ಅಲ್ಲಿ ಇರಬಾರದು ಎಂದು ಹೇಳಿದರು. ಮುಂದಾಗಿ ಹೋಗಿ ಅವರು ಇರಲು ಯೋಗ್ಯವಾದ ಸ್ಥಳದ ವ್ಯವಸ್ಥೆಯನ್ನು ಮಾಡಿದನು.

ಒಂದು ಶುಭದಿನದಂದು ರಾಯರು ತಮ್ಮ ಮಡದಿಯನ್ನು ಕರೆದುಕೊಂಡು ಗುರುಗಳನ್ನು ಕಂಡು ಅವರ ಚರಣಗಳಿಗೆ ವಂದಿಸಿ ಆಶೀರ್ವಾದ ಪಡೆದು ವಿಜಾಪುರಕ್ಕೆ ಹೊರಟರು. ಮಹಿಪತಿ ರಾಯರಿಗೆ ಗುರುಗಳ ಸಾನ್ನಿಧ್ಯವನ್ನು ಬಿಡಲು ಮನಸ್ಸು ಇರಲಿಲ್ಲ. ಆದರೆ ಗುರುಗಳ ಅಪ್ಪಣೆಯಾಗಿದೆ. ಗುರುಗಳು ತಮ್ಮನ್ನು ಇಲ್ಲಿಂದ ಯಾಕೆ ಕದಲಿಸುತ್ತಿದ್ದಾರೆಂಬುದು ಅವರಿಗೆ ಗೊತ್ತಿಲ್ಲ. ಆದರೂ ಹೋಗಬೇಕು. ಅವರೇ ತಾಯಿ ತಂದೆ ಎನ್ನುತ್ತ ಮತ್ತೆ ಮತ್ತೆ ನಮಸ್ಕರಿಸಿ ಗುರುಗಳನ್ನು ಸ್ತುತಿಸಿದರು.

> ''ಶ್ರೀ ಗುರುವೆ ತಂದೆನಗೆ ನೀನು।।
> ತಾಯಿ ತಂದೆನಗೆ ನೀ ಬಾಹ್ಯಾಂತ್ರ ಪರಿಪೂರ್ಣ।
> ಸಾಯೋಜ್ಯ ಸದ್ಗುರುನಾಥ ನೀನೆ।।
> ಬಾಲಕನ ಮ್ಯಾಲೆ ದಯಮಾಡಿ ಪಾಲಿಸುತೀಪ್ಪ।
> ಕುಲಕೋಟಿ ಬಂಧು ಬಳಗ ನೀನೆ।।
> ಸಲಹುವ ಮಹಿಪತಿ ಸ್ವಾಮಿ ನೀನೆ।।''

ಎಂದು ಸ್ತುತಿಸಿ ಅಂತ:ಕರಣಪೂರಿತ ಅಶ್ರುಗಳಿಂದ ಗುರುಗಳ ಚರಣಾರವಿಂದಗಳನ್ನು ತೊಳೆದು ಬೀಳ್ಕೊಂಡರು. ಗುರುಗಳಾದ ಭಾಸ್ಕರ ಸ್ವಾಮಿಗಳು ತಮ್ಮ ಪ್ರಿಯ ಶಿಷ್ಯನ ತಲೆ -ಬೆನ್ನುಗಳ ಮೇಲೆ ಕೈ ಆಡಿಸಿ ಹರಸುತ್ತ, ''ನಿನ್ನಿಂದ ಇನ್ನೂ ಬಹಳಷ್ಟು ಕೆಲಸಗಳು ಆಗಬೇಕಿವೆ, ಧರ್ಮ ಉಳಿಯಬೇಕಾಗಿದೆ - ಹೋಗಿ ಬಾ'', ''ನಿನ್ನಿಂದ ಭಗವಂತನ ಭಕ್ತಿಯು ಜನರಲ್ಲಿ ಬೆಳೆಯಬೇಕು. - ಊರಿಗೆ ಹೋಗಿ ಸಾಧನದಲ್ಲಿ ನಿರತನಾಗು'' ಎಂದು ಮುಂತಾಗಿ ಹರಿಸಿ ಶಿಷ್ಯನನ್ನು ಬೀಳ್ಕೊಟ್ಟರು. ಇದನ್ನೇ ಅವರ ಮರಿಮಗ ಶ್ರೀಪತಿ ತನುಜರು ತಮ್ಮ ಆದಿ ಕಿರುಚರಿತ್ರೆಯಲ್ಲಿ, ''ಧರೆಯೊಳು ತವ ಕೀರ್ತಿಯು ಬಹು ವಿಸ್ತಾರಾ। ಆಗುದು ನಿರ್ಧಾರಾ।।'' ಎಂದು ಹೇಳಿದ್ದಾರೆ. //೪೫// ಹತ್ತಿರದಲ್ಲಿ ಅವನತ ಮುಖಿಳಾಗಿ ನಿಂತಿದ್ದ ತಿಮ್ಮವ್ವನನ್ನು ಕಂಡು ಗುರುಗಳು ಅನುಗ್ರಹ ಮಾಡುತ್ತ,

> 'ನಿಶ್ಚಿಂತಳಾಗಿರು ಮಗು, ಸಾಕ್ಷಾತ್ ಪರಮಾತ್ಮನ ದರ್ಶನವನ್ನು ಪಡೆದ ಭಾಗ್ಯ ನಿನ್ನ ಗಂಡನದಾಗಿದೆ. ಈ ಮಹಾವೃಕ್ಷವನ್ನು ಆಶ್ರಯಿಸಿ ಕೊಂಡು ಅವನಿಗೆ ಸಹಾಯಕಳಾಗು, ನಿನ್ನ ಮನದ ಇಚ್ಛೆ ಪೂರ್ತಿಯಾಗುತ್ತದೆ. ನಿನಗೆ ಜೋಡು ಫಲಗಳಿವೆ''.

ಎಂದು ಮುಂತಾಗಿ ಹರಿಸಿದರು. ತಿಮ್ಮವ್ವ ಭಾವಪೂರ್ಣಳಾಗಿ ಗುರುಗಳ ಚರಣ ಧೂಳಿಯನ್ನು ತನ್ನ ಕಣ್ಣಿಗೆ ಒತ್ತಿಕೊಂಡು ಗಂಡನ ಜೊತೆಗೆ ಹೊರಟಳು.

ಮಹಿಪತಿರಾಯರು ಗುರುಗಳ ಆಜ್ಞೆಯಂತೆ ಸಾರವಾಡದಿಂದ ಹೊರಟು ವಿಜಾಪುರಕ್ಕೆ ಬಂದು ನೆಲೆಸಿದರು. ತಮ್ಮ ಸಾಧನವನ್ನು ಮುಂದುವರೆಸಿದರು. ಶಿಷ್ಯರಿಗೆ ಯೋಗ ಶಾಸ್ತ್ರವನ್ನು ಕಲಿಸುವಲ್ಲಿ ಮಾರ್ಗದರ್ಶಕರಾದರು. ಜನಸಾಮಾನ್ಯರಲ್ಲಿ ಭಗವಂತನ ಕುರಿತಾಗಿ ಭಕ್ತಿಯನ್ನು ಬೆಳೆಸುವಲ್ಲಿ ನಿರತರಾದರು. ಅವರು ಈಗ ಯಾರೊಬ್ಬರ ಸೇವಕರಾಗಲಿ, ಸೊತ್ತಾಗಲೀ ಆಗಿರಲಿಲ್ಲ. ಅವರು ಸಮಾಜದ, ಸಾರ್ವಜನಿಕರ ಸೊತ್ತಾದರು. ಎಲ್ಲರೂ ಅವರನ್ನು ಕಾಣುವ, ದರ್ಶನವನ್ನು ಪಡೆಯುವ ಹಂಬಲದಿಂದ ದೂರದ ಊರುಗಳಿಂದ ಬರಹತ್ತಿದರು. ಅವರ ಕರುಣ ದೃಷ್ಟಿಗೆ ಬೀಳಲು ಹಾತೊರೆಯುತ್ತಿದ್ದರು. ಅವರ ಮಾರ್ಗದರ್ಶನದಿಂದ ತಮ್ಮ ಜೀವನವನ್ನು ಸಾಫಲ್ಯಗೊಳಿಸುವದಕ್ಕೆ ಪ್ರಯತ್ನಿಸುತ್ತಿದ್ದರು. ಹೀಗೆ ಪಂಡಿತರು, ಪಾಮರರು, ಸಂತರು ಸಾಧುಗಳು ಸರದಾರರು ಸೇನಾಪತಿಗಳು ಎಲ್ಲರೂ ಅವರ ಹತ್ತಿರ ಹಿಂಡುಗಟ್ಟಲೆ ಬರುತ್ತಿದ್ದರು. ತಮ್ಮ ಬದುಕನ್ನು ಹಸನು ಗೊಳಿಸುವ ಸಾಧನವನ್ನು ಅವರಿಂದ ಕೇಳಿ ತಿಳಿಯಲು ಪ್ರಯತ್ನಿಸುತ್ತಿದ್ದರು. ಅದು ಸಾಧ್ಯವಿಲ್ಲವಾದರೆ ಅವರ ಒಂದೇ, ಒಂದು ಕರುಣಾಪೂರ್ಣ ದೃಷ್ಟಿಗೆ ಶತಪ್ರಯತ್ನ ಮಾಡುತ್ತಿದ್ದರು. ಪ್ರತಿಯಾಗಿ ಧನ, ದೌಲತ್ತು, ಧಾನ್ಯ -ಆಸ್ತಿ ಏನೆಲ್ಲ ಕೊಡಲು ಸಿದ್ಧರಿದ್ದರು. ಆದರೆ,

'**ಕೊಟ್ಟರ್ಹಿಡಿಯಲಿ**ಲ್ಲ ಓರ್ವರ ಧನವು। ಪೂರ್ವದ ಸಂಗ್ರಹವು।।
**ಮುಟ್ಟಲಿಲ್ಲ** ವ್ಯಯವಾಗುತಿಹುದು ಧನವು। ಸತಿಸುತ ಪರಿವಾರವು।।
ಬಿಟ್ಟಗಲದೆ ಸೇವೆಯ ಮಾಡುವ ಜನವು। ಭಕ್ತರ ಸಮುದಾಯವು।।
ದಟ್ಟಿಸಿ ಮನೆಯೊಳಗಾಗುದು ಪ್ರತಿದಿನವು। ಮೃಷ್ಟಾನ್ನ ಭೋಜನವು।।

ಎಂದು ಅವರ ಮರಿಮಗ ಶ್ರೀಪತಿತನುಜರು ತಮ್ಮ ಮುತ್ತಜ್ಜರ ದಿನಚರಿಯನ್ನು ಚಿತ್ರಿಸುತ್ತಾರೆ. ಪ್ರತಿದಿನ ನೂರಾರು ಜನ ಸಂತರಿಗೆ, ಬ್ರಾಹ್ಮಣರಿಗೆ, ಮೃಷ್ಟಾನ್ನ ಭೋಜನವಾಗುತ್ತಿತ್ತು. ಆದರೆ ಹೇಗೆ ಆಗುತ್ತಿತ್ತು ಎಂಬುದು ಯಾರಿಗೂ ತಿಳಿಯುತ್ತಿರಲಿಲ್ಲ. ಅಂದಿನ ಖರ್ಚು ಅಂದಿಗೆ ಸರಿಯಾಗುತ್ತಿತ್ತು. ಮರುದಿನದ ಚಿಂತೆ ರಾಯರಿಗೂ ಇಲ್ಲ. ಮನೆಯವರಿಗೂ ಇಲ್ಲ. ಬಂದವರಿಗಂತೂ ಇರಲೇ ಇಲ್ಲ!

ಸಾರವಾಡದಿಂದ ವಿಜಾಪೂರಕ್ಕೆ ಬಂದು ನೆಲೆಸಿದ ಮೇಲೆ ವರುಷಾರು ತಿಂಗಳುಗಳಲ್ಲಿ ಅವರಿಗೆ ಪುತ್ರ ಸಂತಾನ ಲಾಭವೂ ಆಯಿತು. ಗೋಕುಲಾಷ್ಟಮಿಯ ದಿನ ರಾಯರ ಹೆಂಡತಿ ತಿಮ್ಮವ್ವ ಅವಳಿ-ಜವಳಿ ಮುದ್ದಾದ ಎರಡು ಗಂಡುಮಕ್ಕಳಿಗೆ ಜನ್ಮವಿತ್ತಳು. ಒಬ್ಬನಿಗೆ ದೇವರಾಯನೆಂದು ಇನ್ನೊಬ್ಬನಿಗೆ ಕೃಷ್ಣರಾಯನೆಂದು ಹೆಸರಿಟ್ಟರು.//೪೬//

ವಿಜಾಪುರದಲ್ಲಿ ರಾಜಕೀಯ ಅಸ್ಥಿರತೆ ಸಂಭವಿಸುವವರೆಗೂ ಮಹಿಪತಿರಾಯರು, ನಗರದಲ್ಲಿಯೇ ಉಳಿದು ತಮ್ಮ ಸಾಧನೆಯಲ್ಲಿ ನಿರತರಾಗಿದ್ದರು. ರಾಜಕಾರಣದ ಸಂಬಂಧವನ್ನು ಅವರು ಆ ಮೊದಲೇ ಕಳಚಿಕೊಂಡಿದ್ದರು. ಜಾತಿ, ಮತ, ಪಂಥಗಳ ಭೇದವಿಲ್ಲದೆ ಪರಮಾತ್ಮನ ಕುರಿತು ಚಿಂತಿಸುವವರೆಲ್ಲ ಒಂದೇ ಜಾತಿಯವರು. ಮನುಷ್ಯ ಕುಲ ಒಂದು ಎಂಬ ಭಾವನೆಯಿಂದ ಅವರು ಎಲ್ಲರೊಡನೆ ಹೊಂದಿಕೊಂಡಿದ್ದರು. ಆಧ್ಯಾತ್ಮ ಸಾಧನೆಗೆ, ಚರ್ಚೆಗೆ ಅವರ ಹತ್ತಿರ ಎಲ್ಲ ಮತದವರೂ ಬರುತ್ತಿದ್ದರು. ಸೂಫಿ ಸಂತರು, ಅವಧೂತರು, ಶೈವರು ವೈಷ್ಣವರಾದಿಯಾಗಿ ಎಲ್ಲ ಮತದವರು, ಕನ್ನಡ, ಮರಾಠಿ, ತೆಲಗು, ದಖಿಣಿ ಭಾಷೆಯವರು ಅವರ ಹತ್ತಿರ ಬರುತ್ತಿದ್ದರು. ಅಂತೆಯೇ ಅವರು ಹೇಳುವಂತೆ,

'ಸಮಜೋ ಭಾಯಿ ಸಕುನಾ ಚಾರೋ
ತೆಲುಗು ಕನ್ನಡ ತುರುಕಾರೇ ಒಂದೇಸುಖ।।

ಎಂಬಂತೆ, ಅಂತಿಮ ಗುರಿ ಒಂದೇ, ದಾರಿ ಭಿನ್ನ ಅಷ್ಟೇ ಎಂಬುದು ಅವರ ಸಂದೇಶ.

ಕ್ರಿ.ಶ. ೧೬೮೬ ರಲ್ಲಿ ಔರಂಗಜೇಬನು ವಿಜಾಪುರವನ್ನು ಅಂತಿಮವಾಗಿ ವಶಪಡಿಸಿಕೊಂಡು ಹೈದರಾಬಾದ ಸುಬೆಗೆ ಸೇರಿಸಿದ. ತಿಂಗಳು ಗಟ್ಟಲೆ ನಡೆದ ಯುದ್ಧದಲ್ಲಿ ಮಡಿದ ಸಾವಿರಾರು ಯೋಧರು. ಹೊಟ್ಟೆಗಿಲ್ಲದೆ ಮಡಿದ ನಾಗರಿಕರು, ಅದರೊಂದಿಗೆಯೇ ಬಂದ ಬರಗಾಲ ಹಾಗೂ ಪ್ಲೇಗ ಬೇನೆಗಳಿಂದ ಮಹಿಪತಿರಾಯರು ವಿಜಾಪುರದಲ್ಲಿ ಉಳಿಯುವುದು ಕಷ್ಟವಾಯಿತು. ಆದ್ದರಿಂದ ವಿಜಾಪುರವನ್ನು ಬಿಟ್ಟು ಕಲಬುರ್ಗಿ ಜಿಲ್ಲೆಯ ಶಹಪುರಕ್ಕೆ ಹೋಗಿ ನೆಲೆಸಿದರು. ವಿಜಾಪುರದಿಂದ ಪೂರ್ವಕ್ಕೆ ಸುಮಾರು ೧೨೦ ಕಿಲೋಮೀಟರು ಅಂತರದಲ್ಲಿದ್ದ ಶಹಪುರವು ಅಂದಿನ ದಿನಗಳಲ್ಲಿ ಸುರಪುರದ ನಾಯಕನ ಆಳ್ವಿಕೆಯಲ್ಲಿ ಇತ್ತು.

ಶಹಪುರದ ಸಮೀಪದಲ್ಲಿರುವ ಮಂದಾಕಿನಿ ಸರೋವರ, ಆ ಸರೋವರದ ದಂಡೆಗೆ ಒಂದು ಗುಡ್ಡ. ಆ ಗುಡ್ಡದ ಒಂದು ಗುಹೆಯಲ್ಲಿ ಮಹಿಪತಿರಾಯರು ಮೂರು ವರುಷ ವಾಸಿಸಿದರು. ನಿತ್ಯ ಸರೋವರದಲ್ಲಿ ಮಿಂದು, ಅರ್ಘ್ಯವನ್ನಿತ್ತು ಅನುಷ್ಠಾನ ಮಾಡುತ್ತಿದ್ದರು. ಮಂದಾಕಿನಿ ಸರೋವರದ ದಂಡೆಯ ಮೇಲೆ ಪ್ರಾಣದೇವರ ಪ್ರತಿಷ್ಠಾಪನೆಯನ್ನು ಮಾಡಿದರು. ಮುಂದಿನ ದಿನಗಳಲ್ಲಿ ಮಹಿಪತಿರಾಯರು ವಿಜಾಪುರ ಜಿಲ್ಲೆಯ ಕಾಖಂಡಕಿಯಲ್ಲಿ ನೆಲೆಸಿ ಪ್ರಸಿದ್ಧರಾದ್ದರಿಂದ, ಶಹಪೂರದ ಮಂದಾಕಿನಿ ಸರೋವರದ ದಂಡೆಯ ಮೇಲೆ ಅವರು ಪ್ರತಿಷ್ಠಾಪಿಸಿದ ಹನುಮಂತ ದೇವರಿಗೆ ಇಂದಿಗೂ 'ಕಾಖಂಡಕೀಶ' ಎಂದು ಕರೆಯುತ್ತಾರೆ. ಅವರು ನಿತ್ಯ ಅನುಷ್ಠಾನ ಮಾಡುತ್ತಿದ್ದ ಸರೋವರದ ದಂಡೆಯ ಗುಡ್ಡಕ್ಕೆ 'ಮಹಿಪತಿರಾಯರ ದಿನ್ನೆ' ಎಂದು ಕರೆಯುವ ರೂಢಿಯೂ ಇದೆ.

ಶಹಪುರದಲ್ಲಿ ಮಹಿಪತಿರಾಯರು ಮೂರು ವರುಷ, ತಪಸ್ಸು-ಸಾಧನೆ ಮಾಡಿ ಮರಳಿ ತಮ್ಮ ಊರು ವಿಜಾಪುರಕ್ಕೆ ಬಂದರು //೪೭// ಆದರೆ ಈ ಮೂರು ವರುಷಗಳಲ್ಲಿ ವಿಜಾಪುರವು ಯುದ್ಧ, ಬರ ಹಾಗೂ ಪ್ಲೇಗ ಬೇನೆಗಳಿಂದ ಲಕ್ಷಾವಧಿ ಜನರನ್ನು ಕಳೆದುಕೊಂಡು ಹಾಳು ಸುರಿಯುತ್ತಿತ್ತು. ಅಂಥಲ್ಲಿಯೇ ಉಳಿದುಕೊಳ್ಳುವ ವ್ಯವಸ್ಥೆಯನ್ನು ಮಾಡುವಷ್ಟರಲ್ಲಿ ಕಾಖಂಡಕಿ ಗ್ರಾಮದ ಕರಣಿಕರು ಮಹಿಪತಿರಾಯರನ್ನು ಕಂಡು ತಮ್ಮಲ್ಲಿ ಬಂದು ನೆಲೆಸಲು ವಿನಂತಿಸಿಕೊಂಡರು. //೪೮// ಅವರ ವಿನಂತಿಯನ್ನು ಮಾನ್ಯ ಮಾಡಿ ರಾಯರು ಕಾಖಂಡಕಿಗೆ ಹೋಗಿ ಕರಣಿಕರು ಕೊಟ್ಟ ಮನೆಯಲ್ಲಿ ಬಿಡಾರ ಮಾಡಿದರು. ಆದರೆ ನಿತ್ಯಾನುಷ್ಠಾನಕ್ಕೆ ಆ ಮನೆಯು ಅನುಕೂಲವಾಗಿರಲಿಲ್ಲ. ಸೂಕ್ತ ಸ್ಥಳವನ್ನು ಹುಡುಕುತ್ತಿದ್ದಾಗ ಗ್ರಾಮದ ಪಟೇಲರು ಬಂದು ಊರ ಮುಂದಿನ ತಮ್ಮ ತೋಟದಲ್ಲಿ ಬೇಕಿದ್ದರೆ ತಮ್ಮ ಅನುಷ್ಠಾನಕ್ಕೆ ತಕ್ಕ ಸ್ಥಳವನ್ನು ಆರಿಸಬೇಕೆಂದು ಸೂಚಿಸಿದರು. ರಾಯರು ತೋಟದಲ್ಲಿಯ ಒಂದು ಶಮೀ ವೃಕ್ಷದ ಅಡಿಭಾಗವನ್ನು ತಮ್ಮ ಅನುಷ್ಠಾನಕ್ಕಾಗಿ ಗೊತ್ತುಪಡಿಸಿದರು. ಪಟೇಲರಿಗೆ ಸಂತೋಷವಾಯಿತು. ಅಂದಿನಿಂದ ರಾಯರು ಗೌಡರ ತೋಟದ ಶಮೀವೃಕ್ಷದ ಅಡಿಯಲ್ಲಿಯೇ ದಿನದ ಬಹುಭಾಗವನ್ನು ಕಳೆಯಹತ್ತಿದರು.

ಇಬ್ಬರು ಮಕ್ಕಳಲ್ಲಿ ದೇವರಾಯನು ಕ್ಷಾತ್ರತೇಜದಿಂದ ಜಾಲವಾದಿಯ ದೇಸಗತಿಯನ್ನು ಸಂಪಾದಿಸಿ ಅಲ್ಲಿಯೇ ಉಳಿದನು. ಕೃಷ್ಣರಾಯರು ತಂದೆಯ ದಾರಿಯನ್ನು ತುಳಿದು ಆಧ್ಯಾತ್ಮ ಚಿಂತನೆ ಮಾಡುತ್ತ ಕಾಖಂಡಕಿಯಲ್ಲಿಯೇ ಉಳಿದು ತಂದೆ ತಾಯಿಗಳ ಸೇವೆಯನ್ನು ಮಾಡುತ್ತಿದ್ದರು.

ಮಹಿಪತಿರಾಯರು ಕಾಖಂಡಕಿಯಲ್ಲಿ ಸುಮಾರು ಹತ್ತು ಹದಿನೈದು ವರುಷ ಕಾಲ ಇದ್ದರೆನ್ನಬಹುದು. ಆ ಹೊತ್ತಿಗೆ ಅವರ ಕೀರ್ತಿ ಸುತ್ತಲೆಲ್ಲ ಪಸರಿಸಿತ್ತು. ಕನ್ನಡ ಚರಿತ್ರೆಯಲ್ಲಿ, ಸಂಸ್ಕೃತ ಸ್ತೋತ್ರದಲ್ಲಿ ಹಾಗು ಪರಂಪರೆಯಿಂದ ಕೇಳಿ ಬಂದ ಕಥೆಗಳಲ್ಲಿ ಅವರು ಮಾಡಿದರೆನ್ನಲಾದ ಅನೇಕ ಪವಾಡಗಳನ್ನು ಹೇಳುತ್ತಾರೆ. ಆದರೆ ಮಹಿಪತಿರಾಯರು ಸ್ವತ: ಪವಾಡಗಳಿಗೆ ವಿರೋಧವಾಗಿದ್ದರು. ಅಂತೆಯೇ ಅವರ ಅತ್ತಿಗೆ ತುಕ್ಕವ್ವ ಕಾಡಿ ಬೇಡಿ ಒಂದು ಪವಾಡ ಮಾಡಿತೋರಿಸಲು ಕೇಳಿಕೊಂಡಳೆಂದೂ, ಮರೆದೆಪ್ಪನ ಸೊಸೆಯನ್ನು ಬದುಕಿಸಿದ ಪವಾಡವನ್ನು ಕನ್ನಡ ಚರಿತ್ರೆಯಲ್ಲಿ ಅವರ ಮರಿಮಗ ಹೇಳುತ್ತಾರೆ. //೪೯// ಅದೇನಿದ್ದರೂ ಅವರ ಪ್ರಸಿದ್ಧಿ ಮಾತ್ರ ಸುತ್ತಲಿನ ಪರಿಸರದಲ್ಲಿ ಸಾಕಷ್ಟಾಗಿತೆಂದು ಅವರ ಮಕ್ಕಳ ಮೊಮ್ಮಕ್ಕಳ ಮತ್ತು ಇತರರ ಕೃತಿಗಳಿಂದ ಊಹಿಸಬಹುದಾಗಿದೆ. ಪ್ರತಿನಿತ್ಯ ನೂರಾರು ಜನರು ಅವರನ್ನು ಕಾಣಲು ಬರುತ್ತಿದ್ದರು. ದಿನದಿಂದ ದಿನಕ್ಕೆ ಭಕ್ತರ ಸಂಖ್ಯೆ ವರ್ಧಿಸುತ್ತಿತ್ತು. ಬಂದ ಜನರಿಗೆಲ್ಲ ಮೃಷ್ಟಾನ್ನ ಭೋಜನ, ಅತಿಥಿ ಸತ್ಕಾರ ಎಡೆಬಿಡದೆ

ನಡೆಯುತ್ತಿತ್ತು. 'ಕಾಖಂಡಕಿಯ ದೊನ್ನೆಯಲ್ಲಿ ತುಪ್ಪ'ದ ಪ್ರಸಿದ್ಧಿಯನ್ನು ಈಗಲೂ ಹಳೆಯ ತಲೆಮಾರಿನ ಜನ ಹೇಳುತ್ತಾರೆ. ಮಹಿಪತಿರಾಯರು ಪ್ರತಿವರುಷ ನವರಾತ್ರಿಯ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಉತ್ಸವದ ವರ್ಣನೆಯನ್ನು ಕಣ್ಣಾರೆ ಕಂಡ ಅವರ ಮಗ ಕೃಷ್ಣರಾಯರು ತಮ್ಮ ಒಂದು ಕೀರ್ತನೆಯಲ್ಲಿ ಸೊಗಸಾಗಿ ಹೇಳಿದ್ದಾರೆ.

'ಏನೆಂದು ಉಸುರುವೆ ಈ ನವರಾತ್ರಿಯಾ।
ಸ್ವಾನಂದ ಸುಖಮಯ ಶ್ರೀಮಹಿಪತಿಚರ್ಯಾ॥

ಎಂದು ಪ್ರಾರಂಭವಾಗುವ ೧೧ ನುಡಿಗಳ ಕೀರ್ತನೆಯಲ್ಲಿ ಅಶ್ವೀನ ಶುದ್ಧ ಪ್ರತಿಪದೆಯಿಂದ ಮಹಾನವಮಿ - ದಸರೆಯವರೆಗೆ ನಡೆದ ಉತ್ಸವದ ವರ್ಣನೆ ಇದೆ.
//೫೦//

ನವದಾತ್ರಿ ಇನ್ನೂ ಹತ್ತೆಂಟು ದಿನಗಳಿರುವಾಗಲೇ ಸಿದ್ಧತೆ ಪ್ರಾರಂಭವಾಗುತ್ತಿತ್ತು. ಊರ ಜನರೆಲ್ಲ ಕೂಡಿಕೊಂಡು ರಾಯರ ಮನೆಯನ್ನು ಶೃಂಗಾರ ಮಾಡುತ್ತಿದ್ದರು. ಬಾಗಿಲು ಗೋಡೆಗಳಿಗೆ ಬಣ್ಣ ಬಳಿದು ಚಿತ್ರ ಬಿಡಿಸುತ್ತಿದ್ದರು. ಮಾವಿನ ತಳಿರನ್ನು ಕಟ್ಟುತ್ತಿದ್ದರು. ದೇವರ ಜಗಲಿಯ ಸುತ್ತಲೂ ಬಾಳೆಯ ಕಂಭಗಳನ್ನು ಕಟ್ಟಿ ಮಂಟಪವನ್ನು ತರಗು -ತೆಂಗು ಉತ್ತತ್ತಿ ಬಹು ಫಲಗಳಿಂದ ಶೃಂಗರಿಸುತ್ತಿದ್ದರು.

ಸಡಗರದಿಂದ ಅಡುಗೆ ಮಾಡಲು ಕಡಲಿ, ಅಕ್ಕಿ-ಗೋಧಿ ಬೆಲ್ಲ ಸಕ್ಕರೆಯಲ್ಲದೆ ಕೊಡ-ಕೊಡ ತುಪ್ಪತಂದು ಉಗ್ರಾಣದಲ್ಲಿ ಸಂಗ್ರಹಿಸುತ್ತಿದ್ದರು. ದೃಢ ಭಕ್ತಿಯುಳ್ಳ ಹಲವಾರು ಭಕ್ತರು ಸದಾ ಸೇವೆಗೆ ನಿಂತಿರುತ್ತಿದ್ದರು. ಈ ಹಬ್ಬವನ್ನು ನೋಡಲು ಶರಣರು, ಸಂತರು ಸಾಮಾನ್ಯರು ನಾಲ್ಕೂ ದಿಕ್ಕುಗಳಿಂದ ಬಂದಿರುತ್ತಿದ್ದರು.

ಮೊದಲನೆಯ ದಿನ ಉದಯದಲ್ಲಿ ಸದ್ಗುರುನಾಥನು ಎದ್ದು ಮಂಗಳಸ್ನಾನಮಾಡಿ ವಿದಿತ ಹಂಸಧ್ಯಾನ, ಜಪಾನುಷ್ಠಾನಗಳನ್ನು ಮಾಡಿ ಪೂಜೆಗೆ ಕುಳಿತುಕೊಳ್ಳುತ್ತಿದ್ದರು. ಬಂಗಾರದ ಎಲೆಗಳನ್ನು ಹಚ್ಚಿದ ದೇವರ ಮಣೆ, ಅದರ ಹಿಂದೆ ಬೆಳ್ಳಿಯ ಪೀಠ ಪ್ರಭಾವಳಿ, ಅಲ್ಲಿ ಬಹು ವಿಸ್ತಾರವಾದ ಚಿತ್ರಗಳು. ಎಡ ಬಲದಲ್ಲಿ ಹೊನ್ನಕೇತಕಿಯ ಧ್ವಜಗಳು. ಮಧ್ಯ ಸಂಪುಟದಲ್ಲಿ 'ಪೊಡವೀಶ' ಕುಳಿತಿರುತ್ತಿದ್ದ. ಆ ಶ್ರೀಹರಿಯ ಪೂಜೆಯ ಸಂಭ್ರಮವನ್ನು ಹೇಳಲು ಸಾಧ್ಯವಿಲ್ಲವೆಂದು ಹೇಳುತ್ತ, ಪೂಜೆಯ ವಿಸ್ತಾರವನ್ನು ಮೂರು ನುಡಿಗಳಲ್ಲಿ ಹೇಳುತ್ತಾರೆ. ಅನಂತರ ಗುರುಪೂಜೆ.

'ತರುವಾಯ ಮಹಾಗುರು ತಂದಿಗೆ ಶರಣರು।
ಮೆರೆವ ಷೋಡಶದಿಂದಾ ಮಾಡಿ ಪೂಜೆಯ ಛಂದಾ।
ಹರಿತೀರ್ಥ ಕೊಳ್ಳಲು ಹರುಷದಿ ಜನಗಳು।

ಪೊರಗ ಸತ್ಕಾರವ ಪಡದಿಹ ಭೂದೇವ।
ರರು ವೇದ ಘೋಷವ ಮಾಡುತ ಭಾಷವ।
ಅರಿತು ಸಕಲರಿಗೆ ಯಡೆ ಮಾಡಿಕೊಳ್ಳಿರೆ।
ಪರಮಾನ್ನ ಭಕ್ಷಗಳು ಶಾಲ್ಯೋದನ।
ಪರಿ ಪರಿ ಶಾಖಗಳು ಸೂಪ ಘೃತ।
ನೆರೆ ಪಾಲ್ಮೊಸರುಗಳು ಅಲ್ಲಿಗಲ್ಲಿ
ಗಿರಿಸಿಹ ದೀಪಗಳು।। ನಮ್ಮಯ್ಯನಾ ।।೯।।

ಹೀಗೆ ಒಂಭತ್ತು ದಿನ ನಡೆವ ಉತ್ಸವ ಮಹಾನವಮಿ ಹಾಗೂ ವಿಜಯ ದಶಮಿಯಂದು ತನ್ನ ಪರಾಕಾಷ್ಠೆಯನ್ನು ಮುಟ್ಟುತ್ತಿತ್ತು.

ಪುಣೆಯ ಆರ್ಕೈವ್ಸದಲ್ಲಿ ದೊರೆತ ಒಂದು ಕಾಗದದ ಪ್ರಕಾರ 'ಶ್ರೀಮಹಿಪತಿ ಸ್ವಾಮೀ ಸಂಸ್ಥಾನ' ಎಂದು ಕರೆದಿದೆ. ಖವಾಸಖಾನ ದೇಶಮುಖಿನ ಸಮಸ್ತ ಆಸ್ತಿಯೂ ಈ ಸಂಸ್ಥಾನಕ್ಕೆ ಸೇರಿತ್ತು. ಖವಾಸಖಾನನ ಭೂಮಿಗಳು ಮುಳವಾಡ, ಸಾರವಾಡ, ಮಸೂತಿ ಹಾಗೂ ಹೊನಗನಹಳ್ಳಿಗಳಲ್ಲಿಯ ಆಸ್ತಿಯೆಲ್ಲ ಶ್ರೀ ಮಹಿಪತಿಸ್ವಾಮಿ ಸಂಸ್ಥಾನಕ್ಕೆ ಸೇರಿದ್ದವುಗಳೆಂದು ಈ ಕಾಗದ ಹೇಳುತ್ತದೆ. //೫೧//

ಮಕ್ಕಳು ಬೆಳೆದಂತೆ ಅವರಲ್ಲಿ ಕೃಷ್ಣರಾಯರು ತಂದೆಯ ದಾರಿಯಲ್ಲಿ ನಡೆದು ಯೋಗಸಾಧನೆ ಮಾಡಿ - ಹರಿದಾಸರಾಗಿ ಅನೇಕ ಕೃತಿಗಳನ್ನು ರಚಿಸಿದರು. ಜಾಲವಾದಿಯ ದೇಸಗತಿಯನ್ನು ಸಂಪಾದಿಸಿದ ದೇವರಾಯರು ಡೋಣೆ -ಶಿವಾಜಿ ಎಂದು ಪ್ರಖ್ಯಾತರಾದರು. ಉಭಯ ಮನೆತನಗಳು ಇಂದಿಗೂ ಉಳಿದುಕೊಂಡು ಬಂದಿವೆ.//೫೨// ಕಾಖಂಡಕಿ, ಹರಿದಾಸ, ಜಾಲವಾದಿ, ಕೊಲ್ಹಾರ, ಇತ್ಯಾದಿ ಅಡ್ಡ ಹೆಸರುಗಳನ್ನು ಇಟ್ಟುಕೊಂಡಿದ್ದಾರೆ.

ಮಹಿಪತಿರಾಯರು ಕ್ರಿ.ಶ. ಸು. ೧೭೦೫ ರಲ್ಲಿ ಕಾರ್ತೀಕ ಮಾಸದ ಅಮವಾಸ್ಯೆಯಂದು ಕೃಷ್ಣೆಯ ದಡದ ಕೊಲ್ಹಾರ ಗ್ರಾಮದಲ್ಲಿ ಕಾಲವಾದರು.//೫೩//

## ೪.೪ ವೃಂದಾವನಸ್ಥ ರಾಯರು

ಮಹಿಪತಿರಾಯರು ಕೊನೆಯ ಉಸಿರನ್ನು ಎಳೆದದ್ದು ಕೃಷ್ಣಾನದಿಯ ದಂಡೆಯ ಮೇಲಿನ ಕೊಲ್ಹಾರಗ್ರಾಮದಲ್ಲಿ ಎಂದು ಪರಂಪರೆಯಿಂದ ಹೇಳಿಕೊಳ್ಳುತ್ತ ಬಂದಿದ್ದಾರೆ. ಅವರ ಪಾರ್ಥಿವ ಶರೀರವನ್ನು ದಹನ ಮಾಡಿದ ಸ್ಥಳ ಎಂದು ಗುರುತಿಸುವ ಸ್ಥಳದಲ್ಲಿ ಒಂದು ವೃಂದಾವನವನ್ನು ಕಟ್ಟಿದ್ದಾರೆ. ಆದರೆ ಸಂಪ್ರದಾಯದ ಪ್ರಕಾರ ಗೃಹಸ್ಥರಿಗೆ ವೃಂದಾವನವನ್ನು ಕಟ್ಟಿದ ಉಲ್ಲೇಖ ಎಲ್ಲಿಯೂ

ದೊರೆಯುವುದಿಲ್ಲ. ಅದರಲ್ಲೂ ಮಾಧ್ವ ವೈಷ್ಣವರಲ್ಲಿ ಗೃಹಸ್ಥರಿಗೆ ವೃಂದಾವನ ನಿಷೇಧವಿದೆ. ಹಿರಿಯರಿಂದ ಕೇಳಿಬಂದ ವಿಷಯ ಹಾಗೂ ಇಂದು ಕಾಖಂಡಕಿಯ ಹರಿದಾಸರು ನಂಬಿರುವಂತೆ ಮಹಿಪತಿರಾಯರು ಸಂನ್ಯಾಸಿಗಳಲ್ಲ. ಅವರು ಗೃಹಸ್ಥ ಜೀವನವನ್ನು ನಡೆಸಿ, ಗೃಹಸ್ಥರಾಗಿಯೇ ಕಾಲವಾದರು. ಅವರ ನೆನಪಿನಲ್ಲಿ ಈಗ ಪೂಜೆಗೊಳ್ಳುತ್ತಿರುವುದು ಅವರ ವೃಂದಾವನವಲ್ಲ! ತುಳಸಿ ವೃಂದಾವನ ಎಂದು ಹೇಳುತ್ತಾರೆ.!! ಇದನ್ನು ನಂಬುವದು ತುಸು ಕಷ್ಟವೆನಿಸುತ್ತದೆ. ತುಳಸಿ ವೃಂದಾವನಕ್ಕೆ ಸಾಲಂಕೃತ ಪೂಜೆ, ಮುದ್ರಾಧಾರಣೆ, ತುಳಸೀ ಮಾಲೆ ಅಪರೂಪದ್ದೆಂದೇ ಹೇಳಬಹುದು.

ಹೆಸರಾಂತ ಗೃಹಸ್ಥರು ಕಾಲವಾದಾಗ ಅವರ ನೆನೆಪಿಗೆಂದು ಅವರು ಬಳಸಿದ ವಸ್ತುಗಳನ್ನು, ಅವರು ವಾಸಿಸುತ್ತಿದ್ದ ಸ್ಥಳವನ್ನು, ವಿಶೇಷವಾಗಿ ತಮ್ಮ ಅನುಷ್ಠಾನಕ್ಕೆ ಬಳಸುವ ಸ್ಥಳವನ್ನು ಸ್ಮಾರಕವಾಗಿ ಉಳಿಸಿಕೊಂಡು ಬಂದುದನ್ನು ಕಾಣುತ್ತೇವೆ. ಉಳಿದ ಹರಿದಾಸರ ಕುರಿತು ನೋಡಿದಾಗ ನಾಡಿನ ಖ್ಯಾತ ಹರಿದಾಸರಾದ ಪುರಂದರ ದಾಸರಿಗೆ ಹಂಪೆಯಲ್ಲಿ ಪುರಂದರ ಮಂಟಪವಿದ್ದರೆ, ಪಂಢರಪುರದಲ್ಲಿ ಒಂದು ಕಂಭವನ್ನು ತೋರಿಸುತ್ತಾರೆ. ಪ್ರಸನ್ನ ವೆಂಕಟಾದಾಸರಿಗೆ ಬಾದಾಮಿಯಲ್ಲಿ ಅವರು ಕುಳಿತುಕೊಳ್ಳುವ ಕಟ್ಟೆ ಇದೆ. ಅವರು ಉಪಯೋಗಿಸಿದ ತಾಳ ತಂಬೂರಿಗಳನ್ನು, ಪೂಜಿಸಿದ ದೇವರುಗಳನ್ನು ಬಾಗಲಕೋಟೆಯ ಅವರ ಮನೆಯಲ್ಲಿ ತೋರಿಸುತ್ತಾರೆ. ವಿಜಯದಾಸರ ಕುರಿತು ಅವರ ಹುಟ್ಟೂರಾದ ಚೀಕಲಪರಿವೆಯಲ್ಲಿ ಅವರು ಅನುಷ್ಠಾನಕ್ಕೆ ಕುಳಿತುಕೊಳ್ಳುತ್ತಿದ್ದ ಅಶ್ವತ್ಥ ವೃಕ್ಷದ ಕಟ್ಟೆಯನ್ನು, ಅವರು ವಾಸಿಸುತ್ತಿದ್ದ ಮನೆಯನ್ನು ಅಲ್ಲಿ ಅವರು ಕಾಶಿಯಿಂದ ಹೊತ್ತುತಂದ ಸಾಣೆಕಲ್ಲನ್ನು ತೋರಿಸುತ್ತಾರೆ. ಅದರಂತೆ ಜಗನ್ನಾಥದಾಸರಿಗೆ, ಅವರು ಕುಳಿತುಕೊಳ್ಳುತ್ತಿರುವ ಕಂಭಕ್ಕೆ ಪೂಜೆ ಇದೆ. ಹಿರೇಮಣ್ಣೂರಿನಲ್ಲೂ ಕೃಷ್ಣದ್ವೈಪಾಯನರ ಕಂಬ ಹೀಗೆ ಸ್ಮಾರಕಗಳಾಗಿವೆಯೇ ಹೊರತು ಎಲ್ಲಿಯೂ ವೃಂದಾವನವನ್ನು ಕಟ್ಟಿ ಪೂಜಿಸುವ ಸಂಪ್ರದಾಯವಿಲ್ಲ. ಇವರೆಲ್ಲ ಗೃಹಸ್ಥರಾಗಿದ್ದುಕೊಂಡು ಹರಿದಾಸರಾಗಿದ್ದವರು. ಆದರೆ ಮಹಿಪತಿರಾಯರಿಗೆ ಮಾತ್ರ ಕೊಲ್ಹಾರದ ಕೃಷ್ಣೆಯ ದಡದ ಮೇಲಲ್ಲದೆ, ಕಾಖಂಡಕಿಯಲ್ಲಿ ಕೂಡ ವೃಂದಾವನವನ್ನು ಕಟ್ಟಿದ್ದಾರೆ. ಪರಂಪರೆಯಿಂದ ಕೇಳಿಬರುವ ಕಥೆ ಹೀಗಿದೆ.

"ನನ್ನ ಅವಸಾನಕ್ಕೆ ಇನ್ನು ಕೇವಲ ಏಳುದಿನಗಳು ಮಾತ್ರ ಉಳಿದಿವೆ. ಗುರುಗಳ ದರ್ಶನಾರ್ಥವಾಗಿ ಕೊಲ್ಹಾರಕ್ಕೆ ಹೋಗೋಣ ನಡೆ." ಎಂದು ಕೃಷ್ಣರಾಯರನ್ನು ಕರೆದುಕೊಂಡು ಕೊಲ್ಹಾರಕ್ಕೆ ಹೋದರು. ಕೃಷ್ಣರಾಯರು ಈ ವಿಷಯವನ್ನು ತನ್ನ ಹಿರಿಯ ಸೋದರನಾದ ದೇವರಾಯನಿಗೆ ಹೇಳಿಕಳಿಸಿದರು. ದಾಸರು ಅಲ್ಲಿ ಮನೆತನದ ಗುರುಗಳಾದ ಉಮರ್ಜಿ ಆಚಾರ್ಯರನ್ನು ಕಂಡು, ಅವರ ಆಜ್ಞೆಯನ್ನು

ಪಡೆದುಕೊಂಡು ಕೃಷ್ಣಾಸ್ನಾನ ಮಾಡಿ, ನದೀ ತಟಾಕದಲ್ಲಿ ಅನುಷ್ಠಾನಕ್ಕೆ ಕುಳಿತರು. ಸರಿಯಾಗಿ ಏಳನೆಯ ದಿನ ಅಂದರೆ ಕಾರ್ತೀಕ ವದ್ಯ ಅಮಾವಾಸ್ಯೆಯ ದಿನ ಅವರು ಕಾಲವಾದರು.//೫೪//

ವಾಸ್ತವದಲ್ಲಿ ಮಹಿಪತಿರಾಯರಿಗೂ ಉಮರ್ಜಿ ಆಚಾರ್ಯರಿಗೂ ಶಿಷ್ಯ-ಗುರು ಸಂಬಂಧ ಇದ್ದ ಕುರಿತು ಮಹಿಪತಿರಾಯರಾಗಲೀ, ಅವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳಾಗಲೀ, ಎಲ್ಲಿಯೂ ದಾಖಲಿಸಿಲ್ಲ. ಕೊನೆಯ ಪಕ್ಷ ಗುರುಗಳಿಗೆ ಸಲ್ಲುವ ಮರ್ಯಾದೆಗೆಂದು ಉಮರ್ಜಿ ಆಚಾರ್ಯರ ಹೆಸರನ್ನಾಗಲೀ, ಅವರ ಮನೆತನದವರನ್ನಾಗಲಿ ತಮ್ಮ ಯಾವ ಒಂದು ಕೃತಿಯಲ್ಲಿ ಕೂಡ ಉಲ್ಲೇಖಿಸಿದ್ದು ಕಂಡು ಬರುವದಿಲ್ಲ. ಆದ್ದರಿಂದ ಮಹಿಪತಿರಾಯರಿಗೂ -ಕೊಲ್ಹಾರಕ್ಕೂ ಇರುವ ಸಂಬಂಧವು ಈ ಗುರು-ಶಿಷ್ಯರದಾಗಿರದೆ ಬೇರೊಂದು ಸಂಬಂಧ ಇರುವ ಸಾಧ್ಯತೆ ಇದೆ. ಕೊಲ್ಹಾರದಲ್ಲಿ ಅವರಿಗೆ ಉಂಬಳಿ ಹಾಕಿಕೊಟ್ಟ ಭೂಮಿಗಳಿದ್ದವು. ಈ ಮೊದಲು ನೋಡಿದಂತೆ ಖಿವಾಸಖಾನನ ಅನೇಕ ಭೂಮಿಗಳು 'ಶ್ರೀಮಹಿಪತಿ ಸ್ವಾಮಿ ಸಂಸ್ಥಾನ'ಕ್ಕೆ ಸೇರಿದ್ದವು. ಅದರಂತೆ ಇನ್ನುಳಿದ ಸಮಕಾಲೀನ ಹಿಂದು ಸರದಾರರು ಮಹಿಪತಿರಾಯರಿಗೆ ಅನೇಕ ದತ್ತಿಗಳನ್ನು ಹಾಕಿಕೊಟ್ಟ ಉಲ್ಲೇಖಗಳು ದೊರೆಯುತ್ತವೆ. ಅವರುಗಳಲ್ಲಿ ನಿಂಬಾಳದ ನಾಡಗೌಡರು ಪ್ರಮುಖರು.

ನಿಂಬಾಳದ ನಾಡಗೌಡನಿಗೆ ಎರಡನೆಯ ಅಲಿ ಆದಿಲಶಹನು ನಾಡಗೌಡಕಿಯ ವತನನ್ನು ಹಾಕಿಕೊಟ್ಟ ಉಲ್ಲೇಖ ದೊರೆಯುತ್ತದೆ.//೫೫// ಮುಂದಿನ ದಿನಗಳಲ್ಲಿ ಔರಂಗಜೇಬನು ವಿಜಾಪೂರವನ್ನು ವಶಪಡಿಸಿಕೊಂಡ ಅನಂತರ ಕೂಡ ಇಲ್ಲಿಯ ಆಡಳಿತಕ್ಕೆ ಅನುಕೂಲವಾಗಲು ರಾಜ್ಯವ್ಯವಸ್ಥೆಗೆ ಸ್ಥಳೀಯರೇ ಇರುವುದು ಯೋಗ್ಯವೆಂದು ತಿಳಿದುಕೊಂಡು ಅವರನ್ನೇ ಮರುನೇಮಕ ಮಾಡಿದನು.//೫೬// ಹೀಗೆ ನಿಂಬಾಳದ ನಾಡಗೌಡರಿಗೆ ದೊರೆತ ವತನದಲ್ಲಿ ಅನೇಕ ಹಳ್ಳಿಗಳಿದ್ದವು. ಅವುಗಳಲ್ಲಿ ಕೆಲವು ಹಳ್ಳಿಗಳಲ್ಲಿಯ ಭೂಮಿಗಳನ್ನು 'ಶ್ರೀಮಹಿಪತಿಸ್ವಾಮಿ ಸಂಸ್ಥಾನ'ಕ್ಕೆ ನಿಂಬಾಳದ ನಾಡಗೌಡರು ಉಂಬಳಿ ಹಾಕಿಕೊಟ್ಟಿದ್ದಾರೆ. ಕಾಖಂಡಕಿಯಲ್ಲಿ ಇಂದು ಮಹಿಪತಿರಾಯರ ಮನೆತನದವರು ಉಪಭೋಗಿಸುವ ಭೂಮಿಗಳೆಲ್ಲ ನಿಂಬಾಳದ ನಾಡಗೌಡರಿಗೆ ಸೇರಿದವುಗಳಾಗಿವೆ. ಅದರಂತೆ ಕೊಲ್ಹಾರದಲ್ಲಿಯೂ ಕೆಲವು ಭೂಮಿಗಳನ್ನು ಈ ಸಂಸ್ಥಾನಕ್ಕೆ ಬಿಟ್ಟುಕೊಟ್ಟಿದ್ದರು. ಅವುಗಳಲ್ಲಿ ಕೊಲ್ಹಾರದ ಸರ್ವೇ ನಂಬರು ೧೧೬ ಹಾಗೂ ೧೧೭ ಈ ಎರಡು ಭೂಮಿಗಳನ್ನು ಮಹಿಪತಿರಾಯರ ವಂಶಸ್ಥರು ಇತ್ತೀಚಿನವರೆಗೂ ಉಪಭೋಗಿಸಿ ಮೊನ್ನೆ-ಮೊನ್ನೆಯಷ್ಟೇ ಮಾರಿದ್ದಾರೆ. ಆದ್ದರಿಂದ ಮಹಿಪತಿರಾಯರು ಕೊಲ್ಹಾರಕ್ಕೆ ಹೋಗುತ್ತಿದ್ದುದು ಬಹುಶಃ ಈ ಭೂಮಿಗಳ ಸಾಗುವಳಿಗಾಗಿ ಎಂದು ಊಹಿಸಲು ಅವಕಾಶವಿದೆ. ಮುಂದಿನ ದಿನಗಳಲ್ಲಿ ರಾಯರ ಮೊಮ್ಮಕ್ಕಳಲ್ಲಿಯ ಒಬ್ಬರಾದ

ಯತಿರಾಯರು ಕೊಲ್ಹಾರದಲ್ಲಿಯೇ ನೆಲೆಸಿದರು. ಅವರ ಮನೆತನ ಕೊಲ್ಹಾರದ ಅಯ್ಯನವರೆಂದೇ ಹೆಸರಾಗಿದೆ. ಹಾಗೆ ಕೊಲ್ಹಾರಕ್ಕೆ ಹೋದಾಗ ಅಲ್ಲಿಯೇ ವಾಸಿಸುತ್ತಿದ್ದ ಪ್ರಕಾಂಡ ಪಂಡಿತರು, ಮಧ್ವಶಾಸ್ತ್ರ ಪ್ರವೀಣರೂ ಆದ ಉಮರ್ಜಿ ಪ್ರಲ್ಹಾದಕೃಷ್ಣಾಚಾರ್ಯರನ್ನು ಕಾಣುವ ಸಾಧ್ಯತೆ ಇದೆ. ಸಮಾನ ಮನಸ್ಕರಾದ ಉಭಯತರು ಆಗೀಗ ಶಾಸ್ತ್ರಗಳನ್ನು ಚರ್ಚಿಸುತ್ತಿರಲೂ ಸಾಧ್ಯವಿದೆ. ಒಂದು ಸಲ ಹೀಗೆಯೇ ಕೊಲ್ಹಾರಕ್ಕೆ ಹೋದಾಗ ಅವರು ಅಲ್ಲಿಯೇ ಕಾಲವಾಗಿರುವ ಸಾಧ್ಯತೆಯೂ ಇದೆ.

"ಕೃಷ್ಣರಾಯರೂ ದೇವರಾಯರೂ ಕೂಡಿ ಅವರ ಉತ್ತರ ಕ್ರಿಯೆಗಳನ್ನು ನಡೆಸುತ್ತಿರುವಾಗ, ಆರಿಸಿದ ಅಸ್ಥಿಗಳು ನೀರಾಗಿ ಬಿಟ್ಟ ಚಮತ್ಕಾರ ಕಂಡಿತು. ಆಗ ಕೃಷ್ಣರಾಯರು ಚಿಂತೆ ಮಾಡುತ್ತಿರಲು ಅವರ ಸ್ವಪ್ನದಲ್ಲಿ ಮಹಿಪತಿದಾಸರು ಬಂದು 'ಮಗೂ ನೀನೇನೂ ಚಿಂತಿಸಬೇಡ ನನ್ನ ಅಸ್ಥಿಗಳು ಭಾಗೀರಥಿಯಲ್ಲಿ ಲೀನವಾಗಿವೆ' ಎಂದು ಹೇಳಿದರು. ಆದರೂ ಲೌಕಿಕ ರೀತಿಯಂತೆ ಕೃಷ್ಣರಾಯರಿಗೆ ಸಮಾಧಾನವಾಗದ್ದನ್ನು ಕಂಡು ಮತ್ತೆ ದಾಸರು ಮುಂದುವರಿಸಿದರು. ಗುರುಸಹವಾಸವಿದ್ದುದೇ ಕಾಶಿ. ನನ್ನ ವಿಯೋಗದಿಂದ ನೀನು ಎಳ್ಳಷ್ಟು ಚಿಂತೆ ಮಾಡಬೇಡ. ನಾನು ಕಾಖಂಡಕಿಯಲ್ಲಿ ಅನುಷ್ಠಾನ ಮಾಡುತ್ತಿದ್ದ ಶಮೀ ವೃಕ್ಷದ ಕೆಳಗೆ ದ್ವಾದಶ ಕ್ಷೇತ್ರಗಳ ಶಾಲಿಗ್ರಾಮಗಳಿವೆ. ಅವುಗಳನ್ನು ತೆಗೆದುಕೊಂಡು ಶ್ರೀಕ್ಷೇತ್ರ ಕಾಖಂಡಕಿಯಲ್ಲಿಯೇ ವೃಂದಾವನವನ್ನು ಸ್ಥಾಪಿಸಿ ಶ್ರೀಹರಿಯನ್ನು ಆರಾಧಿಸು ಎಂದು ಆಜ್ಞಾಪಿಸಿದರು." ಎಂದು ಶ್ರೀಪತಯ್ಯ ಹರಿದಾಸರು ಹೇಳುತ್ತಾರೆ.//೫೭//

ಆದರೆ ಮಹಿಪತಿರಾಯರು ತಮ್ಮ ನೆನಪಿಗೆಂದು ವೃಂದಾವನವನ್ನು ಸ್ಥಾಪಿಸಲು ಆಜ್ಞಾಪಿಸುವುದು ಸಾಧ್ಯವಿದೆಯೇ? 'ಗುರುಸಹವಾಸವಿದ್ದುದೇ ಕಾಶಿ' ಎಂದು ಹೇಳಿದ ಅವರು ಇಷ್ಟಪಟ್ಟಿದ್ದರೆ ಸಾರವಾಡದಲ್ಲಿ ಅಥವ ಕೊಲ್ಹಾರದಲ್ಲಿ ವೃಂದಾವನವನ್ನು ಕಟ್ಟಲು ಹೇಳುತ್ತಿದ್ದರು. ಈ ದೃಷ್ಟಿಯಿಂದ ಕೊಲ್ಹಾರದ ಕೃಷ್ಣಾನದಿಯ ದಂಡೆಯ ಮೇಲಿರುವ ಅವರ ವೃಂದಾವನ ಗಮನಾರ್ಹವೆನಿಸುತ್ತದೆ. ಆದರೆ ಅದನ್ನು ತೀರ ಇತ್ತೀಚೆಗೆ ಅಂದರೆ ಸುಮಾರು ೬೦-೭೦ ವರುಷಗಳಲ್ಲಿ ಕಟ್ಟಿದ್ದು ಎಂದು ಬಲ್ಲವರು ಹೇಳುತ್ತಾರೆ. ಆ ಮೊದಲು ಅಲ್ಲಿ ಒಂದು ಕಲ್ಲು ಇತ್ತೆಂದೂ, ಅದು 'ಕಾಖಂಡಕಿಯ ಮಹಿಪತಿದಾಸರ ಪಾರ್ಥಿವ ಶರೀರವನ್ನು ದಹನ ಮಾಡಿದ ಸ್ಥಳ' ಎಂಬ ಕುರುಹು ಆಗಿತ್ತೆಂದೂ ಹೇಳುತ್ತಾರೆ. ಅದನ್ನು ನಂಬುವುದು ಕೂಡ ಕಷ್ಟವಾಗುತ್ತದೆ. ಯಾಕೆಂದರೆ ದಹನ ಮಾಡಿದ ಸ್ಥಳ ಎಂದು ತೋರಿಸುವ ಕುರುಹು ಅಥವಾ ಇಂದು ವೃಂದಾವನ ಇದ್ದ ಸ್ಥಳ ವಿಜಯನಗರ ಕಾಲದ ರಾಮಲಿಂಗ ದೇವಸ್ಥಾನದ ಎದುರಿಗಿದೆ. ಅಲ್ಲಿ ಈಶ್ವರಲಿಂಗ, ಅನಂತಶಯನ ಹಾಗೂ ಪ್ರಾಣದೇವರ ಮೂರ್ತಿಗಳು ಇಂದಿಗೂ ಪೂಜೆಗೊಳ್ಳುತ್ತವೆ. ದೇವಾಲಯದ ಎದುರು ದಹನ ಮಾಡುವುದೂ ಸಾಧ್ಯವಿಲ್ಲ.

ಆದರೆ ವೃಂದಾವನ ಕಟ್ಟುವದು ಸಾಧ್ಯವಿದೆ. ಇಷ್ಟಾಗಿಯೂ ಕೊಲ್ಹಾರದಲ್ಲಿಯ ಮಹಿಪತಿರಾಯರ ವೃಂದಾವನಕ್ಕೆ ಅವರ ಮನೆತನದವರಾಗಲೀ ಅಥವಾ ಉಳಿದ ಯಾವ ಭಕ್ತರಾಗಲಿ ನಡೆದುಕೊಳ್ಳುವದಿಲ್ಲ. ಅಷ್ಟೇ ಅಲ್ಲ ಅದರ ಪೂಜೆಯ ಶಾಶ್ವತ ವ್ಯವಸ್ಥೆಯೂ ಇಲ್ಲ. ಈ ವಿಷಯದಲ್ಲಿ ಶ್ರೀಪತಿ ತನುಜರು ತಮ್ಮ ಕನ್ನಡ ಕಿರುಚರಿತ್ರೆಯಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಹುದಾಗಿತ್ತು. ಅವರು ಹೇಳುವಂತೆ 'ಭೂಲೋಕದಿ ವೃಂದಾವನದೊಳು ಮೆರೆದೆ। ಬಹುಭಕ್ತರ ಪೊರೆದೆ (ನುಡಿ -೨೦। ಎಂದಷ್ಟೇ ಹೇಳುತ್ತಾರೆ. ಸಂಸ್ಕೃತ ಶ್ಲೋಕದಲ್ಲಿ ಕೂಡ 'ವೃಂದಾವನೇ ರಾಜತೇ' ಎಂದಷ್ಟೇ ಹೇಳಲಾಗಿದೆ. ಇವುಗಳಿಂದ ಒಂದು ವಿಷಯ ಖಚಿತವಾಗುವುದೆಂದರೆ ಮಹಿಪತಿರಾಯರು ವೃಂದಾವನದಲ್ಲಿ ಮೆರೆದರು ಅಥವಾ ರಾಜಿಸಿದರು ಎಂಬುದು. ಅದು ಕೊಲ್ಹಾರದಲ್ಲಿಯೇ ಅಥವಾ ಕಾಖಂಡಕಿಯಲ್ಲಿಯೇ ಎಂಬುದನ್ನು ಮಾತ್ರ ಹೇಳಲಿಲ್ಲ. ಈ ವಿಷಯದಲ್ಲಿ ಮುಂಬಯಿ ಇಲಾಖೆಯ ವಿಜಾಪುರ ಜಿಲ್ಲೆಯ ಗ್ಯಾಝಿಟಿಯರ್ ತುಸು ವಿವರ ಕೊಡುವುದು ಗಮನಾರ್ಹವಾಗಿದೆ.

"Mahipati died at Kolhar on the Krishna twentytwo miles South of Bagewadi. but was buried at Kakhandki as he had wished and the basil stand was raised over his grave......" (Vol. XXIII ಪುಟ ೬೫೭)

ಕೊಲ್ಹಾರದಲ್ಲಿ ಕಾಲವಾದ ಮಹಿಪತಿರಾಯರ ಪಾರ್ಥಿವ ಶರೀರವನ್ನು ಅವರ ಇಚ್ಛೆಯಂತೆ ಕಾಖಂಡಕಿಗೆ ತಂದು ಸಮಾಧಿ ಕಟ್ಟಿದರು ಎಂಬ ವಿಷಯ ಹೆಚ್ಚು ವಾಸ್ತವವೆನಿಸುತ್ತದೆ ಮತ್ತು ಇದು ಸಂಪ್ರದಾಯಕ್ಕೆ ವಿರುದ್ಧವೇನೂ ಅಲ್ಲವೆಂಬುದನ್ನು ಇಂಥ ಅನೇಕ ಉದಾಹರಣೆಗಳಿಂದ ಸಿದ್ಧಪಡಿಸಬಹುದು. ಮಾಧ್ವ ವೈಷ್ಣವ ಸಂಪ್ರದಾಯದ ಉತ್ತರಾದಿ ಮಠದ ಶ್ರೀಗಳವರಾದ ಶ್ರೀ ಸತ್ಯ ಸಂಧತೀರ್ಥರು (ಕ್ರಿ.ಶ. ೧೭೮೩-೧೭೯೪) ತೀರ್ಥಹಳ್ಳಿಯಲ್ಲಿ ಕಾಲವಾದಾಗ ಅವರ ಕೊನೆಯ ಇಚ್ಛೆಯಂತೆ ಅವರ ಪಾರ್ಥಿವ ಶರೀರವನ್ನು ಮಹಿಷಿಗೆ ಒಯ್ದು ಅಲ್ಲಿ ತುಂಗಾತೀರದ ಅಶ್ವತ್ಥ ನಾರಾಯಣನ ಸನ್ನಿಧಾನದಲ್ಲಿ ಸಮಾಧಿಗೊಳಿಸಲಾಯಿತು. //೫೮// ಆದ್ದರಿಂದ ನೂರು ವರುಷಗಳ ಹಿಂದೆ ಗೆಝಿಟಿಯರ್ ವಿಷಯ ಸಂಗ್ರಹಕಾರನಿಗೆ ಇಂಥ ಹೇಳಿಕೆಗಳು ದೊರೆತಿವೆ ಎಂದರೆ ಅದನ್ನು ನಂಬಲು ಹೆಚ್ಚು ಅವಕಾಶಗಳಿವೆ. ಮಹಿಪತಿರಾಯರು ಕೊಲ್ಹಾರದಲ್ಲಿ ಕಾಲವಾದರೆಂದು ಅಧಿಕೃತವಾಗಿ ದೊರಕುವ ದಾಖಲೆಯೂ ಇದೊಂದೇ ಆಗಿದೆ ಎಂಬುದೂ ಗಮನಾರ್ಹವಾಗಿದೆ. ಅಂತು ಕೊಲ್ಹಾರದಲ್ಲಿ ಕಾಲವಾದ ಮೇಲೆ ಅವರ ದೇಹವನ್ನು ಕಾಖಂಡಕಿಗೆ ತಂದು ವೃಂದಾವನ ಕಟ್ಟಿದರೆಂದು ಗ್ರಹಿಸಬಹುದು. ಆದರೆ ಗೃಹಸ್ಥರಾದ ಮಹಿಪತಿ ರಾಯರಿಗೆ ವೃಂದಾವನವನ್ನು ಹೇಗೆ ಕಟ್ಟಿದರು? ಎಂಬ ಸಂದೇಹ ಉಳಿಯುತ್ತದೆ. ಸಂನ್ಯಾಸಿಗೆ ಮಾತ್ರ ವೃಂದಾವನ ಎಂದು ಗ್ರಹಿಸಿದರೆ

ಮಹಿಪತಿರಾಯರು ಸಂನ್ಯಾಸ ಧರ್ಮವನ್ನು ಸ್ವೀಕರಿಸಿದ್ದರೆ? ಯಾರಿಂದ, ಯಾವಾಗ ಮತ್ತು ಎಲ್ಲಿ ಎಂಬ ಪ್ರಶ್ನೆಗಳು ಹುಟ್ಟುವದು ಸಹಜವಾಗುತ್ತದೆ.

ಗೃಹಸ್ಥ ಹರಿದಾಸರನ್ನು ಸಾಮಾನ್ಯವಾಗಿ ಅವರ ಹೆಸರಿನ ಮುಂದೆ ದಾಸ ಪದವನ್ನು ಉಪಯೋಗಿಸಿ ಕರೆಯುತ್ತಾರೆ. ಪುರಂದರದಾಸರು, ಕನಕದಾಸರು, ಪ್ರಸನ್ನವೆಂಕಟದಾಸರು, ವಿಜಯದಾಸರು ಜಗನ್ನಾಥ ದಾಸರು ಇತ್ಯಾದಿಯಾಗಿ ಕರೆಯುವುದು ರೂಢಿಯಲ್ಲಿದೆ. ಅದರಂತೆ ಸಂನಾಸ್ಯ ಧರ್ಮ ಸ್ವೀಕರಿಸಿದವರನ್ನು ಅವರ ಹೆಸರಿನ ಜೊತೆಗೆ ಸ್ವಾಮಿಗಳು ರಾಯರು ರಾಜರು ಎಂದು ಸೇರಿಸಿ ಕರೆಯುತ್ತಾರೆ. ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ರಾಘವೇಂದ್ರರಾಯರು ಇತ್ಯಾದಿ. ಇವುಗಳನ್ನು ಗಮನಿಸಿದರೆ ಮಹಿಪತಿರಾಯರನ್ನು ಮಹಿಪತಿದಾಸರೆಂದು ಕರೆಯುವುದಿಲ್ಲ. ಅವರನ್ನು ಮಹಿಪತಿ ಸ್ವಾಮಿಗಳು, ಮಹಿಪತಿರಾಯರು, ಮಹಿಪತಿರಾಜರು ಎಂದು ಕರೆಯುವುದೇ ಹೆಚ್ಚು ರೂಢಿಯಲ್ಲಿದೆ. ಅವರಿಗೆ ಹಾಕಿಕೊಟ್ಟ ಉಂಬಳಿಗಳು ದತ್ತಿಗಳು 'ಶ್ರೀ ಮಹತಿಪತಿ ಸ್ವಾಮಿ ಸಂಸ್ಥಾನ'ಕ್ಕೆ ಎಂದೇ ದಾಖಲೆಗಳಲ್ಲಿ ನಮೂದಾಗಿದೆ. ಜೊತೆಗೆ ಮಹಿಪತಿರಾಯರ ಕುರಿತು ರಚಿಸಿದ ಕೃತಿಗಳಲ್ಲಿ ಅವರ ಮಗ, ಮೊಮ್ಮಕ್ಕಳು, ಮರಿಮಕ್ಕಳು ಅವರನ್ನು ಗುರುರಾಯ, ಯತಿ, ಸ್ವಾಮಿ, ಯೋಗಿ ಎಂಬ ಶಬ್ದಗಳಿಂದ ಕರೆಯುತ್ತಾರೆ.

''ಪೊಡವಿಗೆ ನಡೆತಂದನು ಗುರುರಾಯನು।
ಎಡಬಲದಲಿ ಭಾಗವತರ ಮೇಳದಿ''।।

(ಕೃಷ್ಣರಾಯ ಸೇವಾತತ್ವ ಪದ ೨೦)

'ರಾಜರಾಜ ಮಹಾರಾಜ ಮಹೀಪತಿ।
ರಾಜನೆಂಬೋ ನಾಮವು ನೆಲೆಗೆ।।

(ಕೃಷ್ಣರಾಯ - ಅದೇ ಪದ ೨೧)

'ಅಗಾಧ ಗುರುರಾಯನ ಕರುಣೆ
ಪೊಗಳಲಾಪೆನೆ ಪಾಮರ ಪ್ರಾಣಿ।।

(ಕೃಷ್ಣರಾಯ - ಅದೇ ಪದ ೨೨)

ನೋಡು ಮನವೆ ವರ ಯತಿಯಾ। ನಡೆ
ನೋಡು ಸದ್ಭಾವದಿಂದಲಿ ಮಹೀಪತಿಯಾ।।

(ತರಳಕೃಷ್ಣ -ಅದೇ ಪದ ೫೨)

ಕರುಣೆಸನಗೆ ವರಯತಿಯೆ।
ಪರಮ ಪಾವನ ಮೂರ್ತಿಯೆ।
ವರಭಕುತರ ಸ್ಫೂರುತಿಯೆ।
ಶರಣು ರಕ್ಷಕ ಮಹೀಪತಿಯೆ।।

(ಚಿನ್ನಕೃಷ್ಣ - ಅದೇ ಪದ ೮೦)

ಹೀಗೆ ಅನೇಕ ಕೃತಿಗಳಲ್ಲಿ ಅವರನ್ನು ಸ್ತುತಿಸಿದ ಪದಗಳು ಮಹಿಪತಿರಾಯರು ಸಂನ್ಯಾಸ ಧರ್ಮವನ್ನು ಸ್ವೀಕರಿಸಿದ್ದರು ಎಂದು ನಂಬಲು ಅವಕಾಶವನ್ನು ಮಾಡಿಕೊಡುತ ವೆ.

ಶ್ರೀಪತಿ ತನುಜರು ಬರೆದ ಕನ್ನಡ ಚರಿತ್ರೆಯಲ್ಲಿ ಈ ಕುರಿತು ಸ್ಪಷ್ಟವಾಗಿ ಹೇಳಿಲ್ಲವಾದರೂ ಚರಿತ್ರೆಯಲ್ಲಿ ಬಳಸಿದ ಕೆಲವು ಪದಗಳು ಇದನ್ನೇ ಅನುಮೋದಿಸುತ್ತವೆ.

'ಭೂಲೋಕದಿ ವೃಂದಾವನದೊಳು ಮೆರೆದೆ।'

ಎಂಬ ಸಾಲು ಅವರು ವೃಂದಾವನಸ್ಥರಾದರೆಂಬುದನ್ನು ಹೇಳಿದರೆ, ಪವಾಡದ ಕಥೆಯನ್ನು ಹೇಳುವಾಗ

'ನಿಮ್ಮ ಶ್ಯಾಟಿ ಕೊಡಲೊಯ್ಯುತ ಮುಸುಕಿಡಲು'

ಎಂದು ಸಂನ್ಯಾಸಿಗಳ ಅಂಗವಸ್ತ್ರ -ಶ್ಯಾಟಿಯನ್ನು ತಂದು ಸತ್ತವಳ ಮೇಲೆ ಮುಸುಕಿಡಲು ಕೈಯನೆಳೆಯಲು ಝುಮ್ಮನೆ ಏಳುತ ಶಿಷ್ಯಳು' ಎಂದು ಮುಂತಾಗಿ ಹೇಳುತ್ತಾರೆ.

'ಶ್ರೀಮದ್ಯೋಗೀಂದ್ರ ಮಹಾಮಹಿಮ ನಿಸ್ಸೀಮ ಕಾಖಂಡಕೀ ಗ್ರಾಮ ವೃಂದಾವನ ವಿಧಾಮ ಬ್ರಹ್ಮ ಕುಲಲಲಾಮ ಮಹೀಪತಿ ನಾಮ ಗುರುಸಾರ್ವಭೌಮ ರಾಜಾಧಿರಾಜ' ಎಂಬ ಅವರ ಪಠಾಕು ಕೂಡ ಮಹಿಪತಿರಾಯರು ಸಂನ್ಯಾಸಿಗಳಾಗಿದ್ದರು ಎಂಬುದನ್ನೇ ಎತ್ತಿ ತೋರಿಸುತ್ತದೆ.

ಈಗ ಉಳಿದಿದ್ದು ಅವರಿಗೆ ಸಂನ್ಯಾಸಧರ್ಮ ದೀಕ್ಷೆಯನ್ನು ಯಾರು ಕೊಟ್ಟರು? ಅವರು ಕೊಲ್ಹಾರಕ್ಕೆ ಹೋಗುತ್ತಿದ್ದುದು, ಅಲ್ಲಿ ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರನ್ನು ಕಾಣುತ್ತಿದ್ದುದನ್ನು ಪರಂಪರೆಯಿಂದ ಹೇಳಿಕೊಳ್ಳುತ್ತ ಬಂದಿದ್ದಾರೆ. ಈ ಪ್ರಲ್ಹಾದ ಕೃಷ್ಣಾಚಾರ್ಯರು ಅಂದಿನ ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಾಭಿನವತೀರ್ಥರೊಡನೆ ಯಾವಾಗಲೂ ಇರುತ್ತಿದ್ದರು. //೫೯// ಉಮರ್ಜಿ ಆಚಾರ್ಯರ ನಿಕಟ ಪರಿಚಯ ಮಹಿಪತಿರಾಯರಿಗಿತ್ತು. ಜೊತೆಗೆ ಅವರೂ ಉತ್ತರಾದಿ ಮಠದ ಶಿಷ್ಯರು, ಅವರ ಪಕ್ವ ಜೀವನವನ್ನು ಕಂಡ ಶ್ರೀಗಳವರು ಒಂದು ದಿನ ಕೊಲ್ಹಾರದ ಕೃಷ್ಣಾ ತೀರದಲ್ಲಿಯೇ ಅವರಿಗೆ ಯತ್ಯಾಶ್ರಮವನ್ನು ಕೊಟ್ಟರಬೇಕು. ಹೀಗೆ ಅವರೊಬ್ಬ ವಿಧಿ ಸಂನ್ಯಾಸಿಗಳಾಗಿರುವ ಸಾಧ್ಯತೆಗಳಿವೆ. ಅಂತೆಯೇ ಅವರಿಗೆ ವೃಂದಾವನವನ್ನು ಕಟ್ಟಲಾಯಿತು. ಅಲ್ಲದೆ ಇಂದಿಗೂ ಅವರದೆನ್ನಲಾದ ಪಾದುಕೆಗಳನ್ನು ಹಾಗು ಯೋಗ ದಂಡಗಳನ್ನು ತೋರಿಸುವುದು ಇದನ್ನು ಇನ್ನಷ್ಟು ಪುಷ್ಟೀಕರಿಸಿದಂತಾಗುತ್ತದೆ. ವಾಸ್ತವದಲ್ಲಿ ಯೋಗದಂಡವು ಸಂನ್ಯಾಸಿಗಳ ಕೈಯಲ್ಲಿ ಇರುತ ದೆ.

ಮಹಿಪತಿರಾಯರ ಮಗ ಕೃಷ್ಣರಾಯರು ತಮ್ಮ ಒಂದು ಕೀರ್ತನೆಯಲ್ಲಿ

'ಏನೆಂದು ಬಣ್ಣಿಸಲಿ ಗುರುರಾಯನಾ'

ಎಂದು ಪ್ರಾರಂಭಿಸುತ್ತ

'ಧರೆಯೊಳಜ್ಞಾನ ತಮಹರಣ ಭಾಸ್ಕರನೆನಿಪ
ವರಮುನಿ ಕರಕಮಲದಿ ಜನಿಸಿ'

ಎಂದು ಸ್ಪಷ್ಟವಾಗಿ ಹೇಳಿದ್ದನ್ನು ಗಮನಿಸಿದರೆ, ಮಹಿಪತಿರಾಯರು ಭಾಸ್ಕರ ಸ್ವಾಮಿಗಳಿಂದಲೇ ಕಾಲಕ್ರಮದಲ್ಲಿ ಸಂನ್ಯಾಸ ದೀಕ್ಷೆಯನ್ನು ಪಡೆದಿರುವ ಸಾಧ್ಯತೆಗಳೂ ಇವೆ. 'ವರಮೂಲ ಮಂತ್ರವನು ಗುರುಮಹಿಪತಿಯೆಂಬ ನಿರುತ ಖ್ಯಾತಿಯ ನಾಮ ಧರಿಸಿ ಬಂದನ ಮಹಿಮೆ' ಎಂದು ಕೂಡ ಹೇಳುತ್ತಾರೆ. //೬೦//

ಹೀಗೆ ಈವರೆಗೆ ಕಂಡುಕೊಂಡಂತೆ ಮಹಿಪತಿರಾಯರು ಕ್ರಿ.ಶ. ೧೬೪೦ರಿಂದ ೧೭೦೫ ವರೆಗೆ ಸುಮಾರು ೬೫ ವರುಷ ಬದುಕಿ ಕೆಲಕಾಲ ವಿಜಾಪುರದ ಆದಿಲಶಾಹಿ ರಾಜ್ಯದಲ್ಲಿ ಅಧಿಕಾರದಲ್ಲಿದ್ದು, ಅನಂತರ ಅದನ್ನು ತ್ಯಜಿಸಿ ಸಾರವಾಡದ ಭಾಸ್ಕರ ಸ್ವಾಮಿಗಳ ಶಿಷ್ಯತ್ವವನ್ನು ವಹಿಸಿ ಆಧ್ಯಾತ್ಮ ಸಾಧನೆ ಮಾಡಿದರು. ಯೋಗ ಸಿದ್ಧಿಯನ್ನು ಪಡೆದುಕೊಂಡರು. ತಮ್ಮ ಅನುಭವಗಳನ್ನು ಹಲವಾರು ರಚನೆಗಳ ಮೂಲಕ ಅಕ್ಷರದಲ್ಲಿ ಹಿಡಿದಿಟ್ಟರು. ಕೊನೆಗೆ ಸಂನ್ಯಾಸ ಆಶ್ರಮವನ್ನು ಸ್ವೀಕರಿಸಿ ಕೊಲ್ಹಾರದಲ್ಲಿ ಕಾಲವಾಗಿ ಕಾಖಂಡಕಿಯಲ್ಲಿ ವೃಂದಾವನಸ್ಥರಾದರು.

★ ★ ★

**ಅಡಿ ಟಿಪ್ಪಣಿಗಳು**

೧. ದೇಶಪಾಂಡೆ ಮನೋಹರರಾಯ: ಸ್ವಾನಂದ ಸಾಮ್ರಾಜ್ಯ ಪುಟ ೨೨-೨೩ ಶ್ರೀಪತಯ್ಯ ಹರಿದಾಸ (ಸಂ): ಸೇವಾತತ್ವ ಪುಟ ೮-೯ (೧೯೬೩)

ಜಿ. ವರದರಾಜರಾವ (ಸಂ): ಶ್ರೀ ಮಹಿಪತಿರಾಯರ ಕೃತಿಗಳು: ಪೀಠಿಕೆ ಪುಟ XX

೨. ಸ್ವಾನಂದ ಸಾಮ್ರಾಜ್ಯ : ಪುಟ -೨೨

೩. ಹೆಚ್. ಕಸಿನ್ಸ : ಬಿಜಾಪುರ ಪು. ೧೧೯ (೧೮೮೯)

೪. ಎಂ.ಎ. ನಯೀಮ: ಎಕ್ಸಟರ್ನಲ್ ರಿಲೇಶನ್ಸ ಆಫ್ ಬಿಜಾಪುರ ಕಿಂಗಡಮ್ ಪುಟ ೨೫

೫. ಹೆಚ್. ಕಸಿನ್ಸ: ಬಿಜಾಪುರ ಪುಟ ೧೨೮

೬. ಜಿ. ವರದರಾಜರಾವ್ (ಸಂ): ಶ್ರೀ ಮಹಿಪತಿರಾಯರ ಕೃತಿಗಳು ಪು. XIX

೭. ಮರಾಠಿ ಚರಿತ್ರೆ : ಓವಿ ೫೨

'ತೋ ಆಹೆ ಬಹುತ ಚತುರ। ಅಷ್ಟಿ ದೇತೋ ತ್ಯಾಸಿ ಅಧಿಕ್ಕಾರ॥
ಆಮಚೆ ದರಬಾರೀ ಐಸಾ ಮೋಹರ। ನಾಟೀ ನಿಘರ ಯಾಸ್ಯಪ್ಪಿ ॥೫೨॥

೮. ಸ್ವಾನಂದ ಸಾಮ್ರಾಜ್ಯ : ಪುಟ ೨೨ ಮತ್ತು
ಸೇವಾತತ್ವ : ಪುಟ ೮

೯. ಸೇವಾತತ್ವ : ಪುಟ ೪

೧೦. ಹೆಚ್ ಕಸಿನ್ಸ: ಬಿಜಾಪೂರ ಪುಟ ೧೭

೧೧. ಅದೇ ಪುಟ ೧೩೧. ಈ ಪ್ಲೇಗ ಬೇನೆಯಿಂದ ಔರಂಗಜೇಬನು
ತನ್ನ ಹೆಂಡತಿಯನ್ನು ಇಲ್ಲಿಯೇ ಕಳೆದು ಕೊಂಡನು

೧೨. ಸ್ವಾನಂದ ಸಾಮ್ರಾಜ್ಯ: ಪು ೨೫. ಸೇವಾತತ್ವ: ಪು. ೧೧ ಹಾಗೂ
ಶ್ರೀ ಮಹಿಪತಿರಾಯರ ಕೃತಿಗಳು : ಪೀಠಿಕೆ ಪು. XIV

೧೩. ಭೀ.ಸ್ವಾ. ಕಮಲಾಪೂರ: ಸತ್ಕಥಾ ಪುಟ ೧೯೫ (೧೯೩೧)

೧೪. ಶ್ರೀಪತಯ್ಯ ಹರಿದಾಸ: ಸೇವಾತತ್ವ ಪುಟ ೧೧

೧೫. ಮ. ಶ್ರೀ ದೇಶಪಾಂಡೆ: ಸ್ವಾನಂದ ಸಾಮ್ರಾಜ್ಯ ಪು ೨೫

೧೬. ಜಿ. ವರದರಾಜರಾವ: ಶ್ರೀ ಮಹಿಪತಿರಾಯರ ಕೃತಿಗಳು ಪೀಠಿಕೆ ಪುಟ XIV

೧೭. ಕೃಷ್ಣ ಕೊಲ್ಹಾರ ಕುಲಕರ್ಣಿ: ಆನಂದ ಲಹರಿ: ಸುಬೋಧ ದೀಪಾವಳಿ ೧೯೬೪

೧೮. ಮರಾಠಿ ಚರಿತ್ರೆ : ಓವಿ ೨೫

'ಐಗಳಿ ಗ್ರಾಮಿ ಹೋತಾ ವಿಪ್ರ। ನಾವ ಪವಿತ್ರ ಕೋನೇರಿಪಂತ ।। ೨೫।। ಸ್ವಾನಂದ ಸಾಮ್ರಾಜ್ಯ (ಪುಟ-೨೨) ಹಾಗು ಸೇವಾತತ್ವ (ಪುಟ-೧೧) ಗಳಲ್ಲಿ ಲೇಖಕರು 'ರಾಯರ ಅಜ್ಜಂದಿರಾದ ರಂಗಭಟ್ಟರು ಬಾಗಲಕೋಟೆಯ ಕಾಥವಟೆ ಮನೆತನದವರು' ಎಂದು ಹೇಳುತ್ತಾರೆ. ಇದನ್ನೇ ಡಾ। ಜಿ. ವರದರಾಜರಾವ ಅವರು 'ಶ್ರೀಮಹಿಪತಿರಾಯರ ಕೃತಿಗಳು' ಪೀಠಿಕೆಯಲ್ಲಿ ಪುನರುಚ್ಚರಿಸಿದ್ದಾರೆ. ಆದರೆ ಇದಕ್ಕೆ ಆಧಾರ ಎಲ್ಲಿಯೂ ಕೊಡಲಿಲ್ಲ. ದೊರೆತ ದಾಖಲೆಗಳಲ್ಲಿ ಈ ಹೆಸರು ಎಲ್ಲಿಯೂ ಉಲ್ಲೇಖವಾಗಿಲ್ಲ. ಪ್ರತಿಯಾಗಿ ಮುಂಬಯಿ ಗ್ಯಾಝಿಟಿಯರ್ ಸಂಪುಟ XXI ಪುಟ ೬೫೭ ರಲ್ಲಿ 'Mahipati was accountant of Aigali Village' ಎಂದು ಸ್ಪಷ್ಟವಾಗಿ ಹೇಳಿದೆ. ಈ ಕುಲಕರ್ಣಿಕೆ ವೃತ್ತಿ ಆಮೇಲೆ ಬಂದುದಾಗಿರಬೇಕು. ಇಂದಿನ ಐಗಳಿ ಕುಲಕರ್ಣಿಗಳ ಗೋತ್ರ 'ಮೌನಭಾರ್ಗವ'ವಾಗಿದ್ದು ಕಾಖಂಡಕಿಯ ಹರಿದಾಸರ ಗೋತ್ರವೂ ಅದೆಯೇ ಆಗಿದ್ದು ಗಮನಾರ್ಹವಾಗಿದೆ. ಅಲ್ಲದೆ ಐಗಳಿಯ ವೆಂಕಟೇಶ ದೇವರ ಅರ್ಚಕ ವೃತ್ತಿಯನ್ನು ಇಂದಿಗೂ ಅಲ್ಲಿಯ ಕುಲಕರ್ಣಿಗಳೇ ಮಾಡುತ್ತಾರೆ.

೧೯. ಕೋನೇರಿ ರಾಯ ರಚಿಸಿದ ಒಂದು ಆರತಿ ಪದವನ್ನು ಶ್ರೀ ಪಿ.ಎಂ.ಚಂದಾವರಕರ ಅವರು ಸಂಪಾದಿಸಿ ಪುಣೆಯ ಭಾರತ ಇತಿಹಾಸ ಸಂಶೋಧನ ಮಂಡಲದ 'ವಾರ್ಷಿಕ ಇತಿವೃತ್ತ' ಶಕ ೧೮೩೮ ರ ಸಂಚಿಕೆಯ ಪುಟ ೪೭ ರಲ್ಲಿ ಪ್ರಕಟಿಸಿದ್ದಾರೆ. 'ಜಯದೇವ-ಜಯದೇವ ಜಯ ವೈಕುಂಠ ರಮಣಾ' ಎಂದು ಪ್ರಾರಂಭವಾಗುವ ಪದದ ಒಂದು ನುಡಿಯಲ್ಲಿ 'ಪಂಚಪುರಿ ಸಿರಿವರಿ ದೇವ ಎಂದು ಹೇಳುತ್ತಾರೆ. ಇಲ್ಲಿಯ ಪಂಚಪುರಿ ಎಂದರೆ ಐಗಳಿ. ಅಲ್ಲಿಯ ವೆಂಕಟೇಶ ದೇವರ ಗುಡಿಯ ದ್ವಾರದಲ್ಲಿ ಷಣ್ಮುಖಿ -ಹಣಮಂತ ದೇವರ ವಿಗ್ರಹಗಳೂ ಇವೆ.

೨೦. ಮರಾಠಿ ಚರಿತ್ರೆ: ಓವಿ: ೨೮, ೨೯, ೩೧.

ಶ್ರೀಪತಿ ತನುಜರ ಕನ್ನಡ ಕಿರುಚರಿತ್ರೆಯಲ್ಲಿ ಬರುವ 'ಜನಿಸಿದೆ ಮೊದಲು ವಿಜಾಪುರದಲಿ ನೀನು' ಹಾಗೂ ನವದತ್ತಿ ರಾಮಕೃತ ಸಂಸ್ಕೃತ ಸ್ತೋತ್ರದಲ್ಲಿಯ 'ಅಸ್ತ್ಯೇದ್ವೈದುರ ಪತ್ತನೇ ದ್ವಿಜವರೋ ಕೋನೇರಿ। ಆರ್ಯಾಭಿದೋ ತದ್ಭಾರ್ಯಾ ಉದರೇ ಸುವನ್ಮ। ಜಗೃಹೇ ಲೇಖಾಂಶತೋ ಭೂಪತಿ।।' ಎಂಬ ಸಾಲುಗಳು ಕೋನೇರಿರಾಯ ತನ್ನ ಹಿರಿಯ ಮಗ ಹುಟ್ಟಿದ ನಂತರ ಐಗಳಿಯನ್ನು ಬಿಟ್ಟು ಬಿಜಾಪೂರಕ್ಕೆ ಬಂದಿರಬೇಕು. ಗುರು ಮಹಿಪತಿಯು ವಿಜಾಪುರದಲ್ಲಿ ಹುಟ್ಟಿರುವ ಸಾಧ್ಯತೆಯೂ ಇದೆ.

೨೧. ಮರಾಠಿ ಚರಿತ್ರೆ: ಓವಿ ೩೨

'ಚೌಘಾನಿ ಹಸ್ತ ಮಿಳುನಿ। ವೃತ ಬಂಧ ಕೇಲಾ ತಯಾನಿ।।

ಈ ಹಂತದಲ್ಲಿ ಸ್ವಾನಂದ ಸಾಮ್ರಾಜ್ಯ (ಪುಟ-೨೫) ಸೇವಾತತ್ವ (ಪುಟ-೧೧) ಗ್ರಂಥಗಳಲ್ಲಿ ಬರುವ

ವಿಷಯವನ್ನು ಗಮನಿಸಬೇಕು. 'ಮಹಿಪತಿಯ ಉಪನಯನ ಕಾಲದಲ್ಲಿ ಅವರ ಮನೆತನದ ಕುಲಗುರುಗಳಾದ ಕೊಲ್ಹಾರದ ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರು ಬಂದಿದ್ದರು' ಎಂದು ಉಲ್ಲೇಖಿಸಲಾಗಿದೆ. ಕಾಖಂಡಕಿ ಹರಿದಾಸರ ಮನೆತನ ಪ್ರಾರಂಭವಾದದ್ದು ಮಹಿಪತಿರಾಯರಿಂದ. ಆ ಮೊದಲು ಅದು ಬಿಗಳಿ ಕುಲಕರ್ಣಿ ಅಥವಾ ಉಭಯ ಗ್ರಂಥಗಳಲ್ಲಿ ಉಕ್ತವಾದಂತೆ ಬಾಗಲಕೋಟೆಯ ಕಾಥವಟೆ ಮನೆತನ. ಈ ಮನೆತನಗಳ ಕುಲಗುರುಗಳು ಉಮರ್ಜಿ ಆಚಾರ್ಯರು ಅಲ್ಲ. ಇಂದು ಕಾಖಂಡಕಿ ಹರಿದಾಸರು ಮಾನ್ಯ ಮಾಡುತ್ತಿದ್ದ, ಮನೆತನದ ಕುಲಗುರುಗಳು/ ಪುರೋಹಿತರು 'ಪಡಸಲಗಿಯ ಆಚಾರ್ಯರು' ಪ್ರತಿವರುಷದ ಆರಾಧನೆಯಲ್ಲಿ ಜರುಗುವ ಗುರುಮಂಡಲ ಪೂಜೆಗೆ ಪಡಸಲಗಿ ಆಚಾರ್ಯರನ್ನೇ ಕೂಡಿಸುತ್ತಿರುವುದು ಗಮನಾರ್ಹವಾಗಿದೆ. ಮಹಿಪತಿರಾಯರು, ಅವರ ಮನೆತನದವರು ರಚಿಸಿದ ಸಾವಿರಾರು ಕೃತಿಗಳಲ್ಲಿ ಸಾರವಾಡದ ಭಾಸ್ಕರ ಸ್ವಾಮಿಗಳು, ಉತ್ತರಾದಿಮಠದ ಸ್ವಾಮಿಗಳು, ಅನೇಕ ಹರಿದಾಸರು ಹೀಗೆ ಹಲವರನ್ನು ಸ್ತುತಿಸಿದ್ದರೂ ಉಮರ್ಜಿ ಆಚಾರ್ಯರನ್ನು ನೆನೆಸಿದ ಉಲ್ಲೇಖ ದೊರೆಯುವುದಿಲ್ಲ.

೨೨. ಬಿಗಳಿ ವೆಂಕಟೇಶ ದೇವರ ಅರ್ಚಕ ವೃತ್ತಿ, ಈಗಲೂ ಅಲ್ಲಿಯ ಕುಲಕರ್ಣಿಗಳಿಗೆಯೇ ಇದೆ.

೨೩. ಮರಾಠಿ ಚರಿತ್ರೆ: ಓವಿ ೩೭

(ಕನ್ನಡ ಚರಿತ್ರೆಯಲ್ಲಿ ಅಥವಾ ಇತರತ್ರ ಖಿವಾಸಖಾನನ ಉಲ್ಲೇಖ ದೊರೆಯುವುದಿಲ್ಲ)

೨೪. ಮರಾಠಿ ಚರಿತ್ರೆ: ೩೯

೨೫. ಮಹಿಪತಿರಾಯರ ಚರಿತ್ರೆಯಲ್ಲಿ ಹೆಂಡತಿಯ ಹೆಸರು 'ತಿಮ್ಮವ್ವ' ಎಂದು ಎಲ್ಲ ದಾಖಲೆಗಳಲ್ಲಿ ಉಕ್ತವಾಗಿದೆ. ಆದರೆ ಅವಳು ಯಾವ ಊರಿನವಳು, ಯಾರ ಮನೆತನ, ಯಾರ ಮಗಳು ಇತ್ಯಾದಿಗಳ ದಾಖಲೆ ಇಲ್ಲ. ಸ್ವಾನಂದ ಸಾಮ್ರಾಜ್ಯ (ಪುಟ -೨೪)ದಲ್ಲಿ ಅವಳು ಕಲಬುರ್ಗಿಯ ದೇಶಮುಖರ ಮನೆತನದವಳು ಎಂದು ಹೇಳಿದೆ. ಸೇವಾತತ್ವ (ಪುಟ -೧೨) ದಲ್ಲಿ ಅವರಿಗೆ ಇಬ್ಬರು ಹೆಂಡಿರು ಎಂಬ ಉಲ್ಲೇಖವಿದೆ. ಮೊದಲನೆಯವಳು ಬಿಗಳಿಯ ಕರ್ಣಿಕರ ಮಗಳು. ಅವಳು ಹೆಳವಿ. ಅವಳಲ್ಲಿ ಗಂಡು ಮಗು ಹುಟ್ಟಿದಾಗ ಆಸ್ತಿ ಹಾಗೂ ಕರ್ಣಿಕ ವೃತ್ತಿಗೆ ಅವನನ್ನು ಬಿಟ್ಟು ರಾಯರು ವಿಜಾಪುರಕ್ಕೆ ಬಂದರು. ಕುಸು ದಿನಗಳ ನಂತರ ಕಲಬುರ್ಗಿಯ ದೇಶಮುಖರು ತಮ್ಮ ಮಗಳು ತಿರುಮಲಾಬಾಯಿ (ತಿಮ್ಮವ್ವ) ಎಂಬವಳನ್ನು ಅವರಿಗೆ ಧಾರೆಯೆರೆದು ಕೊಟ್ಟರು ಎಂದು ಹೇಳಲಾಗಿದೆ. ಆದರೆ ಈ ಯಾವ ಹೇಳಿಕೆಗಳಿಗೂ ಆಧಾರಗಳಿಲ್ಲ. ಮೊದಲೇ ಹೇಳಿದಂತೆ ಬಿಗಳಿ ಕುಲಕರ್ಣಿಗಳ ಗೋತ್ರ 'ಮೌನಭಾರ್ಗವ' ವಾದ್ದರಿಂದ ಸಗೋತ್ರದಲ್ಲಿ ವಿವಾಹ ನಿಷಿದ್ಧ. ತಿಮ್ಮವ್ವ ಕಲಬುರ್ಗಿ ದೇಶಮುಖರ ಮನೆತನದವಳು ಎಂಬುದಕ್ಕೆ ಆಧಾರವಿಲ್ಲ. ಅಲ್ಲದೆ ಅಂದಿನ ದಿನಗಳಲ್ಲಿ ಕಲಬುರ್ಗಿಯಷ್ಟು ದೂರದ ಸಂಬಂಧ ಅಸಂಭಾವ್ಯ. ಏನಿದ್ದರೂ ಹತ್ತೆಂಟು ಮೈಲಿಗಳ ಫಾಸಲೆಯಲ್ಲಿ ಬೀಗತನ ಹೆಚ್ಚು. ಒಂದು ಹೇಳಿಕೆಯಂತೆ ತಿಮ್ಮವ್ವ ಹೊನವಾಡ ದೇಶಪಾಂಡೆಗಳ ಮನೆತನದವಳು ಎಂಬುದನ್ನು ಒಪ್ಪಬಹುದು. ಹೊನವಾಡ ಹಳ್ಳಿಯು ವಿಜಾಪುರ ಹಾಗೂ ಬಿಗಳಿ ಎರಡೂ ಊರುಗಳಿಗೆ ಅಷ್ಟೇ ಹತ್ತಿರದ ಹಳ್ಳಿ. ಆದರೆ ಇದಕ್ಕೆ ಆಧಾರವಿಲ್ಲ. ಕನ್ನಡ ಹಾಗೂ ಸಂಸ್ಕೃತ ಚರಿತೆ -ಸ್ತೋತ್ರಗಳಲ್ಲಿ ತುಕ್ಕವ್ವನನ್ನು ಅತ್ತಿಗೆ ಎಂದು ಕರೆದಿದ್ದಾರೆ. ಮರಾಠಿ ಚರಿತ್ರೆಯಲ್ಲಿ ಅವಳನ್ನು ಬಹಿಣ ಎಂದು ಕರೆಯಲಾಗಿದೆ.

೨೬. ಸಂಸ್ಕೃತ ಸ್ತೋತ್ರ ಶ್ಲೋಕ ೩.೪

೨೭. ಮರಾಠಿ ಚರಿತ್ರೆ: ಓವಿ ೪೧

೨೮. ಮರಾಠಿ ಚರಿತ್ರೆ ಓವಿ ೪೪ ರಿಂದ ೪೬

೨೯. ಅದೇ ಓವಿ ೪೮ ರಿಂದ ೫೦ ಸಂಸ್ಕೃತ ಸ್ತೋತ್ರ ಶ್ಲೋಕ ೪.೯

೩೦. ಮರಾಠಿ ಚರಿತ್ರೆ ಓವಿ ೫೧ ರಿಂದ ೫೩

೩೧. ಅದೇ ಓವಿ ೫೬

'ಆದೀಚ ದಾತಾ ಅಸೇ ಕರ್ಣ। ತ್ಯಾವರೀ ಅಭಿಷೇಕಿಲಾ ದುರ್ಯೋಧನ।।
ಮಗ ದಾತೃತ್ವಾಸ ಕಾಯ ಉಣೆ। ಯಾಚಕ ಜನ ತೃಪ್ತ ಹೋತೀ।। ೫೬।।

೩೨. ಮರಾಠಿ ಚರಿತ್ರೆ, ಓವಿ: ೫೮

೩೩. ಝುಬೇರಿ: ಬಸಾತಿನ-ಉಸ್-ಸಲಾತಿನ ಪುಟ ೪೮೬

೩೪. ಮರಾಠಿ ಚರಿತ್ರೆ, ಓವಿ: ೧೪೧ರಿಂದ ೧೪೮

೩೫. ಅದೇ ಓವಿ ೧೫೧: 'ಮಹಿಪತಿರಾಯಾಚಿ ಬಹಿಣ' ಎಂದು ಮರಾಠಿ ಚರಿತ್ರೆಯಲ್ಲಿ, 'ತುಕ್ಕವ್ವನು ನಿಮ್ಮತ್ತಿಗೆ ಭಾವಿಕಳು' ಎಂದು ಕನ್ನಡ ಚರಿತ್ರೆ (ನುಡಿ ೧೬) 'ಜ್ಯೇಷ್ಠ ಭ್ರಾತೃಸತೀ' ಎಂದು ಸಂಸ್ಕೃತದಲ್ಲಿ (ಶ್ಲೋಕ -೨೬) ಉಲ್ಲೇಖವಾಗಿದೆ.

೩೬. ಮರಾಠಿ ಚರಿತ್ರೆ : ಓವಿ ೫೨ ರಿಂದ ೧೬೦

೩೭. ಅದೇ: ಓವಿ ೬೨ ರಿಂದ ೭೧

೩೮. ಅದೇ ಓವಿ: ೧೬೮ ರಿಂದ ೧೭೯

೩೯. ಅದೇ ಓವಿ: ೧೮೦ - ೧೮೧

'ಜವಳಿ ಹೋತಾ ಶಿಷ್ಯ ಸೂಜ್ಞ। ಪಯ ಆಣಲೆ ಪಾತ್ರಭರೂನ।।
ಠೇವಿತಾ ಸನ್ಮುಖ ನೇಊನ। ಕೇಲೆ ಪ್ರಾಶನ ಸಪ್ರೇಮ ।।೧೮೦।।
ಕ್ಷಣ ಏಕ ರಾಹೋನಿ ನಿವಾಂತ। ಪ್ರಾಶಿಲೆ ದುಗ್ಧ ಕಾಢಿಲೆ ಪಾತ್ರಾತ।
ಮ್ಹಣೆ ಮಹಿಪತಿ ಘೇ ತ್ವರಿತ। ಪಾತ್ರಾ ಹಾತಾತ ದಿ ಘಲೆ ।।೧೮೧।।

ಎಂದು ಇತ್ಯಾದಿಯಾಗಿ ತರಿಸಿದ ಹಾಲನ್ನು ಮೊದಲು ಸ್ವಾಮಿಗಳು ಕುಡಿದು, ಅನಂತರ ಅದನ್ನು ಕಕ್ಕಿ (ಉಗುಳಿ) ಬಂದ ಹಾಲನ್ನು ರಾಯರಿಗೆ ಕುಡಿಯಲು ಕೊಟ್ಟರು. ಎಂದು ಹೇಳಿದೆ. ಆದರೆ ಕನ್ನಡ ಚರಿತ್ರೆಯಲ್ಲಿ- 'ಮುಂಕದೆ ಕರೆಯುತ ಕರದಲಿ ಕರವಿಟ್ಟು। ಉಪದೇಶ ಕೊಟ್ಟು ।।೪।। ಎಂದು ಹೇಳಿದ್ದರೆ, ಸಂಸ್ಕೃತ ಸ್ತೋತ್ರದಲ್ಲಿ 'ದದ್ಭಕ್ತಿ ಮನವೇಕ್ಷ್ಯ ಯೋಗ ವಿಭವ। ಸ್ವಾಕ್ತಂ ಸುಶೀಲಂ ತದಾದತ್ವಾ ಮಸ್ತಕ। ಹಸ್ತ ಪದ್ಮ ಮುತುಲಂ ಸದ್ಯೋ(ಗಿನಾ ಭೂಪತೇ:।।೧೪।। ಎಂದು ಹೇಳಿದೆ.

೪೦. ಜಿ. ವರದರಾಜ್‌ರಾವ (ಸಂ): ಶ್ರೀಮಹಿಪತಿರಾಯರ ಕೃತಿಗಳ ಕೀರ್ತನೆ ೮೮

೪೧. ಅದೇ ಕೀರ್ತನೆ : ೬೮

೪೨. ಮರಾಠಿ ಚರಿತ್ರೆ: ಓವಿ ೧೯೬ ರಿಂದ ೨೦೨

೪೩. ಮರಾಠಿ ಚರಿತ್ರೆ: ಓವಿ ೨೦೩ ರಿಂದ ೨೦೫

ಈ ವಿಷಯದಲ್ಲಿ ಕನ್ನಡ ಚರಿತ್ರೆ 'ಮಂದಿ ಕುದುರೆಗಲ್ಲ ಅಪ್ಪಣೆಕೊಟ್ಟು। ನಿಲ್ಲದ್ದರುಷ ತೊಟ್ಟು ।।೪।।' ಎಂದು ಹೇಳುತ್ತದೆ.

ಸಂಸ್ಕೃತ ಸ್ತೋತ್ರದಲ್ಲಿ 'ತೌ ದೃಷ್ಟ್ವಾ ಮುನಿ ಭಾಸ್ಕರೋಯಮುದಿತೋ ಕಾಲಂಚ ಪಕ್ವಂ ಗತಂ ಮತ್ವೋವಾಚ ತ್ವದೀಯ ಸೈನ್ಯ ಮುಖಿಳಂ ತ್ಯಕ್ತ್ವಾಹಿ ಮತ್ಸನ್ನಿಧೌ।।

ಎಂದು ಹೇಳಿದೆ. ಗ್ಯಾಝೆಟಿಯರ್‌ದಲ್ಲಿ 'Mahapati returned to Bijapur, resigned his Office and gave away his property in arms' ಎಂದು ಉಲ್ಲೇಖವಾಗಿದೆ. ಅಂತು ಅವರು ಆವರೆಗೆ ಗಳಿಸಿದ ದ್ರವ್ಯ ಆಸ್ತಿಯನ್ನೆಲ್ಲ ದಾನಮಾಡಿದರು ಎಂಬುದು ಖಚಿತ.

೪೪. ಮರಾಠಿ ಚರಿತ್ರೆಯಲ್ಲಿ ಹೇಳಿದಂತೆ, ಮಹಿಪತಿರಾಯರು ವಿಜಾಪುರದಲ್ಲಿಯ ಎಲ್ಲವನ್ನೂ ದಾನ ಮಾಡಿದ್ದರು. ಸಾರವಾಡದಿಂದ ತಿರುಗಿ ವಿಜಾಪುರಕ್ಕೆ ಬಂದ ನಂತರ ಅವರು ಎಲ್ಲಿ? ಹೇಗೆ? ಇದ್ದರು ಎಂಬುದನ್ನು ಖಚಿತವಾಗಿ ಹೇಳಲು ಆಧಾರಗಳಿಲ್ಲ. ಕನ್ನಡ ಚರಿತ್ರೆಯಲ್ಲಿ 'ಮುನಿವರ ನಾಜ್ಞೆದಿ ಧ್ವಜಸ್ಥಳಕೆ ಬರುತಾ। ಕಲದಿಸಲ್ಲಿರುತಾ।।' ಎಂದು ಹೇಳಿದೆ ಅದನ್ನೇ ಸಂಸ್ಕೃತ ಸ್ತೋತ್ರದಲ್ಲಿ 'ಗುರ್ವಾಜ್ಞಾಂ ಶಿರಸೀಕುರ್ವನ್ನತ್ರ ಸಹಸಾಸತ್ವಾ ಗುರೋ: ಪಾದುಕೌ ನಿರ್ಗತ್ಯಾ ಕುನಿಕೇತನಂ ಸ್ವನಗರೇ ತಾಭ್ಯಾಂ ಸುದಾ ಪ್ರಾಪ್ತಚ।।' ಎಂದು ಹೇಳಿದೆ. ಅವರು ಸಾರವಾಡದಿಂದ ತಿರುಗಿ

ವಿಜಾಪುರಕ್ಕೆ ಬಂದು ವಾಸಿಸಿದ್ದು ಖಚಿತವಾಗುತ್ತದೆ. ಅವರಿಗೆ ಇರಲು, ಖವಾಸಖಾನನೋ, ಬಾದಶಹನೋ ಇಲ್ಲವೆ ಯಾರೋ ಭಕ್ತರು ಮನೆಯನ್ನು ಕೊಟ್ಟಿರಲೂ ಸಾಕು.

೪೫. ಕನ್ನಡ ಚರಿತ್ರೆ: ನುಡಿ ೯

೪೬. ಮರಾಠಿ ಚರಿತ್ರೆ: ಓವಿ ೧೯೩

'ಮ್ಹಣೆ ತುಜೆ ಉದರೀ ದೋನ ಪುತ್ರ। ಪಸ್ಮತೀಗುಣವಂತ ಪವಿತ್ರ।

ಎಂದು ಮುಂತಾಗಿ ಗುರುಭಾಸ್ಕರ ಸ್ವಾಮಿಗಳು ವರವನ್ನು ಕೊಟ್ಟ ವಿಷಯ ಬರುತ್ತದೆ.

ಕನ್ನಡ ಚರಿತ್ರೆ: ನುಡಿ ೮ ಹಾಗೂ ೧೩

'ಎನ್ನ ನಿನ್ನ ಸಂತತಿ ಸಂಪತ್ತೌಘಾ। ನಿನ್ನಲ್ಲಿ ಈಗಾ। ಉನ್ನತವಾಗುವ ದೆಂದ್ಧರಿಸಿದನಾಗಾ।' ಎಂದು ಹರಕೆಯ ವಿಷಯವನ್ನು ಹೇಳಿ ಮುಂದೆ ಕಾಖಂಡಕಿಯಲ್ಲಿ ನೆಲೆಸಿದ ನಂತರ ಸಂತತಿ ಆಯಿತೆಂದು ಮುಂದೆ ಕಾಖಂಡಕಿಯಲ್ಲಿ ನೆಲೆಸಿದ ನಂತರ ಸಂತತಿ ಆಯಿತೆಂದು (ನುಡಿ ೧೩) ಹೇಳುತ್ತಾರೆ. ಆದರೆ ಹರಕೆಗೂ - ಸಂತತಿಗೂ ಮಧ್ಯ ೧೮-೨೦ ವರುಷದ ಅಂತರ ಬೀಳುತ್ತದೆ!

ಸಂಸ್ಕೃತ ಸ್ತೋತ್ರ: ಶ್ಲೋಕ ೧೯

'ಮತ್ವತ್ಸಂತತಿ ದ್ವಂದ್ವ ಮೇತದುದ್ಧರೇ ನಿ:।
ಸಂಶಯೋ ನಾ ಶುಭೋತೆ ಕೀರ್ತಿ ರ್ವಿಮಲಾ।
ಭವಿಷ್ಯತಿ ಭುವೀತ್ಯುಕ್ತ್ವಾ ವರಂ ಭಾಸ್ಕರ:॥
ದತ್ವಾಯುಗ್ಮ ಫಲಂ ... .. ....

ಇತ್ಯಾದಿಯಾಗಿ ಹೇಳಿದೆ. ವಾಸ್ತವದಲ್ಲಿ ಯಾವೊಂದು ವರ ಮುಂದಿನ ಕೆಲ ದಿನ/ ವರುಷಗಳಲ್ಲಿ ಫಲಿಸುವುದು ವಾಸ್ತವಿಕವೆನಿಸುತ್ತದೆ.

೪೭. ಕನ್ನಡ ಚರಿತ್ರೆ: ನುಡಿ ೧೨: ಶಹಪುರದಲ್ಲಿ ಮೂರು ವರುಷ ಇದ್ದರೆಂದು ಹೇಳಲಾಗಿದೆ. ಸಂಸ್ಕೃತ ಸ್ತೋತ್ರ: ಶ್ಲೋಕ ೨೧ ರಲ್ಲಿ ಶಹಪುರಕ್ಕೆ ಹೋದ ಉಲ್ಲೇಖವಿದೆ. ಆದರೆ ನಿರ್ದಿಷ್ಟ ಅವಧಿಯನ್ನು ಹೇಳಲಿಲ್ಲ. 'ಗತ್ವಾ ಶಾಪುರನಾಮಾಖ್ಯೆ ನಗರೇ। ಕೃತ್ವಾ ಸ್ವವಾಸ ಗೃಹಂ ಸರ್ವಂ ತತ್ರ। ನಿವಾಸ್ಯ ಪರ್ವತಗುಹಾವಾಸೇ ಸ್ವಯೋಗ ಕ್ರಮಂ ॥೨೧॥ ಎಂದು ಹೇಳಲಾಗಿದೆ. ಇಲ್ಲಿಯ ಅವಧಿಯಲ್ಲಿ ಮಾಂಸನೈವೇದ್ಯವನ್ನು ಫಲ-ಪುಷ್ಪವನ್ನಾಗಿ ಮಾರ್ಪಡಿಸಿದ ಪವಾಡದ ಉಲ್ಲೇಖ ಸಂಸ್ಕೃತ ಸ್ತೋತ್ರದಲ್ಲಿ ಬರುತ್ತದೆ. ಶ್ಲೋಕ ೨೨-೨೩

೪೮. ಕನ್ನಡ ಚರಿತ್ರೆ: ನುಡಿ ೧೩, ಕರಣಿಕರ ಪ್ರಸ್ತಾಪವಿದೆ.

ಸಂಸ್ಕೃತ ಸ್ತೋತ್ರ: ಶ್ಲೋಕ ೨೪. 'ತಂ ನಿಷ್ಕಸ್ಯ ವಿನಿರ್ಗತೋ ಮಹಿಪತಿ: ಕಾಖಂಡಕೀ ಸುಸ್ಥಳಂ' ಎಂದಷ್ಟೇ ಹೇಳಲಾಗಿದೆ. ಶಹಪುರದಿಂದ ನೇರವಾಗಿ ಕಾಖಂಡಕಿಗೇ ಹೋಗಿ ನೆಲೆಸಿರಲೂ ಬಹುದು.

೪೯. ಕನ್ನಡ ಚರಿತ್ರೆ: ನುಡಿ ೧೭

೫೦. ಹಸ್ತಪ್ರತಿ 'ಟ' : ಕೀರ್ತನೆ ೨೧೭

೫೧. ಪುಣೆ ಆರ್ಕೀವ್ಸದಲ್ಲಿಯ : ಕ ಪ ೪೭೨ ನೇಯ ಕಾಗದ

೫೨. ಶ್ರೀಪತಯ್ಯ ಹರಿದಾಸ (ಸಂ) ಸೇವಾತತ್ವ ಪುಟ ೨೫

ದೋಣಿ ಎಂಬುದು ವಿಜಾಪುರ ಜಿಲ್ಲೆಯಲ್ಲಿ ಹರಿದ ಉಪ್ಪುನೀರಿನ ಸಣ್ಣ ಹೊಳೆ. ಆ ನದಿಯ ದಂಡೆಯ ಪ್ರದೇಶದಲ್ಲೆಲ್ಲ ದೇವರಾಯರು ತಮ್ಮ ಸೂರತನದಿಂದ ಶಿವಾಜಿಯಂತೆ ಪ್ರಸಿದ್ಧರಾದರೆಂದು ಶ್ರೀಪತಿ ತನುಜರ ಕನ್ನಡ ಚರಿತ್ರೆ (ನುಡಿ ೯) ಹೇಳುತ್ತದೆ. ಪರಂಪರೆಯಿಂದಲೂ ಕೇಳಿ ಬರುತ್ತದೆ. ಐತಿಹಾಸಿಕ ಆಧಾರ ದೊರೆತಿಲ್ಲ.

೫೩. ಕೊಲ್ಹಾರದಲ್ಲಿದ್ದ ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರನ್ನು ಕಾಣಲು ಹೋದಾಗ ಅಲ್ಲಿಯೇ ಕಾಲವಾದರೆಂದು ಪರಂಪರೆ ಹೇಳುತ್ತದೆ. 'Mahipathi died at Kolhar' ಎಂದಿಷ್ಟೇ

ಮುಂಬಯಿ ಗ್ಯಾಝಿಟಿಯರ್ ಹೇಳುತ್ತದೆ. (Vol.XXIII ಪುಟ ೬೫೭)

೫೪. ಶ್ರೀಪತಯ್ಯ ಹರಿದಾಸ (ಸಂ): ಸೇವಾತತ್ವ ಪುಟ ೩೭

೫೫. ಕರ್ನಾಟಕ ರಿಸರ್ಚ ಇನ್‌ಸ್ಟಿಟ್ಯೂಟ ಧಾರವಾಡ: ಹಿಸ್ಟಾರಿಕಲ್ ಡಾಕ್ಯುಮೆಂಟ್ಸ ಆಫ್ ಕರ್ನಾಟಕ: ಪುಟ ೪೧

೫೬. ಅದೇ ಪುಟ ೪೨

"ನೂತನ ದೇಶಮುಖಿ ವ ನಾಡಗೌಡಕೀ ವ ಸ್ಥಳ ನಾಡಗೌಡಕೀ ಮಹಾಲ ಶಿರೂರ, ಬಾಲಾಪೂರ, ಕೊಲ್ಹಾರ ಹೊಸಕೋಟ, ಪೇಣಗುಂಡ, ಬೂದಿಹಾಳ ಅಸೇ ಸಹಾಮಹಾಲಾಂಚೆ ವತನ ಸರಫರಾಜ ಹೋಊನ ನಾಡಗೌಡಕೀ ಸರಕಾರ ಬೇಸಮೀ ವಿಜಾಪುರಚೆ ಮುತಾಲಿಕ ಸನದ ಶಾಮರಾವ ಚಿಂತಾಮಣಿ ಯಾಚೆ ನಾವೆ ಕರೂನ ದಿಲೆ" ಈ ಶಾಮರಾವ ಮಹಿಪತಿರಾಯರ ಶಿಷ್ಯನಾಗಿದ್ದ ಉಲ್ಲೇಖವೂ ದೊರೆಯುತ್ತದೆ. ಅವನು ಹಾಕಿಕೊಟ್ಟ ಉಂಬಳಿ ಮಾಲ್ಕೀ ಹಕ್ಕು ಅವನೇ ಆಗಿದ್ದು ವಹಿವಾಟದಾರ ಹೆಸರಿನಲ್ಲಿ ಮಹಿಪತಿ ಸಂಸ್ಥಾನ ಇರುತ್ತಿತ್ತು.

೫೭. ಶ್ರೀಪತಯ್ಯ ಹರಿದಾಸ (ಸಂ): ಸೇವಾತತ್ವ ಪುಟ ೩೫

೫೮. ಭೀ ಸ್ವಾ. ಕಮಲಾಪುರ: ಸತ್ಕಥಾ ಪುಟ ೮೯

೫೯. ಅದೇ ಪುಟ ೧೯೫

೬೦. ಹಸ್ತಪ್ರತಿ 'ಬ': ಪದ ೧೯.

## ಅಧ್ಯಾಯ - ಐದು

# ಕೃತಿಗಳು

೫.೧ ಅಂಕಿತ:

ಹರಿದಾಸರ ಕೃತಿಗಳಲ್ಲಿ ಅಂಕಿತಕ್ಕೆ ತುಂಬ ಮಹತ್ವದ ಸ್ಥಾನವಿದೆ. 'ಸಾಧಾರಣವಾಗಿ ದೀಕ್ಷೆ ನೀಡುವ ಗುರುವೇ ಶಿಷ್ಯನಿಗೆ ಒಂದು ಅಂಕಿತವನ್ನು ನೀಡುವದು ನಮ್ಮಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿರುವ ಸಂಪ್ರದಾಯ. ಹಾಗಿಲ್ಲವಿದ್ದಲ್ಲಿ ತಮ್ಮ ಇಷ್ಟದೇವತೆಯ ಹೆಸರಿನಲ್ಲಿ ಅಂಕಿತವನ್ನು ಬಳಸುವುದುಂಟು. ಕೆಲವರಿಗೆ ಗುರುಗಳು ಕನಸಿನಲ್ಲಿ ಕಾಣಿಸಿಕೊಂಡು ಅಂಕಿತವನ್ನು ಅನುಗ್ರಹಿಸುವುದೂ ಉಂಟು .....'' ಎಂದು ಡಾ. ಜಿ. ವರದರಾಜ ರಾವ್ ಹೇಳುತ್ತಾರೆ. //೧// ಈ ಕಾರಣವನ್ನು ಮುಂದುಮಾಡಿ ''ಮಹಿಪತಿರಾಯರಾದರೋ ಈ ಬಗ್ಗೆ ಯಾವ ಸುಳಿವನ್ನೂ ನೀಡಿರುವುದಿಲ್ಲ. ಅವರ ಜನ್ಮನಾಮ ಮಹಿಪತಿ ಎಂದುವಿದಿತವಾಗುತ್ತದೆ. ಅದೇ ಕಾಲಕ್ರಮದಲ್ಲಿ ಮಹಿಪತಿರಾಯರೆಂದು ಬಳಕೆಗೆ ಬಂದಿರಬಹುದು'' ಎಂದೂ ಹೇಳುತ್ತಾರೆ. ಆದರೆ ರಾಯರ ಜನ್ಮನಾಮ 'ಮಹಿಪತಿ' ಎಂದು ವಿದಿತವಾಗಲು ಆಧಾರಗಳನ್ನು ಕೊಡುವುದಿಲ್ಲ!

ಅದರಂತೆ, 'Mahipati-Dasa flourished in the 17th Century AD at Kakhandki in the Bijapur District. But his name is not borne on the list of the Vaishnava Haridasa of traditional fame, as his songs do not bear an 'ankita' received from a recognised Guru'' ಎಂದು ಶ್ರೀ ಆರ್.ಎಸ್. ಪಂಚಮುಖಿ ಅವರು ಹೇಳುತ್ತಾರೆ.//೨//

ಹರಿದಾಸರ ಲಕ್ಷಣ ದೀಕ್ಷೆ ಹಾಗೂ ಅಂಕಿತಗಳ ವ್ಯಾಖ್ಯೆಗಳು ರೂಪುಗೊಂಡದ್ದು ವಿಜಯದಾಸರ ಕಾಲದಲ್ಲಿ ಎಂಬುದು ನಿರ್ಣೀತವಾದದ್ದೇ ಆಗಿದೆ. ಅವರು ಬರೆದ 'ಹರಿದಾಸ ಲಕ್ಷಣ' ಎಂಬ ಸುಳಾದಿ ಈ ನಿಯಮಗಳಿಗೆ ಮೂಲವಾಯಿತು. ಅವರು ತಮ್ಮ ಸುಳಾದಿಯಲ್ಲಿ ಹರಿದಾಸರ ಲಕ್ಷಣಗಳನ್ನು ಹೇಳುತ್ತ ಹರಿದಾಸನಿಗೆ ಯೋಗ್ಯ ಗುರುವಿನಿಂದ ದೀಕ್ಷೆ, ಹಾಗು ಅಂಕಿತ ಪ್ರದಾನಗಳನ್ನು ಒತ್ತಿ ಹೇಳಿದ್ದಾರೆ. ಆದರೆ ವಿಜಯದಾಸರ ಮೊದಲು ಈ ದೀಕ್ಷೆ, ಅಂಕಿತ ಹಾಗು ಲಕ್ಷಣಗಳ ಗೋಜಲುಗಳು ಇದ್ದ ದಾಖಲೆಗಳು ದೊರೆಯುವುದಿಲ್ಲ -ಎಂಬುದನ್ನು ಗಮನಿಸಬೇಕು. ಅಂದಿನ ರಾಜಕೀಯ, ಸಾಮಾಜಿಕ ಹಾಗು ಧಾರ್ಮಿಕ ಪರಿಸ್ಥಿತಿಗಳಿಗೆ ಅನುಗುಣವಾಗಿ ಜನಸಾಮಾನ್ಯರಲ್ಲಿ ಭಕ್ತಿಯ ಮೂಲಕ ಸಮಾಜದಲ್ಲಿ ನೀತಿಯನ್ನು ಬೋಧಿಸುವುದರ ಜೊತೆಗೆ ಒಂದು ಧರ್ಮದ ಕುರಿತು ಪ್ರೀತಿ-ಅಭಿಮಾನಗಳನ್ನು ಬೆಳೆಸುವುದು ಹರಿದಾಸರ ಮೂಲ ಉದ್ದೇಶವಾಗಿತ್ತು. 'ಹರಿ' ಅದಕ್ಕೆ ನಿಮಿತ್ತನಾದ ಅವನ ದಾಸರು ಅವನನ್ನು ಕುರಿತು ಹಾಡಿ ದಣಿದರು. ಹರಿದಾಸ ಕೂಟದಲ್ಲಿ ಒರಿಯರಾದ

ಶ್ರೀಪಾದರಾಯರು, ವ್ಯಾಸರಾಯರು ಹಾಗು ವಾದಿರಾಜರು ಸಂನ್ಯಾಸಿಗಳಾಗಿದ್ದರು. ಅವರಿಗಂತೂ ಈ ದಾಸ ದೀಕ್ಷೆ, ಅಂಕಿತ ಹಾಗೂ ಲಕ್ಷಣಗಳ ಗೊಡವೆಗಳು ಇರಲಿಲ್ಲ. ತಾವು ಪೂಜಿಸುತ್ತಿದ್ದ ಇಷ್ಟದೇವತೆಯೇ ಅವರ ಅಂಕಿತವಾಯಿತು. ತಾವು ನಂಬಿದ ಧರ್ಮ, ದೇವರು ಹಾಗೂ ಅವನ ಪೂಜೆ ಇತ್ಯಾದಿಗಳು ಜನಸಾಮಾನ್ಯರಿಗೂ ಅರ್ಥವಾಗಲಿ ಎಂದು ಕನ್ನಡ ಭಾಷೆಯಲ್ಲಿಯೇ ಅವುಗಳ ವಿವರಣೆಗಳನ್ನು ಕೊಡಹತ್ತಿದರು. ಇವರೊಂದಿಗೆ ಬದುಕಿನ ಯಾವುದೋ ಒಂದು ಘಟ್ಟದಲ್ಲಿ ವೈರಾಗ್ಯ ತಾಳಿ, ಸಾಮಾಜಿಕ ಕಳಕಳಿಯಿಂದ ಕೆಲವು ಗೃಹಸ್ಥರು ಸಂನ್ಯಾಸಿಗಳಾಗದೆ ಈ ದಾರಿ ತುಳಿದರು. ಅವರಿಗೆ ದಾಸರೆಂದರು. ಆಗೆಲ್ಲ ಇವರನ್ನು ದೀಕ್ಷೆ, ಅಂಕಿತ ಹಾಗು ಲಕ್ಷಣಗಳ ಮಾಪನದಿಂದ ಅಳೆದು ದಾಸರೆಂದು ಘೋಷಿಸಲಿಲ್ಲ. ಪರ ಮತ-ಧರ್ಮದ ಆಕ್ರಮಣದ ವಿರುದ್ಧ ಎದ್ದ ಒಂದು ಕ್ರಾಂತಿ, ಆ ಕ್ರಾಂತಿಯಲ್ಲಿ ಸಹಸ್ರಾರು ಜನ ಸಂನ್ಯಾಸಿಗಳು, ಸಾಧುಗಳು, ಸಂತರು ಗೃಹಸ್ಥರು ಇತ್ಯಾದಿಯಾಗಿ ಭಾಗವಹಿಸಿದರು. ಅವರೆಲ್ಲರ ಹೆಸರು ದೆಸೆಗಳೂ ನಮಗಿಂದು ಗೊತ್ತಿರಲಿಕ್ಕಿಲ್ಲ. ಅವರುಗಳಲ್ಲಿ ಬರವಣಿಗೆಯ ಮೂಲಕ ಪ್ರಸಿದ್ಧರಾದವರೆಂದು ಇಂದು ನಾವು ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ಪುರಂದರ -ಕನಕ - ವೈಕುಂಠ ದಾಸರೇ ಮೊದಲಾದವರನ್ನು ಕೈ ಬೆರಳ ಮೇಲೆ ಎಣಿಸುವಷ್ಟು ಸಂಖ್ಯೆಯ ಹೆಸರುಗಳನ್ನು ಮಾತ್ರ ದಾಖಲಿಸುತ್ತೇವೆ. ಅದು ಕಳೆದ ಶತಮಾನದ ಅಂತ್ಯದಿಂದ ಈ ಶತಮಾನದ ಮಧ್ಯದವರೆಗೆ ನಡೆದ ಭಾರತದ ಸ್ವಾತಂತ್ರ್ಯ ಚಳುವಳಿ ಇದ್ದಹಾಗೆ. ಅದರಲ್ಲಿ ಭಾಗವಹಿಸಿದ ಲಕ್ಷಾವಧಿ ಜನರಲ್ಲಿಯ ಎಷ್ಟು ಜನರನ್ನು ಇಂದು ನಾವು ನೆನೆಸುತ್ತೇವೆ?

ಪುರಂದರದಾಸರು ತಮ್ಮ ಗುರುಗಳಾದ ವ್ಯಾಸರಾಯರನ್ನು ಕುರಿತು ಹಾಡಿದ ಒಂದು ಪದದಲ್ಲಿ 'ಪಂಕಜನಾಭ ಪುರಂದರ ವಿಠಲನ ಅಂಕಿತವೆನಗಿತ್ತ ಗುರು ವ್ಯಾಸ ಮುನಿರಾಯ' ಎಂದು ಹೇಳಿದ್ದಾರೆ. ಅದನ್ನು ಉಲ್ಲೇಖಿಸುತ್ತ ಅವರ ಅಂಕಿತ ಪ್ರದಾನದ ವಿಷಯವನ್ನು ಹೇಳಲಾಗುತ್ತದೆ. ಆದರೆ ಪುರಂದರ ಎಂಬುದು ಅವರಿಗೆ ಕೊಟ್ಟ ಹೆಸರೆ? ಅಥವಾ ಅವರ ಇಟ್ಟ ಹೆಸರು ಪುರಂದರ ಎಂದಾಗಿದ್ದು ಅದಕ್ಕೆ ವಿಠಲ ಪದವನ್ನು ಸೇರಿಸಿದರೆ? ಗೊತ್ತಿಲ್ಲ. ಯಾಕೆಂದರೆ ಅವರ ಮೊದಲ ಅಥವಾ ಮೂಲ ಹೆಸರೆಂದು ಹೇಳುವ ಅನೇಕ ಹೆಸರುಗಳು ಹುಟ್ಟಿದ್ದು ಅವರು ಕಾಲವಾಗಿ ನೂರ ಐವತ್ತು ವರುಷಗಳಾದ ಮೇಲೆ -ವಿಜಯದಾಸರು ಹೇಳಿದರೆಂಬುದನ್ನು ಗಮನಿಸಬೇಕು. ಕನಕದಾಸರಿಗೆ, ವೈಕುಂಠದಾಸರಿಗೆ ಅಂಕಿತ ಪ್ರದಾನವಾದ ಉಲ್ಲೇಖವಾಗಲೀ ಅವರು ದೀಕ್ಷೆ ಪಡೆದ ಗುರುಗಳ ಹೆಸರನ್ನಾಗಲೀ ಈ ವರೆಗೆ ಗುರುತಿಸಲು ಆಗಿಲ್ಲ. ಸ್ವತಃ ವಿಜಯದಾಸರಿಗೆಯೇ ದೀಕ್ಷೆ ಹಾಗೂ ಅಂಕಿತ ಪ್ರದಾನಗಳು ಕಂಡುಬರುವುದಿಲ್ಲ

ಮಾದರಿಯನ್ನಾಗಿಟ್ಟುಕೊಂಡು ಅವರ ಅನಂತರದ ಜನ ಅದಕ್ಕೊಂದು ರೂಪವನ್ನು ಕೊಟ್ಟರು, ಚೌಕಟ್ಟನ್ನು ನಿರ್ಮಿಸಿದರು. ಈ ರೂಪ ಚೌಕಟ್ಟಿನ ಮೊದಲಿಗರೆಂದು ೧೮ನೆಯ ಶತಮಾನದ ವಿಜಯದಾಸರನ್ನು ಗುರುತಿಸಲಾಗುತ್ತದೆ. ಹರಿದಾಸರನ್ನು ಗುರುತಿಸಲು ಅವರು ಹೇಳಿದ ಲಕ್ಷಣಗಳನ್ನು ಬಳಸಲಾಗುತ್ತದೆ. ಆದರೆ ಅವರಕ್ಕಿಂತ ಮೊದಲಿನ ಹರಿದಾಸರಲ್ಲಿ ಈ ಲಕ್ಷಣಗಳನ್ನು ಹುಡುಕುವುದು ಉಚಿತವೆನಿಸುವುದಿಲ್ಲ.

ವಾಸ್ತವದಲ್ಲಿ ವಿಜಯನಗರದ ಪತನದವರೆಗೆ ಉದಾರ ಮತವಾದಿಗಳಾಗಿದ್ದ ಮಾಧ್ವ ಮತಾನುಯಾಯಿಗಳು ಅನಂತರದ ಮಧ್ಯಂತರದ ಸುಮಾರು ಒಂದು ನೂರು ವರುಷಗಳಾದ ಮೇಲೆ ಒಮ್ಮೆಲೆ ಅತಿ ನಿಷ್ಠುರ (Rigid) ರಾದುದನ್ನು ಕಾಣುತ್ತೇವೆ. ಅದರ ಚರ್ಚೆ ಇಲ್ಲಿ ಅಪ್ರಸ್ತುತ ಆದರೆ ವ್ಯಾಸರಾಯರ ಕಾಲದಲ್ಲಿ ಅವರು ಹತ್ತಿರ ಕುಳ್ಳಿರಿಸಿಕೊಂಡ ಕನಕದಾಸರಂಥವರು, ಶ್ರೀವೈಷ್ಣವ ಮತದ ವೈಕುಂಠದಾಸರ ಹತ್ತಿರ ತಾವಾಗಿಯೇ ಹೋದ ವಾದಿರಾಜ ಯತಿಗಳಂಥವರು ಮುಂದಿನ ದಿನಗಳಲ್ಲಿ ಕಾಣುವುದಿಲ್ಲ. ಮಾಧ್ವ ಮತಕ್ಕೆ ಒಂದು ಲಕ್ಷ್ಮಣ ಗೆರೆಯನ್ನು ಎಳೆದರು. ಆ ಮತದಲ್ಲಿಯೇ ಇದ್ದ ಭಿನ್ನ ಸಂಪ್ರದಾಯ ಮಠ-ಮಠಗಳ ನಡುವೆಯೂ ಹಣಕಿ ಹಾಕಿತು. ಅಂಥ ದಿನಗಳಲ್ಲಿ ವಿಜಯದಾಸರು ಸಹಜವಾಗಿ ಎಲ್ಲರ ಸೊತ್ತಾಗಿದ್ದ 'ಹರಿದಾಸ್ಯ'ವನ್ನು ಮಾಧ್ವಮತಕ್ಕೆ ಸೀಮಿತಗೊಳಿಸಿದರು. ಅಂದಿನಿಂದ ಮುಂದೆ ಬಂದ ಹರಿದಾಸ ಸಾಹಿತ್ಯದಲ್ಲಿ ಮಾಧ್ವ ಮತ ತತ್ವಗಳ ಕಟ್ಟು-ನಿಟ್ಟಿನ ಸೇರ್ಪಡೆಯಾಯಿತು. ಅದು ಈ ಇಪ್ಪತ್ತನೆಯ ಶತಮಾನದ ಎರಡು ಮೂರನೆಯ ದಶಕದವರೆಗೂ ನಡೆದುಕೊಂಡು ಬಂದಿತು. ಅಂತೆಯೇ ತುಂಗಭದ್ರೆಯ ದಡದವರನ್ನು ಬಿಟ್ಟರೆ, ಉಳಿದವರು ಹರಿದಾಸರೇ ಅಲ್ಲ ಎಂಬಂತೆ ಆಯಿತು. ವಿಜಯದಾಸರ ಪರಂಪರೆಯಲ್ಲಿ ಬಂದವರಷ್ಟೇ ಹರಿದಾಸರೆನಿಸಿದರು. ಅಂತೆಯೇ ಹರಿದಾಸ ಸಾಹಿತ್ಯದ ಅಭ್ಯಾಸಕ್ಕೆ ಪ್ರಾರಂಭವಾದಾಗ ಈ ಶತಮಾನದ ವಿದ್ವಾಂಸರು ಈ ನಿಯಮಗಳ ಚೌಕಟ್ಟಿನಲ್ಲಿಯೇ ಹರಿದಾಸರನ್ನು ಕಾಣಲು ಪ್ರಯತ್ನಿಸಿದರು. ಅದಕ್ಕೊಂದು ಉದಾಹರಣೆ ಎಂದರೆ ಕ್ರಿ.ಶ. ೧೯೨೯ ರಲ್ಲಿ ಶ್ರೀ ಎ.ಪಿ. ಕರಮರಕರ ಹಾಗೂ ಶ್ರೀ ಎಸ್.ಬಿ. ಕಲಮದಾನಿಯವರು ಸಂಪಾದಿಸಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘವು ಪ್ರಕಟಿಸಿದ 'Mystic Teachings of the Haridasas of Karnataka' ಎಂಬ ಗ್ರಂಥದಲ್ಲಿ ಪ್ರ-ಪ್ರಥಮವಾಗಿ ಹರಿದಾಸರ ವಂಶಾವಳಿಯನ್ನು ಕೊಡಲಾಯಿತು. ಅದರಲ್ಲಿ ನರಹರಿ ತೀರ್ಥರಿಂದ ಮೊದಲು ಮಾಡಿ ಇಪ್ಪತ್ತನೆಯ ಶತಮಾನದ 'ಸಿರಿವಿಠಲ'ರ ವರೆಗೂ ಹೆಸರುಗಳು ಬಂದಿವೆ. ಆದರೆ ಅದರಲ್ಲಿ ಹಳೆಯ ತಲೆಮಾರಿನ ಬೇಲೂರಿನ ವೈಕುಂಠದಾಸರು, ಕನಕದಾಸರಿಗೆ ಸ್ಥಳವಿಲ್ಲ. ಮಾಧ್ವರೇ ಆದ ಪ್ರಸನ್ನವೆಂಕಟದಾಸರಿಗೂ ಸ್ಥಾನವಿಲ್ಲ. ಮಹಿಪತಿರಾಯರಿಗೂ ಇಲ್ಲ! ಇದಕ್ಕೆ ಮಾಹಿತಿಯ ಅಭಾವವೇ ಕಾರಣವೆಂದು ಸಮಾಧಾನ ಹಚ್ಚಿಕೊಂಡರೂ ಹರಿದಾಸ ಸಾಹಿತ್ಯವನ್ನು ಒಂದು ಕಟ್ಟು-ಪಾಡಿನಲ್ಲಿ ಅವರು ನೋಡಿದರೆಂಬುದು ಸತ್ಯ. ಅದನ್ನೇ

ಶ್ರೀ ಪಂಚಮುಖಿಯವರೂ, ಡಾ. ಜಿ. ವರದರಾಜರಾಯರೂ ಮುಂದುವರಿಸಿದರು.

'ಮತ ಸಿದ್ಧಾಂತಗಳ ಮಂಡನೆ, ಪ್ರಚಾರ, ಪ್ರತಿಪಾದನೆಗಳು ಹೆಚ್ಚಿನ ಪ್ರಾಮುಖ್ಯತೆ ಗಳಿಸಿ ಕೀರ್ತನ ಸಾಹಿತ್ಯದ ಸಾರ್ವತ್ರಿಕಾಂಶಗಳು ಕಡಿಮೆಯಾಗ ತೊಡಗಿದಾಗಲೇ ಅದರ ಕ್ಷೀಣದೆಶೆ ಪ್ರಾರಂಭವಾದುದು ಇವತ್ತು ಚಾರಿತ್ರಿಕ ಸತ್ಯವಾಗಿದೆ. ಕೀರ್ತನ ಸಾಹಿತ್ಯದ ದ್ವಿತೀಯ ಘಟ್ಟದ ಬೆಳಸು ಸಾಮಾನ್ಯವಾಗಿ ಈ ಬಗೆಯ ಶಾಸ್ತ್ರ, ಧರ್ಮ, ಸಿದ್ಧಾಂತ ಮಂಡನೆಗಳ ಪ್ರತಿಷ್ಠೆ ಮಾರ್ಗದ್ದು .... " ಎಂಬುದನ್ನು ಗಮನಿಸಬೇಕು.//೩//

ಮಹಿಪತಿರಾಯರು ಬಾಳಿ ಬದುಕಿದ್ದು ಈ ಮಧ್ಯದ ಅವಧಿಯಲ್ಲಿ ಇತ್ತ ವಿಜಯನಗರದ ಕಾಲದ ಪರಿಸ್ಥಿತಿಯೂ ಇರಲಿಲ್ಲ. ಅತ್ತ ವಿಜಯದಾಸರ ಕಾಲದಲ್ಲಿಯ ರಾಜಕೀಯ ಅವ್ಯವಸ್ಥೆಯೂ ಇರಲಿಲ್ಲ. ಮುಸಲ್ಮಾನರ ಬಲಿಷ್ಠ ರಾಜ್ಯ-ಇಸ್ಲಾಂ ಧರ್ಮದ ಉತ್ಕಟ ಪ್ರಭಾವಲಯದಲ್ಲಿ ಬದುಕಿದವರು. ಅವರಿಗೆ ಹರಿದಾಸ ಧರ್ಮ-ದೀಕ್ಷೆಗಳ ಅರಿವಿತ್ತು. ವಿಜಯದಾಸರು ಅನಂತರ ಹೇಳಿದ ಹರಿದಾಸ ಸುಳಾದಿಯಲ್ಲಿ ಬರುವ ಎಲ್ಲ ಲಕ್ಷಣಗಳನ್ನು ಅವರ ಚರಿತ್ರೆಯಿಂದ ಹಾಗು ಅವರು ರಚಿಸಿದ ಹಲವಾರು ಕೃತಿಗಳಿಂದ ಕಾಣಬಹುದಾಗಿದೆ. ವಿಜಯದಾಸರು ತಮ್ಮ ಹರಿದಾಸ ಲಕ್ಷಣ ಸುಳಾದಿಯಲ್ಲಿ ಹೀಗೆ ಹೇಳುತ್ತಾರೆ.

ಧ್ರುವತಾಳ

ಹರಿದಾಸ ಲಕ್ಷಣ ವಿರಬೇಕು ಈ ಪರಿ
ಗರುವ ಕೋಪ ಮದ ಮತ್ಸರ ಬಿಡಬೇಕು
ಮರುತ ಮತಕ್ಕೆ ಎಲ್ಲಿ ಸರಿಗಾಣೆನೆನುತಲಿ
ಧರೆಯೊಳು ಕೂಗಿ ಡಂಗುರ ಹೊಡೆಯಬೇಕು
ಎರಡಾರು ಪುಂಡ್ರ ವಿರಚಿಸಿ ಪಂಚಮುದ್ರೆ
ಧರರಾಗಿ ತಪ್ತಾಂಕಿತ ಧರಿಸಬೇಕು ಭುಜದಿ
ಸಿರಿ ಬೊಮ್ಮ ಭವಾದ್ಯರಿಗೆ ತರತಮ ಭೇದದಿಂದ
ಎರಗಿ ಎನ್ನೊಳಗಿದ್ದು ಪೊರೆಯೆಂದಾಡಲಿಬೇಕು
ನಿರುತ ಹರಿಗೆ ದಾಸರೆಂದು ಗಣಿಸಬೇಕು
ಹರಿದಿವಸ ಹರಿಚರಿತೆ ಹರಿಸ್ಮರಣೆ ಹರಿಪೂಜೆ
ಹರಿಶ್ರವಣ ಅಂತರ ಶುದ್ಧಿಯಿರಲಿ ಬೇಕು
ಹರಿವರ ದೇವತೆ ವಿಜಯ ವಿಠಲಗತಿ
ಸುರರಾದ್ಯರಿಗೆ ಎಂದು ಉರವಣಿಸಿ ನುಡಿಯಬೇಕು.

ಇದನ್ನು ಶ್ರೀ ಬೇಲೂರು ಕೇಶವದಾಸರು ಕ್ರೋಢೀಕರಿಸಿ 'ವಿಜಯದಾಸರ ಹರಿದಾಸ ಲಕ್ಷಣ ಸುಳಾದಿಯಲ್ಲಿ ಹೇಳಿರುವಂತೆ, ಬಾಳಿದರೆ ಅದೇ ದೀಕ್ಷೆಯಾಗುತ್ತದೆ. ದೀಕ್ಷೆಗಿಂತ ಅರ್ಹತೆಯನ್ನು ನೋಡಿದರೆ ದಾಸನಾಗುವವನಿಗೆ ಕನಿಷ್ಟಪಕ್ಷ ಪ್ರಸ್ಥಾನತ್ರಯಗಳ ಪಾಠವಾದರೂ ಆಗಿರಬೇಕು' ಎಂದು ಹೇಳಿದರು. //೪//

ಈ ಲಕ್ಷಣಗಳು ಮಹಿಪತಿರಾಯರಲ್ಲಿ ಇದ್ದವೆಂಬುದನ್ನು ಅವರ ಚರಿತ್ರೆ ಹಾಗೂ ಅವರ ಕೃತಿಗಳು ಸಾರಿ ಹೇಳುತ್ತವೆ. ಅವರು ಮರುತ ಮತದಲ್ಲಿ ಅವಚ್ಛಿನ್ನವಾದ ಶ್ರದ್ಧೆಯನ್ನಿಟ್ಟಿದ್ದರು ಎಂಬುದನ್ನು ಅವರ ಕೃತಿಗಳಲ್ಲಿ ಕಾಣಬಹುದು.

ಇನ್ನು ಡಾ. ಜಿ. ವರದರಾಜರಾವ ಹಾಗೂ ಶ್ರೀ ಪಂಚಮುಖಿ ಅವರು ಎತ್ತಿದ 'ಯೋಗ್ಯ ಗುರುಮುಖೇನ ದೀಕ್ಷೆ-ಅಂಕಿತ'ಗಳ ಪ್ರಶ್ನೆ, ಮುಖ್ಯವಾಗಿ ಭಾಸ್ಕರ ಸ್ವಾಮಿಗಳು ಹಾಗೂ ಮಹಿಪತಿರಾಯರ ಮಧ್ಯದ ಗುರು-ಶಿಷ್ಯ ಸಂಬಂಧಕ್ಕೆ ಸಂಬಂದಿಸಿದ್ದು, ಬಹುಶ: ಅವಧೂತ ಪಂಥದ ಗುರು ಭಾಸ್ಕರ ಸ್ವಾಮಿಗಳಲ್ಲಿ ಶಿಷ್ಯತ್ವವಹಿಸಿದರೆಂಬ ಕಾರಣಕ್ಕೆ ಮಹಿಪತಿರಾಯರು ಯೋಗ್ಯ ಗುರುಗಳಿಂದ ದೀಕ್ಷೆ ಹಾಗೂ ಅಂಕಿತಗಳನ್ನು ಪಡೆದಿಲ್ಲ ಎಂದು ಡಾ. ಜಿ. ವರದರಾಜರಾವ ಹಾಗೂ ಶ್ರೀ ಪಂಚಮುಖಿ ಅವರು ಊಹಿಸಿರಬಹುದು. ಮತ್ತು ಬಹುತೇಕ ಮಾಧ್ವರ ಅಭಿಪ್ರಾಯ ಇದೆಯೋ ಆದ್ದರಿಂದ ಅವರನ್ನು ಹರಿದಾಸಕೂಟದಿಂದ ಹೊರಗಿಟ್ಟ ಸಾಧ್ಯತೆಗಳು ಹೆಚ್ಚು. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮೂಲತ: ಭಾಸ್ಕರ ಸ್ವಾಮಿಗಳು ಹರಿದಾಸ ದೀಕ್ಷೆ ನೀಡುವ ಗುರು ಅಥವಾ ದಾಸರಾಗಿರಲಿಲ್ಲ. ಅವರಲ್ಲಿ ಶಿಷ್ಯತ್ವ ಪಡೆಯಲು ಹೋದ ರಾಯರಿಗೆ ಬೇಕಾದದ್ದು ಯೋಗ ಮುಖೇನ ಆತ್ಮಜ್ಞಾನ ಹಾಗು ಸಾಕ್ಷಾತ್ಕಾರ. ಅದು ಅವರಿಗೆ ಗುರು ಮುಖದಿಂದ ಯೋಗ ಮಾರ್ಗವಾಗಿ ದೊರಕಿತು. ಇನ್ನೊಂದರ್ಥದಲ್ಲಿ ಶಿಷ್ಯನಿಗೆ ಗುರುಗಳ ಹತ್ತಿರ ಹೋಗುವ ಮೊದಲು ತನಗೆ ಗುರುಗಳಿಂದ ಯಾವಪಾಠ ದೊರಯಬಹುದೆಂಬ ತಿಳುವಳಿಕೆ ಇರಲೇಬೇಕು ಎಂದೇನೂ ಇಲ್ಲ. ಇಲ್ಲಿ ಆದದ್ದು ಹಾಗೆ. ಒಂದು ನಿಮಿತ್ತದಿಂದ ಜೀವನದಲ್ಲಿ ವೈರಾಗ್ಯ ಭಾವ ಹುಟ್ಟಿತು. ಪುರಂಧರ ದಾಸರ ಕಥೆಯಲ್ಲಿ ಬರುವ ಮೂಗುತಿಯಂತೆ ಇಲ್ಲ ಉಂಗುರದ ದೃಷ್ಟಾಂತವಿದೆ. ಆದರಂತೆ ಇವರು ಕೂಡ ಐಹಿಕ ಸುಖ ವಿಷಯಗಳಿಗೆ ತುಳಸಿ ಪತ್ರ ಏರಿಸಿ ಹೊರಟು ಬಿಟ್ಟರು. ಅಂದು ಅಲ್ಲಿ ವ್ಯಾಸರಾಯರಿದ್ದರೆಂದು ಪುರಂದರ ದಾಸರು ಅವರಲ್ಲಿಗೆ ಹೋದರೆ ಇಲ್ಲಿ ಸಮೀಪದಲ್ಲಿ ಭಾಸ್ಕರ ಸ್ವಾಮಿಗಳು ಇದ್ದರೆಂದು ಮಹಿಪತಿರಾಯರು ಅವರಲ್ಲಿಗೆ ಬಂದರು. ಗುರುಗಳು ಶಿಷ್ಯನ ಯೋಗ್ಯತೆಯನ್ನು ಪರೀಕ್ಷಿಸಿ ಮೂಲ ಮಂತ್ರವನ್ನು ಉಪದೇಶಿಸಿದರು. ಅದು ಅವರಿಬ್ಬರಿಗೇ ಸಂಬಂಧಿಸಿದ್ದು, ಅದನ್ನು ಪ್ರಶ್ನಿಸುವ ಅಧಿಕಾರ ಮೂರನೆಯವನಿಗಿಲ್ಲ ಆದರೆ ಇಲ್ಲಿ ಬಹುಶ: ಮಹಿಪತಿರಾಯರು ತಮಗೆ

ದೊರೆತ ಮಂತ್ರೋಪದೇಶದ ಇಷ್ಟದೈವದ ಹೆಸರನ್ನೇ ತಮ್ಮ ಅಂಕಿತವನ್ನಾಗಿ ಬಳಸಿಕೊಂಡಿರುವ ಸಾಧ್ಯತೆ ಇದೆ. ಸಾಹಿತ್ಯದಲ್ಲಿ ಅಭಿರುಚಿ ಇದ್ದ ಹಾಗೂ ಸ್ವತ: ಕಾವ್ಯಾಸಕ್ತರಾದ ಮಹಿಪತಿರಾಯರು ತಮ್ಮ ಮೊದಲ ರಚನೆಯಲ್ಲಿ ಆ ಅಂಕಿತವನ್ನು ಉಪಯೋಗಿಸಿದರು.

ಇಂದೆನ್ನ ಜನ್ಮ ಪಾವನವಾಯಿತು.
ತಂದೆ ಶ್ರೀ ಗುರು ನಿಮ್ಮ ಚರಣದರುಶನದಿ ||ಧ್ರು||

ಎಂದು ಪ್ರಾರಂಭವಾಗುವ ಆರು ನುಡಿಗಳ ಕೀರ್ತನೆಯು ರಾಯರ ಮೊದಲ ರಚನೆಯೆಂದು ಈವರೆಗೆ ನಂಬಲಾಗಿದೆ. ಹರಿದಾಸರ ನಿಯಮದಂತೆ ಮೊದಲ ರಚನೆಯಲ್ಲಿ ಗುರು-ಶಿಷ್ಯರಿಬ್ಬರ ಹೆಸರೂ ಉಲ್ಲೇಖವಾಗಬೇಕು.//೫// ಅದು ಮಹಿಪತಿರಾಯರಿಗೂ ಗೊತ್ತಿರಲು ಸಾಕು. ಅಂತೆಯೇ ತಮ್ಮ ಮೊದಲ ರಚನೆಯಲ್ಲಿ ಉಭಯತರ ಹೆಸರುಗಳನ್ನು ಉಲ್ಲೇಖಿಸಿದ್ದಾರೆ.

'ಭಾಸ್ಕರ ಸ್ವಾಮಿಯು ಕರುಣಾಳು ಮೂರ್ತಿಯು।
ಮೂಢ ಮಹಿಪತಿಯ ಕೃಪಾಂಬುಧಿಯು।
ಕರುಣದಭಯ ಹಸ್ತವನು ಶಿರಸದಲ್ಲಿಡಲಾಗಿ ।
ಧನ್ಯನಾದೆನು ಸತಿ ಪತಿ ಸಹವಾಗಿನ್ನು ||೬||

(ಮ . ಕೀ. ೮೮) //೬//

(ಮಹಿಪತಿರಾಯರ ಕೃತಿಗಳನ್ನು ಉದ್ಧರಿಸುವಾಗ ಈ ಮುಂದೆ ಕೊಡುವ ಕ್ರಮಸಂಖ್ಯೆಗಳು ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ 'ಶ್ರೀಮಹಿಪತಿರಾಯರ ಕೃತಿಗಳು' ಎಂಬ ಸಂಗ್ರಹದಿಂದ ಎತ್ತಿಕೊಂಡವುಗಳು.)

ಮಹಿಪತಿರಾಯರ ಮಕ್ಕಳಾದ ಕೃಷ್ಣರಾಯರು ತಮ್ಮ ಒಂದು ಕೃತಿಯಲ್ಲಿ ಭಾಸ್ಕರ ಸ್ವಾಮಿಗಳಿಂದ ಮೂಲಮಂತ್ರವನ್ನು ಪಡೆದ ವಿಷಯವನ್ನು ಸ್ಪಷ್ಟವಾಗಿಯೇ ಹೇಳಿದ್ದಾರೆ. //೭//

'ಧರೆಯೊಳಜ್ಞಾನ ತಮಹರಣ ಭಾಸ್ಕರನೆನಿಪ।
ವರಮುನಿಯ ಕರಕಮಲದಲ್ಲಿ ಜನಿಸಿ।
ವರಮೂಲಮಂತ್ರವಿಂ ಗುರು ಮಹೀಪತಿಯೆಂಬ।
ನಿರುತ ಖ್ಯಾತಿಯ ನಾಮಧರಿಸಿ ಬಂದನ ಮಹಿಮೆ ||

ತಮಗೆ ದೊರೆತ ಮೂಲ ಮಂತ್ರವನ್ನೇ ಅಂಕಿತವನ್ನಾಗಿ ಉಪಯೋಗಿಸಿಕೊಂಡಿದ್ದರು. ಎಂಬುದು ಇದರಿಂದ ಇನ್ನಷ್ಟು ಸ್ಪಷ್ಟವಾಗಬಹುದು.

ಇಂತು ತಮ್ಮ ಗುರುಗಳಾದ ಭಾಸ್ಕರ ಸ್ವಾಮಿಗಳಿಂದ ಮೂಲಮಂತ್ರದ ಉಪದೇಶ ದೊರಕಿದ ಮೇಲೆ ರಾಯರು ಸಾಧನೆಯನ್ನು ಮಾಡುತ್ತ, ಅದನ್ನೇ ತಮ್ಮ ಅಂಕಿತವೆಂದು ಉಪಯೋಗಿಸಿ, ಕೀರ್ತನೆಗಳನ್ನು ರಚಿಸಿದರು. 'ಮಹಿಪತಿ' ಎಂಬ

ಅಂಕಿತವನ್ನು ಅನೇಕ ವಿಧಗಳಲ್ಲಿ ಉಪಯೋಗಿಸಿ ಕೃತಿಗಳನ್ನು ರಚಿಸಿದರು. ಅವರ ನಂತರ ರಾಯರ ಮಕ್ಕಳು- ಮೊಮ್ಮಕ್ಕಳೇ ಮೊದಲಾಗಿ ಮೂರು-ನಾಲ್ಕು ತಲೆಮಾರುಗಳ ವರೆಗೆ ಅವರ ಮನೆತನದಲ್ಲಿ ಕೃತಿ ರಚನೆಯಾದದ್ದು ಕಂಡು ಬರುತ್ತದೆ. ಅವರುಗಳಲ್ಲಿ ಮಹಿಪತಿರಾಯರ ಮಗ ಕೃಷ್ಣರಾಯರು ಅಧಿಕ ಸಂಖ್ಯೆಯ ಕೀರ್ತನೆಗಳನ್ನು ಆಖ್ಯಾನಗಳನ್ನು ರಚಿಸಿದ್ದಾರೆ. ಅವರು ಕೂಡ ಈ 'ಮಹಿಪತಿ' ಎಂಬ ಅಂಕಿತವನ್ನೇ ಸಂಬಂಧವಾಚಕ ಪದದಲ್ಲಿ ಬಳಸಿದ್ದಾರೆ. ಹೀಗಾಗಿ ಒಟ್ಟು ದೊರೆಯುವ ಕೀರ್ತನೆಗಳಲ್ಲಿ ಮಹಿಪತಿರಾಯರ ಕೀರ್ತನೆಗಳು ಎಷ್ಟು. ಅವರು ಉಪಯೋಗಿಸಿದ ನಿರ್ದಿಷ್ಟ ಅಂಕಿತದ ನಿರ್ಣಯವಾಗಬೇಕು. ಇಲ್ಲವಾದಲ್ಲಿ ಇಂದು 'ಮಹಿಪತಿ' ಎಂಬ ಅಂಕಿತದ ಎಲ್ಲ ರಚನೆಗಳನ್ನು ಮಹಿಪತಿರಾಯರ ಕೃತಿಗಳೆಂದೇ ಕರೆಯುವುದನ್ನು ಮುಂದುವರಿಸಬೇಕಾಗುತ್ತದೆ!

ಈಗ ಉಪಲಬ್ಧವಿದ್ದ ಮುದ್ರಿತ ಆವೃತ್ತಿಗಳನ್ನು ಹಾಗೂ ಹಸ್ತಪ್ರತಿಗಳನ್ನು ಪರಿಶೀಲಿಸಿದಾಗ ಮಹಿಪತಿರಾಯರು ಹಾಗು ಅವರ ಮನೆತನದವರು ಸುಮಾರು ಎರಡು ಸಾವಿರ ಕೀರ್ತನೆಗಳು ಹಲವು ಆಖ್ಯಾನಗಳು ಹಾಗು ಒಂದು ಸಂಪೂರ್ಣಕಾವ್ಯವನ್ನು ರಚಿಸಿದ್ದು ಕಂಡುಬಂದಿತು. ಅವುಗಳಲ್ಲಿ ಸುಮಾರು ಐವತ್ತಕ್ಕಿಂತ ಹೆಚ್ಚು ವಿವಿಧ ಅಂಕಿತಗಳು ದೊರೆತವು. ಆದ್ದರಿಂದ ಇಲ್ಲಿ ಮೊದಲು ಮುದ್ರಿತ ಹಾಗೂ ಹಸ್ತಪ್ರತಿಗಳಲ್ಲಿ ದೊರೆಯುವ ಎಲ್ಲ ಅಂಕಿತಗಳನ್ನು ವಿಭಜಿಸಿ ಪಟ್ಟಿ ಮಾಡಲು ಪ್ರಯತ್ನಿಸಲಾಗಿದೆ. ಅವರ ಮನೆತನದಲ್ಲಿ ಅಧಿಕ ಕೃತಿಗಳನ್ನು ರಚಿಸಿದ ಶ್ರೇಯಸ್ಸು ಮಹಿಪತಿರಾಯರು ಹಾಗು ಅವರ ಮಗ ಕೃಷ್ಣರಾಯರದು. ಆದ್ದರಿಂದ ಅಂಕಿತಗಳಲ್ಲಿಯ ವಿವಿಧತೆಯೂ ಇವರಿಬ್ಬರ ಕೃತಿಗಳಲ್ಲಿ ವಿಶೇಷವಾಗಿದೆ.

ಮಹಿಪತಿರಾಯರ ಕೃತಿಗಳಲ್ಲಿ ಕಂಡು ಬರುವ ಅಂಕಿತಗಳು

| | | |
|---|---|---|
| ಮಹಿಪತಿ, | ನರಕೀಟಕ ಮಹಿಪತಿ | ಪುತ್ರ ಮಹಿಪತಿ |
| ದೀನ ಮಹಿಪತಿ | ಬಾಲಕ ಮಹಿಪತಿ | ಮಹಿಪತಿ ಗುರು |
| ತರಳ ಮಹಿಪತಿ | ಚಿಣ್ಣ ಮಹಿಪತಿ | ಮಹಿಪತಿ ತಂದೆ |
| ದಾಸ ಮಹಿಪತಿ | ಕಂದ ಮಹಿಪತಿ | ಮಹಿಪೆಮ್ಮ |
| ಮೂಢ ಮಹಿಪತಿ | ಚಿಣ್ಣ ಕಿಂಕರ ಮಹಿಪತಿ | |

ಹೀಗೆ ಸುಮಾರು ಹದಿನಾಲ್ಕು ವಿವಿಧ ಅಂಕಿತಗಳಿಂದ ಮಹಿಪತಿರಾಯರು ಕೃತಿಗಳನ್ನು ರಚಿಸಿದ್ದಾರೆ. ಈ ಅಂಕಿತಗಳನ್ನು ಗುರುತಿಸಲು ಮಹಿಪತಿರಾಯರ ಅನುಭವ ಕೀರ್ತನೆಗಳು, ಭಾಸ್ಕರ ಸ್ವಾಮಿಗಳ ಕುರಿತಾದ ಪದಗಳು ಹಾಗು ಇವುಗಳಿಂದ ಗುರುತಿಸಿದ ಅವರ ಶೈಲಿ, ಪದ ಬಂಧಗಳಿಂದ, ಇವುಗಳು ಮಹಿಪತಿರಾಯರ ಅಂಕಿತಗಳೆಂದು ಗುರುತಿಸಲು ಪ್ರಯತ್ನಿಸಲಾಗಿದೆ. ಈ ಅಂಕಿತಗಳೆಂದು ಗುರುತಿಸಲು ಪ್ರಯತ್ನಿಸಲಾಗಿದೆ. ಈ ಅಂಕಿತಗಳಲ್ಲಿಯ ವೈಶಿಷ್ಟ್ಯವೆಂದರೆ ಮಹಿಪತಿರಾಯರು

ತಮ್ಮ ಅಂಕಿತ 'ಮಹಿಪತಿ'ಯ ಜೊತೆಗೆ ಸ್ವವಿಶೇಷಣ ಹಚ್ಚಿದ್ದು, ದೀನ, ತರಳ, ದಾಸ, ಮೂಢ, ನರಕೀಟಕ, ಬಾಲಕ, ಚಿಣ್ಣ, ಕಂದ, ಚಿಣ್ಣ ಕಿಂಕರ ಇತ್ಯಾದಿಯಾಗಿ ಬಳಸಿದುದು ಕಂಡು ಬರುತ್ತದೆ. ಈ ಶಬ್ದಗಳನ್ನೇ ಉಪಯೋಗಿಸಿ ಕೃಷ್ಣರಾಯರು ತಂದೆಯನ್ನು ಮುಂದಿಟ್ಟುಕೊಂಡು 'ಮಹಿಪತಿ ಕಂದ' 'ಮಹಿಪತಿ ಸುತ' ಇತ್ಯಾದಿಯಾಗಿ ಅಂಕಿತಗಳನ್ನು ಬಳಸಿದ್ದಾರೆ.

ಮಹಿಪತಿಸುತ ಕೃಷ್ಣರಾಯರ ಅಂಕಿತಗಳು

| | |
|---|---|
| ಮಹಿಪತಿ ನಂದನ | ತಂದೆ ಮಹಿಪತಿ |
| ಮಹಿಪತಿ ಕಂದ | ತಂದೆ ಮಹಿಪತಿ ನಂದನ |
| ಮಹಿಪತಿ ಸುತ | ತಂದೆ ಗುರುವರ ಮಹಿಪತಿ |
| ಮಹಿಪತಿಸುತ ಪ್ರಭು | ತಂದೆ ಮಹಿಪತಿ ನಂದನ ಪ್ರಾಣ |
| ಮಹಿಪತಿ ನಂದನ ಕೈವಾರಿ | ತಂದೆ ಮಹಿಪತಿ ನಂದನ ಸಾರಥಿ |
| ಮಹಿಪತಿ ಚಿನ್ನಪ್ರಭು | ತಂದೆ ಮಹಿಪತಿ ಕಂದ |
| ಮಹಿಪತಿಜ | ತಂದೆ ಮಹಿಪತಿ ಬಾಲ |
| ಮಹಿಪತಿ ಅಣುಗ | ಗುರು ಮಹಿಪತಿ ಸುತ |
| ಬಾಬಾ ಮಹಿಪತಿ ಪ್ರಭು | ಗುರುವರ ಮಹಿಪತಿ |
| ಗುರು ಮಹಿಪತಿ | ಗುರುವರ ಮಹಿಪತಿನಂದನ |
| ಗುರುಮಹಿಪತಿ ಪ್ರಭು | |

ಹೀಗೆ ಕೃಷ್ಣರಾಯರು, ಸುಮಾರು ೨೧ ವಿಧಗಳಲ್ಲಿ ಅಂಕಿತವನ್ನು ಬಳಸಿ ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲದೆ ಅವರ ಮನೆತನದಲ್ಲಿ ಉಳಿದವರು ಉಪಯೋಗಿಸಿದ ಅಂಕಿತಗಳ ವಿವರ ಹೀಗಿದೆ.

| | | |
|---|---|---|
| ಕೃಷ್ಣ | ಗುರುವರ ಕೃಷ್ಣ ಪ್ರಭು | ಗುರುವರ ಗಿರಿಧರ ತರಳ |
| ಕೃಷ್ಣಪ್ರಿಯ | ಗುರುಕೃಷ್ಣ ತಾತಾಯ | ಶ್ರೀಪತಿ ಪ್ರಭು |
| ಗುರುಕೃಷ್ಣ | ಚಿನ್ನ ಕೃಷ್ಣ | ಶ್ರೀ ಪತಿ ತನುಜ |
| ಗುರುಕೃಷ್ಣ ಕಂದ | ಗಿರಿಧರ | ಮಹಿಪತಿ ದೀನ ಕೃಷ್ಣೊಡೆಯ |
| ಗುರುಕೃಷ್ಣ ಪುತ್ರ | ಗಿರಿಧರ ಸುತ | ಗುರುಮಹಿಪತಿ ಸ್ವಾಮಿ- |
| ಗುರುವರ ಕೃಷ್ಣ | ಗಿರಿಧರಜ | ರಾಮಚಂದ್ರಪ್ರಿಯ |
| ಗುರುಕೃಷ್ಣ ಸುತ | ಗಿರಿಧರ ತನಯ | |

ಹೀಗೆ ದೊರೆತ ೫೪ ಅಂಕಿತಗಳಲ್ಲಿ ಮೊದಲು ಹೇಳಿದ ೧೪ ಅಂಕಿತಗಳನ್ನು ಮಾತ್ರ ಮಹಿಪತಿರಾಯರು ಉಪಯೋಗಿಸಿದರು ಎನ್ನಲು ವಿಶೇಷವಾಗಿ ಈ ಅಂಕಿತದ ಸುಮಾರು ಕೃತಿಗಳು ಮಹಿಪತಿರಾಯರ ಗುರುಗಳಾದ ಭಾಸ್ಕರ ಸ್ವಾಮಿಗಳನ್ನು ಕುರಿತಾಗಿವೆ. ಅಲ್ಲದೆ ಅವರ ಸಾಧನೆ ಯೋಗ ಮಾರ್ಗದ್ದು. ಯೌಗಿಕ

ಅನುಭವಗಳನ್ನು ಹೇಳುವಾಗ ಕೂಡ ಈ ಅಂಕಿತಗಳನ್ನು ಬಳಸಿದ್ದಾರೆ. ಜೊತೆಗೆ ಹಾಗು ಮುಖ್ಯವಾಗಿ ಅವರ ಮನೆತದವರು ಈ ಎಲ್ಲ ಕೃತಿಗಳನ್ನು ಬರೆದಿಡುವಾಗ ಸಾಮಾನ್ಯವಾಗಿ ಮಹಿಪತಿರಾಯರ ಕೃತಿಗಳನ್ನು ಒಂದು ಹಸ್ತ ಪ್ರತಿಯಲ್ಲಿ ಹಾಗು ಕೃಷ್ಣರಾಯರ ಕೃತಿಗಳನ್ನು ಇನ್ನೊಂದು ಹಸ್ತಪ್ರತಿಯಲ್ಲಿ ಪ್ರತ್ಯೇಕವಾಗಿ ಸಂಗ್ರಹಿಸಿದ್ದಾರೆ. ಈ ಅಂಕಿತಗಳನ್ನು ಗಮನಿಸಿ ಈಗ ಉಪಲಬ್ಧವಿದ್ದ ಕೃತಿಗಳಲ್ಲಿ ಮಹಿಪತಿರಾಯರ ಕೃತಿಗಳ ಸಂಖ್ಯಾನಿರ್ಣಯವನ್ನು ಮಾಡಲು ಪ್ರಯತ್ನಿಸಬಹುದು.

### ೫.೨ ಕೃತಿ ಸಂಖ್ಯೆ

ಮೈಸೂರು ವಿಶ್ವ-ವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದ 'ಶ್ರೀ ಮಹಿಪತಿರಾಯರ ಕೃತಿಗಳು' ಎಂಬ ಸಂಗ್ರಹದಲ್ಲಿ ಒಟ್ಟು ೬೮೫ ಕೀರ್ತನೆಗಳನ್ನು ಪ್ರಕಟಿಸಿದ್ದಾಗಿ ಸಂಪಾದಕರು ಹೇಳುತ್ತಾರೆ. ಅವುಗಳಲ್ಲಿ ೨೧ ಏಕೈಕ ಆಕರದ ಕೃತಿಗಳು, ಹಾಗೂ ೯ ಅಧಿಕ ಕೃತಿಗಳೂ ಸೇರಿಕೊಂಡಿವೆ. ''ಈ ೬೮೫ ಕೃತಿಗಳಲ್ಲಿ ಮಹಿಪತಿರಾಯರ ಮಕ್ಕಳಾದ ಕೃಷ್ಣರಾಯರ ಎರಡು ಕೃತಿಗಳು (ಕೀರ್ತನೆ ೪೨೧ ಹಾಗೂ ಏಕೈಕ ಆಕರ ೧) ಸೇರಿಕೊಂಡಿವೆ ಎಂದೂ, ಮತ್ತೆರಡು ಕೃತಿಗಳು (ಕೀರ್ತನೆ ೨೨೫/೪೨೪ ಹಾಗೂ ೫೫/ ಏಕೈಕ ಆಕರ ೪) ಪುನರುಕ್ತಿ ಆಗಿವೆಯೆಂದೂ ಹೇಳಿದ್ದಾರೆ. ಹೀಗೆ ಅವರ ಲೆಕ್ಕದ ಪ್ರಕಾರ ಸಂಗ್ರಹದಲ್ಲಿ ಮಹಿಪತಿರಾಯರ ಒಟ್ಟು ೬೮೧ ಕೃತಿಗಳು ಇವೆಯೆಂದಾಯಿತು.

ಈಗ ಒಟ್ಟು ಪ್ರಕಟಿಸಿದ ೬೮೫ ಕೃತಿಗಳನ್ನು ಮಹಿಪತಿರಾಯರ ವಿವಿಧ ಅಂಕಿತಗಳಿಗಗೆ ಅನುಸಾರವಾಗಿ ಹೀಗೆ ವಿಂಗಡಿಸಬಹುದು.

| ಅಂಕಿತ | ಪ್ರಕಟಿತ ಕೃತಿಸಂಖ್ಯೆ | ಅಂಕಿತ | ಪ್ರಕಟಿತ ಕೃತಿ ಸಂಖ್ಯೆ |
|---|---|---|---|
| ಮಹಿಪತಿ | ೪೮೨ | ನರಕೀಟಕ ಮಹಿಪತಿ | ೪ |
| ತರಳ ಮಹಿಪತಿ | ೭೫ | ಬಾಲಕ ಮಹಿಪತಿ | ೪ |
| ದೀನ ಮಹಿಪತಿ | ೬೯ | ಚಿಣ್ಣ ಕಿಂಕರ ಮಹಿಪತಿ | ೨ |
| ಮಹಿಪತಿಗುರು | ೪೯ | ಪುತ್ರ ಮಹಿಪತಿ | ೧ |
| ದಾಸ ಮಹಿಪತಿ | ೪೮ | ಮಹಿಪತಿ ತಂದೆ | ೧ |
| ಮೂಢ ಮಹಿಪತಿ | ೪೬ | ಪಟ್ಟವಿ | ೧ |
| ಚಿಣ್ಣ ಮಹಿಪತಿ | ೧೧ | ಮುದ್ರಿಕೆ ಇಲ್ಲದ ಪದಗಳು | ೬ |
| ಕಂದ ಮಹಿಪತಿ | ೧೦ | ಅನ್ಯ ಮುದ್ರಿಕೆಯ ಪದಗಳು | ೫ |
| | | ಪುನರುಕ್ತಿ ಪದಗಳು | ೨ |
| | | ಒಟ್ಟು ಕೃತಿಗಳು | ೬೮೫ |

ಹೀಗೆ ಪ್ರಕಟಿತ ೬೮೫ ಕೃತಿಗಳಲ್ಲಿ ಒಂದು ಮುದ್ರಿಕೆ ಇಲ್ಲದ ವಚನವು ಇನ್ನೊಂದು ಮುದ್ರಿಕೆಯುಳ್ಳ ವಚನದೊಂದಿಗೆ ಸೇರಿ ಒಂದೇ ಕೃತಿಯೆಂದು

ನಮೂದಾಗಿದೆ. ಕೃತಿಸಂಖ್ಯೆ ೨೭೫ ಇದು 'ತಾರಕುಪದೇಶವೆಂಬ ಸಾರಣೆಯ ಕೊಟ್ಟು' ಎಂಬುದು ಏಳು ಸಾಲಿನ ವಚನ. ಇದರಲ್ಲಿಯ ಮೊದಲಿನ ಎರಡು ಸಾಲುಗಳನ್ನು 'ಧ್ರುವಪದ'ವೆಂದು ತೋರಿಸಿ ಉಳಿದ ಐದು ಸಾಲುಗಳೊಂದಿಗೆ ಮತ್ತೆ ಐದು ಸಾಲುಗಳ 'ಕಾಯವೆ ಕೋವಿಯನೆ ಮಾಡಿ ಭಾವನೆಯ ಮದ್ದನೆ ತುಂಬಿ' ಎಂಬ ಪ್ರತ್ಯೇಕ ವಚನವನ್ನು ಸೇರಿಸಿ ಒಂದು ಕೃತಿಯೆಂದು ತೋರಿಸಲಾಗಿದೆ. ಆದರೆ ದೊರೆತ ಎಲ್ಲ ಹಸ್ತಪ್ರತಿಗಳಲ್ಲಿ ಇವು ಎರಡೂ ಪ್ರತ್ಯೇಕ ವಚನಗಳೆಂದೇ ಗ್ರಹಿಸಲಾಗಿದೆ. //೯// ಆದ್ದರಿಂದ ಇವುಗಳನ್ನು ಎರಡು ಸ್ವತಂತ್ರ ವಚನಗಳೆಂದೇ ಪರಿಗಣಿಸಿದರೆ. ಒಟ್ಟು ೬೮೬ ಕೃತಿಗಳನ್ನು ಪ್ರಕಟಿಸಿದಂತಾಯಿತು.

ಇನ್ನು ಮುದ್ರಿಕೆ ಇಲ್ಲದ ಏಳು ಕೃತಿಗಳಲ್ಲಿ 'ಅರಹು ಅಂಜನಾಗದನಕ' (ಕೃತಿ-೫) 'ಅರುಹು ನೀಡೋ ನೀ ಸ್ವಾಮಿ ಶ್ರೀ ನಿಧೇ' (ಕೃತಿ-೭) 'ನೀನೆ ಎನಗಾಗಿ ಬಂದು ನೀನೆ ನೀನಾದ್ಯನಗೆಂದು' (ಕೃತಿ-೩೫೯), 'ಬಾರಯ್ಯ ಬಾರೋ ಶ್ರೀಹರಿಯೇ' (ಕೃತಿ -೪೧೦) ಹಾಗು 'ಯುಕ್ತಿಯಿಂದ ಭಕ್ತಿ ಮಾಡಲಿಕ್ಕೆ ಶಕ್ತನಲ್ಲನಾ' (ಕೃತಿ-೪೮೧) ಈ ಐದು ಕೃತಿಗಳು ಉಳಿದ ಹಸ್ತಪ್ರತಿಗಳಲ್ಲೂ ಅಂಕಿತ ಇಲ್ಲದೆಯೇ ಬರೆದವುಗಳಾಗಿವೆ. ಅಲ್ಲಲ್ಲಿ ತುಸು ಪಾಠಾಂತರಗಳು ಇವೆಯಾದರೂ ಮೊತ್ತದಲ್ಲಿ ಹೇಳಿಕೊಳ್ಳುವಂಥ ಬದಲಾವಣೆಗಳಿಲ್ಲ. 'ಇಲ್ಲಿವೆ ನಿಧಾನವು ಶ್ರೀಗುರುವೆ ನಿಮ್ಮಲ್ಲಿವೆ ನಿಧಾನವು' (ಕೃತಿ-೬೧) ಹಾಗೂ 'ಇಂದು ನೋಡುವ ಇಂದಿರಾಪತಿ ಶ್ರೀಪಾದವ' (ಕೃತಿ-೮೧) ಈ ಎರಡು ಕೃತಿಗಳು ಉಳಿದ ಹಸ್ತಪ್ರತಿಗಳಲ್ಲಾಗಲಿ, ಮುದ್ರಿತ ಪ್ರತಿಗಳಲ್ಲಾಗಲೀ ದೊರೆಯುವುದಿಲ್ಲ.

ಅನ್ಯ ಮುದ್ರಿಕೆಯ ಕೃತಿಗಳಲ್ಲಿ 'ಅಗಾಧ ಗುರುರಾಯನ ಕರುಣೆ' (ಏಕೈಕ -ಆಕರ ಕೃತಿ-೧) ಕೃಷ್ಣರಾಯರ ಕೃತಿ ಎಂದು ಸಂಪಾದಕರು ಒಪ್ಪಿಕೊಂಡಿದ್ದಾರೆ. 'ಮುಂಜಾನೆ ಎದ್ದು ಮುರಹರನ ಸ್ಮರಿಸಲಿ ಮನವೆ' (ಕೃತಿ-೪೭೧) ಈ ಕೃತಿ 'ತರಳ ಮಹಿಪತಿ ಪ್ರಾಣದೊಡೆಯ ಶ್ರೀಹರಿಯೆನಲು। ಕರುಣದಿಂದೊದಗುವ ಗುರುಕೃಷ್ಣನು।।' ಎಂಬ ಅಂಕಿತದೊಂದಿಗೆ ಕೊನೆಗೊಳ್ಳುತ್ತದೆ. 'ಕರುಣಸನಗೆ ವರಯತಿಯೆ। ಪರಮ ಪಾವನ ಮೂರ್ತಿಯೆ। ವರಭಕುತರ ಸ್ಫೂರತಿಯೆ। ಶರಣರಕ್ಷಕ ಮಹಿಪತಿಯೆ।।' (ಏಕೈಕ ಆಕರ ಕೃತಿ-೭) ಇದು 'ಚಿನ್ನಕೃಷ್ಣೊಡೆಯ' ಎಂಬ ಅಂಕಿತದೊಂದಿಗೆ ಕೊನೆಗೊಳ್ಳುತ್ತದಲ್ಲದೆ, ಮಹಿಪತಿರಾಯರ ಸ್ತುತಿಪದ ಎಂಬುದು ಸ್ಪಷ್ಟವಾಗಿದೆ. 'ಸಲಹು ಶ್ರೀಗುರುರಾಯ' (ಅಧಿಕ-ಕೃತಿ-೮) ಎಂಬುದೂ ರಾಯರ ಕುರಿತಾದ ಪದ (ಚಿನ್ನಕೃಷ್ಣ' ಅಂಕಿತದ ಕೃತಿ) 'ರಾಮ ಸಲಹಯ್ಯ ಪುಣ್ಯನಾಮ ಶ್ರೀರಾಘವೇಂದ್ರಾ' (ಏಕೈಕ ಆಕರ ಕೃತಿ -೧೮) ಎಂಬ ಕೃತಿ 'ಧೀರ ಕೃಷ್ಣೊಡೆಯ' 'ಚಿನ್ನಕೃಷ್ಣ' ಹಾಗು 'ಧೀರಕೃಷ್ಣೊಡೆಯ' ಈ ನಾಲ್ಕೂ ಅಂಕಿತಗಳು ಕೃಷ್ಣರಾಯರ ನಾಲ್ಕನೆಯ ಮಗನಾದ ಯತಿರಾಯರದ್ದು ಎಂದು ಸ್ಪಷ್ಟವಾಗಿದೆ. ಹೀಗೆ ಒಂದು ಅವರ ಮಗ ಹಾಗು ನಾಲ್ಕು

ಅವರ ಮೊಮ್ಮಗನ ಕೃತಿಗಳು ಸೇರಿಕೊಂಡಿವೆ.

ಇನ್ನು ಸಂಪಾದಕರು ಹೇಳುವಂತೆ, 'ನೆನೆದು ನಮಿಸುವೆನು ವಾರಂ ವಾರ' (ಕೃತಿ-೩೭೧) ಎಂಬ ಕೃತಿ ಕೃಷ್ಣರಾಯರ ಪದವೆಂದೂ 'ಈ ಕೀರ್ತನೆಯಲ್ಲಿ ಗುರು ಮಹಿಪತಿ (ಅಂಕಿತ) ಎನ್ನುವುದಕ್ಕೆ ಬದಲಾಗಿ 'ಮಹಿಪತಿಗುರು' (ಅಂಕಿತ) ಎಂದು ನಮಗೆ ದೊರೆತ ಎಲ್ಲ ಆಕರಗಳಲ್ಲಿಯೂ ಕಂಡು ಬಂದದ್ದರಿಂದ ನಮ್ಮ ಎಚ್ಚರತಪ್ಪಿ ಪ್ರಕೃತ ಸಂಕಲನದಲ್ಲಿ ನುಸುಳಿ ಬಂದಿದೆ.'' ಎಂದು ಡಾ। ಜಿ.ವರದರಾಜರಾವ್ ಹೇಳುತ್ತಾರೆ. //೧೦// ಇದುವರೆಗಿನ ಎಲ್ಲ ಮುದ್ರಿತ ಪಾಠಗಳಲ್ಲಿ ಹಾಗೂ ದೊರೆತ ಹಸ್ತಪ್ರತಿಗಳಲ್ಲಿ ಈ ಕೀರ್ತನೆಯ ಅಂಕಿತವು 'ಮಹಿಪತಿಗುರು' ಎಂದೇ ಉಕ್ತವಾಗಿದೆ. ಈ ಕೀರ್ತನೆಯಲ್ಲಿ ತಮ್ಮ ಸಂಪ್ರದಾಯ, ಅದರಲ್ಲಿ ಆವರೆಗೆ ಆಗಿಹೋದ ಮತ್ತು ಕೃತಿ ರಚನಾ ಕಾಲದಲ್ಲಿ ಜೀವಿಸಿದ್ದ ಮಠಾಧಿಪತಿಗಳನ್ನು ಸ್ತುತಿಸಲಾಗಿದೆ. ಅಲ್ಲದೆ ಹರಿದಾಸ ಪರಂಪರೆಯನ್ನು ಹೇಳಲಾಗಿದೆ. ಆದ್ದರಿಂದ ಚಾರಿತ್ರಿಕವಾಗಿಯೂ ಈ ಕೀರ್ತನೆಯು ತುಂಬ ಮಹತ್ವದ್ದಾಗಿದೆ. ಮಧ್ವಮತದಲ್ಲಿಯ ಅವರ ಶ್ರದ್ಧೆ ಹಾಗು ಉತ್ತರಾದಿಮಠದಲ್ಲಿಯ ಯತಿಗಳ ಪರಂಪರೆಯನ್ನು ಅದು ಹೇಳುತ್ತದೆ. ಆದ್ದರಿಂದ ಈ ಕೃತಿಯ ಕುರಿತು ಹೆಚ್ಚಿನ ಅಭ್ಯಾಸವೂ ಅಗತ್ಯವಾಗಿದೆ. ಮೊದಲು ಮುದ್ರಿತಪಾಠಗಳಲ್ಲಿ ಬರುವ ಕೀರ್ತನೆಯನ್ನು ನೋಡಬಹುದು.

ಮುದ್ರಿತ ಪಾಠ

ನೆನೆದು ನಮಿಸುವೆನು ನಾನು ವಾರಂ ವಾರ ।।ಧ್ರು।।

ನೆನೆದು ನಮಿಸುವೆ ನಾನನುದಿನ ಹರಿಪದ
ವನಜ ಮಧುಪರಾದ ಅನುಭವ ಶರಣರ ।।ಅ.ಪ.।।

ಆದಿ ಮೂರುತಿತ್ರಯ ಮಧ್ವ ಮುನಿರೇಯ।
ಬೋಧಕ ಪದ್ಮನಾಭ ನರಹರಿ ಧ್ಯಾನ।
ಮಾಧವಾಕ್ಷೋಭ್ಯರ ಮಹಾ ಜಯ ತೀರ್ಥರಾ।
ರಾಧಕ ವಿದ್ಯಾಧಿರಾಜ ಕವಿ ನಿಧಿ।
ಸಾದರ ವಾಗೀಂದ್ರ ಶಾಂತ ರಾಮಚಂದ್ರ।
ಸಾಧು ವಿದ್ಯಾನಿಧಿಯರ ರಘುನಾಥ।
ಮೇದಿನಿ ರಘುವರ್ಯರ ರಘೋತ್ತಮ
ವೇದವ್ಯಾಸರ್ಯರ ವಾರಂ ವಾಠ ।।೧।।

ಇತ್ತ ವಿದ್ಯಾಧೀಶ ಈ ವೇದ ನಿಧಿ ಘೋಷ।
ಸತ್ಯವ್ರತರ ನಾಮ ಸತ್ಯನಿಧಿಯ ನೇಮ।

ಸತ್ಯನಾಥಾಖ್ಯಾತ ಸತ್ಯಾಭಿನವ ತೀರ್ಥ।
ಸತ್ಯಪೂರ್ಣ ಪಾದ ಸತ್ಯವಿಜಯರಾದ।
ಸತ್ಯಪ್ರಿಯ ತೀರ್ಥ ಸತ್ಯಬೋಧ ಕರ್ತ।
ಇತ್ಯಾಧಿಕ ಸರ್ವರ ಜಗದಲಿ।
ಕೃಷ್ಣದ್ವೈಪಾಯನರ ಪುರುಷಾರ್ಥ।
ಉತ್ತುಮುದಲಿವರ ವಾರಂ ವಾರ ।।೨।।

ಶರಣೆಂದು ಆದ್ಯರ ಸಕಲ ಪ್ರಸಿದ್ಧರ।
ಸಿರಿಪಾದ ಪ್ರಿಯರ ಶುಭವ್ಯಾಸರಾಯರ।
ವರಹಯಗ್ರೀವ ಜಗವರಿತ ವಾದಿರಾಜ।
ಪುರಂದರ ದಾಸರ ಪುನ್ನರವ ಮಾಳವ।
ನೆರೆ ತಾಳಪಾಕರ ಸಂತಮತಿ ಕನಕರ।
ಹರಿಭಕ್ತಿ ಉಲ್ಹಾಸರ ಬಂಡೆರಂಗ ನರಿತಿಹ ನಿಜದಾಸರ।
ಮಹಿಪತಿ ಗುರುಶರಣರ ತೋಷರ ವಾರಂ ವಾರ ।।೩।। //೧೧//

ಇಲ್ಲಿಯ ಮೊದಲಿನ ಎರಡು ನುಡಿಗಳಲ್ಲಿ ಮಧ್ವಾಚಾರ್ಯರನ್ನು ಮೊದಲ್ಗೊಂಡು ಅವರ ಶಿಷ್ಯರಾದ ಪದ್ಮನಾಭತೀರ್ಥ ನರಹರಿತೀರ್ಥ, ಮಾಧವತೀರ್ಥ ಮತ್ತು ಅಕ್ಷೋಭ್ಯ ತೀರ್ಥರುಗಳನ್ನು ಉಲ್ಲೇಖಿಸಿ ಅನಂತರ ಅಕ್ಷೋಭ್ಯ ತೀರ್ಥರ ಪರಂಪರೆಯಲ್ಲಿ ಬೆಳೆದು ಬಂದ ಉತ್ತರಾದಿಮಠದ ಯತಿ ಪರಂಪರೆಯಲ್ಲಿ ೨೪ನೆಯವರಾದ ಶ್ರೀ ಸತ್ಯಬೋಧ ತೀರ್ಥರವರೆಗೆ ಎಲ್ಲರನ್ನೂ ಸ್ಮರಿಸಿದ್ದಾರೆ. ಶ್ರೀಸತ್ಯಬೋಧರ ಕಾಲ ಕ್ರಿ.ಶ. ೧೭೪೪ ರಿಂದ ಕ್ರಿ.ಶ. ೧೭೮೩ ರವರೆಗೆ ಎಂದು ನಿರ್ಣೀತವಾಗಿದೆ. //೧೨// ಆದ್ದರಿಂದ ಬಹುಶ: ಇದು ಮಹಿಪತಿರಾಯರ ಕೃತಿ ಆಗಿರಲಿಕ್ಕಿಲ್ಲವೆಂದೂ, ಅವರ ಮಗ ಕೃಷ್ಣರಾಯ ರಚಿಸಿದ ಕೃತಿಯೆಂದೂ ಆದ್ದರಿಂದ 'ಗುರುಮಹಿಪತಿ' ಅಂಕಿತದ ಬದಲು 'ಮಹಿಪತಿ ಗುರು' ಎಂದು ತಪ್ಪಿ ಬಂದಿದೆ ಎಂದು ಪೂರ್ವೋಕ್ತ ಸಂಗ್ರಹಗಳ ಸಂಪಾದಕರೆಲ್ಲರೂ ಭಾವಿಸಿದಂತಿದೆ. ಆದರೆ ಅದೇ ಸಂಪಾದಕರುಗಳ ಕಾಲ ನಿರ್ಣಯದ ಪ್ರಕಾರ ಕೃಷ್ಣರಾಯರು ಹುಟ್ಟಿದ್ದು ಕ್ರಿ.ಶ.ಸು. ೧೬೫೯ ರಲ್ಲಿ ಎಂದು ಅವರುಗಳು ನಿರ್ಣಯಿಸಿದ್ದಾರೆ. ಶ್ರೀ ಸತ್ಯಬೋಧ ತೀರ್ಥರು ಉತ್ತರಾದಿ ಮಠದ ಪೀಠಕ್ಕೆ ಬಂದುದು ಕ್ರಿ.ಶ. ೧೭೪೪ ರಲ್ಲಿ ಎಂದೂ ಗೊತ್ತಾಗಿದೆ. ಅಂದರೆ ಅವರು ಪೀಠಕ್ಕೆ ಬಂದ ತಕ್ಷಣ ಈ ಕೃತಿಯ ರಚನೆಯಾಗಿದೆ ಎಂದು ತಿಳಿದರೂ ಕೂಡ ಕೃಷ್ಣರಾಯರಿಗೆ ಆಗ ಸುಮಾರು ೮೬ ವರುಷ ವಯಸ್ಸು. ಅದು ಸಂಭವನೀಯವೆಂದು ಅನಿಸುವುದಿಲ್ಲ. ಉತ್ತರಾದಿಮಠದವರೇ ಆದ ಕೃಷ್ಣರಾಯರು ಇಂಥದೊಂದು ಕೃತಿಯನ್ನು ರಚಿಸಲು ೮೬ ವರುಷದ ವೃದ್ಧಾಪ್ಯದವರೆಗೆ ಕಾಯುವ ಅವಶ್ಯಕತೆ ಇರಲಿಲ್ಲ. ಅಲ್ಲದೆ ಅವರ

ಮನೆತನದ ವಂಶಾವಳಿಯಲ್ಲಿ ಬರುವಂತೆ ಕೃಷ್ಣರಾಯರ ಜ್ಯೇಷ್ಠ ಪುತ್ರ ರಾಮಚಂದ್ರನು ತನ್ನ ಜ್ಯೇಷ್ಠ ಪುತ್ರನಿಗೆ 'ಕೃಷ್ಣ' ಎಂದು ಹೆಸರಿಟ್ಟಿದ್ದಾನೆ. ಆ ಹೊತ್ತಿಗೆ ಅವರು ತೀರಿಕೊಂಡಿರಲು ಸಾಕು. ಈ ಕಾರಣಗಳಿಂದ ಇದು ಕೃಷ್ಣರಾಯರ ಕೃತಿಯೂ ಆಗಿರಲಾರದು.

'ಮಹಿಪತಿಗುರು' ಎಂಬ ಅಂಕಿತವು ಮಹಿಪತಿರಾಯರದ್ದು ಎಂಬುದನ್ನು ಈ ಮೊದಲು ನೋಡಲಾಗಿದೆ. ಪ್ರಕಟಿತ 'ಶ್ರೀಮಹಿಪತಿರಾಯರ ಕೃತಿಗಳು' ಎಂಬ ಸಂಗ್ರಹದಲ್ಲಿಯೇ 'ಮಹಿಪತಿಗುರು' ಎಂಬ ಅಂಕಿತದ ೩೯ ಕೃತಿಗಳು ದೊರೆಯುತ್ತವೆ. ಅವುಗಳಲ್ಲಿ ಇದೊಂದು ಕೃತಿ ಯಾಕೆ ಅಲ್ಲ? ಕೀರ್ತನೆಯಲ್ಲಿ ಬರುವ ಚಾರಿತ್ರಿಕ ಅಂಶಗಳಿಂದಲೇ ಕೃತಿಯ ರಚನೆ ಹಾಗೂ ಕೃತಿಕಾರನನ್ನು ಗುರುತಿಸುವುದಾದರೆ ಮತ್ತೆ ಒಂದುನೂರು ವರುಷ ಮುಂದೆ ಬರಬೇಕಾಗುತ್ತದೆ. ಕ್ರಿ.ಶ. ೧೭೪೫-೧೭೮೫ರ ಮಧ್ಯ ರಚಿಸಿದ ಕೃತಿ ಎಂದು ಹೇಳಬಹುದಾದರೆ ಮೂರನೆಯ ನುಡಿಯಲ್ಲಿ ಹರಿದಾಸ ಪರಂಪರೆಯನ್ನು ಹೇಳುವಾಗ ಪುರಂದರ ಕನಕರವರೆಗೆ ಬಂದು ನಿಲ್ಲುತ್ತದೆ. ಆದರೆ ಆ ಹೊತ್ತಿಗಾಗಲೇ ಪರಿಚಿತರಾದ ಪ್ರಸನ್ನ ವೆಂಕಟ, ವಿಜಯ; ಗೋಪಾಲ ಹಾಗೂ ಜಗನ್ನಾಥದಾಸರ ಹೆಸರುಗಳನ್ನೂ ಉಲ್ಲೇಖಿಸಬಹುದಾಗಿತ್ತು. ಆದ್ದರಿಂದ ಈ ಕೃತಿಯು ಮೊದಲಿಯೇ ರಚಿತವಾದದ್ದೆಂದೂ - ಕಾಲಕ್ರಮದಲ್ಲಿ ಪಾಠಾಂತರಗಳಾಗಿರಬೇಕೆಂದು ಊಹಿಸಲು ಅವಕಾಶವಿದೆ. ಮುಂದೆ ಬಂದ ಪ್ರತಿಯೊಂದು ತಲೆಮಾರಿನವರೂ ತಮಗೆ ಬೇಕಾದಂತೆ ಈ ಕೃತಿಯನ್ನು ಬಳಸಿಕೊಂಡು ಸಮಕಾಲೀನ ಪೀಠಸ್ಥ ಗುರುಗಳನ್ನು ಸೇರಿಸಿ ಸ್ಮರಿಸಲು ಉಪಯೋಗಿಸಿಕೊಂಡರೆಂದು ಹೇಳಬಹುದು. ಇದನ್ನು ಕೃತಿ-ರಚನೆಯ ಮುಖಾಂತರವೂ ಗುರುತಿಸಬಹುದಾಗಿದೆ. ಮುದ್ರಿತ ಪಾಠಗಳಲ್ಲಿ ಮೊದಲನೆಯ ನುಡಿಯಲ್ಲಿ ಎಂಟು ಸಾಲುಗಳಿವೆ. ಸಾಮಾನ್ಯವಾಗಿ ಉಳಿದ ಎರಡು ನುಡಿಗಳಲ್ಲೂ ಎಂಟು-ಎಂಟು ಸಾಲುಗಳಿರಬೇಕು. ಮೊದಲ ನುಡಿಯಲ್ಲಿ ಇದ್ದಂತೆ ಆದಿ ಪ್ರಾಸವನ್ನೂ ಉಳಿಸಿಕೊಳ್ಳಬೇಕು. ಎರಡನೆಯ ನುಡಿಯಲ್ಲಿ ಎಂಟು ಸಾಲುಗಳು ಇವೆಯಾದರೂ ಏಳನೆಯ ಸಾಲಿನ ಪ್ರಾಸವು ತಪ್ಪಿದೆ. ಆದರಂತೆ ಮೂರನೆಯ ನುಡಿಯಲ್ಲಿ ಏಳು ಸಾಲುಗಳಿವೆ ಮತ್ತು ಕೊನೆಯ ಸಾಲಿನ ಪ್ರಾಸವು ತಪ್ಪಿವೆ. ಆದಕ್ಕೆ ಕಾರಣ ಈ ಎರಡು ನುಡಿಗಳನ್ನು ಬದಲಾಗಿಸಲಾಗಿದೆ ಎನ್ನಬೇಕಾಗುತ್ತದೆ. ಈ ಬದಲಾವಣೆಯನ್ನು ಖಚಿತ ಪಡಿಸಿಕೊಳ್ಳಲು ಈ ಕೀರ್ತನೆಯ ಇನ್ನೊಂದು ಪಾಠವನ್ನು ನೋಡಬಹುದು. ಇದು ದೊರೆತ ಹಸ್ತಪ್ರತಿಗಳಲ್ಲಿಯ 'ಟ' ಹಸ್ತಪ್ರತಿಯಲ್ಲಿಯ ೨೧೭ ನೆಯ ಕೀರ್ತನೆ. ಮೊದಲಿನ ಧ್ರುವಪದ, ಹಾಗೂ ಮೊದಲನೆಯ ನುಡಿಯ ಎಂಟು ಸಾಲುಗಳಲ್ಲಿ ಯಾವ ಬದಲಾವಣೆಯೂ ಇಲ್ಲ. ಎರಡನೆಯ ನುಡಿ ಹೀಗಿದೆ.

'ಇತ್ತ ವಿದ್ಯಾಧೀಶ ಈ ವೇದನಿಧಿ ಘೋಷ।
ಸತ್ಯವ್ರತರ ನಾಮ ಸತ್ಯ ನಿಧಿಯ ಸೇಮ।

ಸತ್ಯ ನಾಥಾಖ್ಯಾತ ಸತ್ಯಾಭಿನವ ತೀರ್ಥ।
ಸತ್ಯಪೂರ್ಣರ ಪಾದಾ ಸತ್ಯ ವಿಜಯರಾದ।
ಸತ್ಯಪ್ರಿಯ ತೀರ್ಥರ ಸತ್ಯಬೋಧ ಕರ್ತ।
ಸತ್ಯಸಂಧ ಪೂರ್ಣಾ ಸತ್ಯವರ ಪ್ರಾಣಾ।
.ಸತ್ಯಧರ್ಮ ಪಾದಾ ವಿತ್ಯಾನಂದರಾದ।
ಇತ್ಯಧಿಕ ಸರ್ವರಾ ಜಗದಲಿ ಕೃಷ್ಣದ್ವೈಪಾಯನರ।
ಪುರುಷಾರ್ಥ ಉತ್ತಮ ಪದಲೀವರಾ ವಾರಂ ವಾರ ।।೨।।

ಇಲ್ಲಿ, ಈ ನುಡಿಯಲ್ಲಿ ಒಂದು ಸಾಲು ಅಧಿಕವಾಗಿ ೯ ಸಾಲಿನ ನುಡಿಯಾಗಿದೆ. ಹಾಗು ಸತ್ಯಬೊಧರ ನಂತರ ಪೀಠಕ್ಕೆ ಬಂದ ಮತ್ತೆ ಮೂರು ಯತಿಗಳ ಉಲ್ಲೇಖ ಬಂದಿದೆ. ಸತ್ಯಬೋಧ ತೀರ್ಥರ ನಂತರ ಉತ್ತರಾದಿಮಠವನ್ನು ಕ್ರಮವಾಗಿ ಆಳಿದ ಸತ್ಯಸಂಧ, ಸತ್ಯವರ ಹಾಗೂ ಸತ್ಯಧರ್ಮ ತೀರ್ಥರುಗಳಲ್ಲಿ ಶ್ರೀ ಸತ್ಯಧರ್ಮ ಶ್ರೀ ಪಾದಂಗಳವರು ಪೀಠವನ್ನು ಆಳಿದ್ದು ಕ್ರಿ.ಶ. ೧೭೯೨ರಿಂದ ೧೮೩೦ರವರೆಗೆ //೧೩// ಈ ಕೀರ್ತನೆಯು ದೊರೆತ 'ಟ' ಹಸ್ತಪ್ರತಿಯು ರಚಿತವಾದದ್ದು ಕ್ರಿ.ಶ. ೧೮೨೮ರಲ್ಲಿ ಎಂಬುದನ್ನು ಅದೇ ಹಸ್ತಪ್ರತಿಯ ೧೨೩ ನೆಯ ಪುಟದಲ್ಲಿ 'ಶಕ ೧೭೫೦ ಸರ್ವಧಾರಿ ಫಾಲ್ಗುಣ ಕೃಷ್ಣ ತ್ರಯೋದಶಿ ಕಾಖಂಡಕೀ ವೆಂಕಟೇಶೇನ ಸವದತ್ತಿ ಗ್ರಾಮೇ ಗುರೌ ಲಿಖಿತ:' ಎಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಈ ಪ್ರತಿಯನ್ನು ಬರೆಯುವಾಗ ಉತ್ತರಾದಿ ಮಠವನ್ನು ಶ್ರೀ ಸತ್ಯಧರ್ಮ ತೀರ್ಥರು ಆಳುತ್ತಿದ್ದರು. ಆದ್ದರಿಂದ ಅವರನ್ನು ಸ್ಮರಿಸಲಾಯಿತು. ಈಗ ಕೀರ್ತನೆಯ ಮೂಲಪಾಠವನ್ನು ಗುರುತಿಸಬೇಕು.

ಪ್ರಸ್ತುತ ದೊರೆತ ಹಸ್ತಪ್ರತಿಗಳಲ್ಲಿ 'ಅ' ಹಸ್ತಪ್ರತಿಯು ಅತಿ ಹಳೆಯದೆಂದೂ ಅದರ ಕಾಲವನ್ನು ಕ್ರಿ.ಶ. ೧೭೩೨ ಎಂದು ಈ ಮೊದಲು ನೋಡಲಾಗಿದೆ. ಅದನ್ನು ಸಂಗ್ರಹಿಸಿ ಬರೆದವರು ಮಹಿಪತಿರಾಯರ ಮೊಮ್ಮಗ ಯತಿರಾಯ ಎಂಬುದನ್ನೂ ಖಚಿತಪಡಿಸಲಾಗಿದೆ. 'ಅ' ಹಸ್ತಪ್ರತಿಯಲ್ಲಿ ದೊರೆತ ಈ ಕೀರ್ತನೆಯ ಮೊದಲಿನ ಧ್ರುವಪದ ಹಾಗೂ ಮೊದಲನೆಯ ನುಡಿಯಲ್ಲಿ ಯಾವ ಬದಲಾವಣೆಯೂ ಇಲ್ಲ. ಎರಡು ಮತ್ತು ಮೂರನೆಯ ನುಡಿಗಳ ಪಾಠ ಹೀಗಿದೆ.

ಇತ್ತ ವಿದ್ಯಾಧೀಶ ಈ ವೇದನಿಧಿ ಘೋಷ।
ಸತ್ಯವ್ರತರ ನಾಮ ಸತ್ಯನಿಧಿಯ ನೇಮ।
ಸತ್ಯ ನಾಥಾಖ್ಯಾತ ಸತ್ಯಾಭಿನವ ತೀರ್ಥ।
ಮತ್ತೆಳೆಯೊಳಗಿರ್ಪ ಮನಕ ಸೂಚಿಸಿಬಪ್ಪ।
ಕೃತ್ಯಮ್ ಸುಜ್ಞಾನ ಕೃಷ್ಣದ್ವೈಪಾಯನ।

ಇತ್ಯಧಿಕ ಸರ್ವರ ಜನದಲಿ।
ಅತ್ಯಧಿಕವಿ ಮೀರ್ವರಾ ಪುರುಷಾರ್ಥ।
ಉತ್ತಮ ಪದಲಿರುವರಾ ವಾರಂ ವಾರ ।।೨।।

ಶರಣೆಂದು ಆದ್ಯರ ಸಕಲ ಪ್ರಸಿದ್ಧರ।
ಸಿರಿಪಾದ ಪ್ರಿಯರ ಶುಭ ವ್ಯಾಸರಾಯರ।
ವರ ಹಯಗ್ರೀವ ಜಗವರಿತ ವಾದಿರಾಜ।
ಪುರಂದರದಾಸ ಪುತ್ರರಾ ವರ ಮಧ್ವರಾ।
ನೆರೆ ತಾಳಪಾಕರ ನುತ ಮತಿ ಕನಕರ।
ಹರಿಭಕ್ತಿ ಉಲ್ಹಾಸರ ಬಂಡೆರಂಗ।
ನರಿತಿಹ ನಿಜದಾಸರ ಮಹಿಪತಿ।
ಗುರು ಶರಣರ ತೋಷರ ವಾರಂ ವಾರ ।।೩।।

ಇದೇ ಪಾಠ 'ಡ' ಹಸ್ತಪ್ರತಿಯಲ್ಲಿಯೂ ದೊರೆಯುತ್ತದೆ. (ಹಸ್ತಪ್ರತಿ 'ಡ' ಕೀರ್ತನೆ ೫೩) 'ಅ' ಹಸ್ತಪ್ರತಿಯು ಯತಿರಾಯರ ಕೈ ಬರಹದ್ದೆಂದು ನೋಡಿದೆಯಷ್ಟೇ. ವಾಸ್ತವದಲ್ಲಿ ಅವರ ಕಾಲಕ್ಕೆ ಉತ್ತರಾದಿಮಠವನ್ನು ಸತ್ಯಪೂರ್ಣ, ಸತ್ಯವಿಜಯ ತೀರ್ಥರು ಆಳಿದರು. ಸತ್ಯ ಪೂರ್ಣತೀರ್ಥರ ಕುರಿತು ಯತಿರಾಯರ ತಂದೆ ಕೃಷ್ಣರಾಯರು ಬೇರೆ ಮೂರು ಕೀರ್ತನೆಗಳನ್ನು ರಚಿಸಿದ್ದಾರೆ.

'ಬೆಳಗಾಯಿತೇಳಿರೈ ಇಳೆಯೊಳಭಿನವ ಮುನಿಯೆ।
ತಿಲಕ ಕರ ಪುಷ್ಕರದ ನೆಲೆಯಲೊಗೆದು।
ಬಲಿದ ವೈರಾಗ್ಯ ಬೆಳೆಯ ಸುಖ ತಂಗಾಳಿ।
ತಳೆಯೆ ಸತ್ಯ ಪೂರ್ಣರೆಂಬೋ ಹೊಳೆವ ರವಿಯುದಯಿಸಿದ।।

ಎಂಬ ನಾಲ್ಕು ನುಡಿಗಳ ಉದಯರಾಗದ ಕೊನೆಯಲ್ಲಿ

'ಮಹಿಪತಿ ನಂದನನುಭವವಿ ಕೀರ್ತಿ ಪಾಡಿದನು।

ಎಂಬ ಅಂಕಿತವಿದೆ. (ಸೇವಾತತ್ವ -ಕೀರ್ತನೆ-೮) ಅದರಂತೆ,

ಧನ್ಯನಾದೆನು ಗುರು ನಿಮ್ಮ ದಯವಿ'

ಎಂಬ ಕೀರ್ತನೆಯಲ್ಲಿ 'ಮಹಿಪತಿಕಂದ' ಎಂಬ ಅಂಕಿತವಿದೆ. (ಅದೇ-೨೫)
ಇನ್ನೊಂದು ಕೀರ್ತನೆ 'ಚರಣವ ನೆನೆ ಮನವೆ। ನಂಬಿ

ಚರಣವ ನೆನೆ।।

ಎಂದು ಪ್ರಾರಂಭವಾಗುವ ಕೀರ್ತನೆಯ ಕೊನೆಯಲ್ಲಿ

'ಮುನಿ ಅಭಿನವ ತೀರ್ಥರಾ ಶುಭಕರ।
ವನಜವಿ ಜನಿಸಿದರಾ।
ಘನ ಸತ್ಯ ವಿಜಯರ ಜನಕನು ತಾನಾಗಿ ಅ।
ವನಿಯೊಳು ಮಹಿಪತಿಜನ ಸಲಹುವರಾ।।

ಎಂಬ ಅಂಕಿತವಿದೆ (ಸೇವಾತತ್ವ ಕೀರ್ತನೆ-೯೧) ಶ್ರೀ ಸತ್ಯಪೂರ್ಣರು ಉತ್ತರಾದಿ ಪೀಠವನ್ನು ಆಳಿದ್ದು ಕ್ರಿ.ಶ.೧೭೦೬ರಿಂದ ೧೭೨೬. ಪೂರ್ತಿ ೨೦ ವರುಷಗಳು

ಎಂದರೆ ಕೃಷ್ಣರಾಯರ ಗೃಹಸ್ಥ ಹಾಗು ಪ್ರೌಢ ವಯದ ಕಾಲ (ಕೃಷ್ಣರಾಯರ ಕಾಲವನ್ನು ಕ್ರಿ.ಶ. ೧೬೭೩ ರಿಂದ ೧೭೨೯ ಎಂದು ಈ ಮೊದಲು ಗುರುತಿಸಲಾಗಿದೆ) ಈ ಮೂರು ಕೀರ್ತನೆಗಳಲ್ಲೂ ಕೃಷ್ಣರಾಯರು ತಮ್ಮ ಅಂಕಿತವನ್ನು ಸರಿಯಾಗಿ ಉಪಯೋಗಿಸಿದವರು 'ನೆನೆದು ನಮಿಸುವೆನು ವಾರಂ ವಾರ' ಎಂಬ ಕೀರ್ತನೆಯಲ್ಲಿ ತಪ್ಪಿ ತಂದೆಯ ಅಂಕಿತವನ್ನು ಬಳಸುವ ಕಾರಣಗಳೇನೂ ಇರಲಿಲ್ಲ.

ಸತ್ಯಾಭಿನವ ತೀರ್ಥರು ಮಹಿಪತಿರಾಯರ ಕಾಲದಲ್ಲಿ ಇದ್ದವರು. ಅಲ್ಲದೆ ಅವರ ಪ್ರೀತಿಯ ಶಿಷ್ಯ ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರು ಮಹಿಪತಿರಾಯರಿಗೆ ಪರಿಚಿತರು ಎಂಬುದನ್ನು ಈ ಮೊದಲು ನೋಡಿಯಾಗಿದೆ.

ಕೀರ್ತನೆಯ ರಚನೆ, ಪದಬಂಧಗಳ ದೃಷ್ಟಿಯಿಂದ ಕೂಡ 'ಅ' ಮತ್ತು 'ಡ' ಹಸ್ತಪ್ರತಿಗಳಲ್ಲಿಯ ಪಾಠಗಳು ಶುದ್ಧವಾಗಿದೆ. ಪ್ರತಿ ನುಡಿಗಳಲ್ಲಿ ಎಂಟು-ಎಂಟು ಸಾಲುಗಳು ಸರಿಯಾಗಿವೆ. ಎಲ್ಲಿಯೂ ಆದಿಪ್ರಾಸ ತಪ್ಪಿಲ್ಲ. ಪ್ರತಿಯೊಂದು ಸಾಲಿನ ಅರ್ಥವೂ ಸ್ಪಷ್ಟವಾಗಿದೆ. ಮುದ್ರಿತ ಪಾಠಗಳಲ್ಲಿನ ಎರಡನೆಯ ನುಡಿಯ ಏಳು ಹಾಗೂ ಎಂಟನೆಯ ಸಾಲುಗಳು 'ಕೃಷ್ಣದ್ವೈಪಾಯನರ ಪುರಾಪಾರ್ಥ। ಉತ್ತಮದಲಿವರ ವಾರಂ ವಾರ।। ಎಂಬುದರ ಅರ್ಥ ಅಸ್ಪಷ್ಟವಾಗಿದ್ದರೆ, 'ಕೃತ್ಯಮ್ ಸುಜ್ಞಾನ ಕೃಷ್ಣದ್ವೈಪಾಯನ। ಇತ್ಯಧಿಕ ಸರ್ವರ ಜನದಲಿ। ಅತ್ಯಧಿಕದಿ ಮೀರ್ವರಾ ಪುರುಷಾರ್ಥ। ಉತ್ತಮ ಪದಲಿರುವರಾ ವಾರಂ ವಾರ।। ಎಂಬುದು ಸ್ಪಷ್ಟ ಅರ್ಥವಾಗುತ್ತದೆ. ಅದರಂತೆ ಮುದ್ರಿತ ಮೂರನೆಯ ನುಡಿಯ ಐದು ಮತ್ತು ಆರನೆಯ ಸಾಲುಗಳು 'ಪುರಂದರ ದಾಸರ ಪುನ್ನರವ ಮಾಳವ। ನೆರೆ ತಾಳಪಾಕರ ಸಂತಮತಿ ಕನಕರ' ಇದರಲ್ಲಿಯ ಪುನ್ನರವ ಮಾಳವಕ್ಕೆ ಅರ್ಥವಿಲ್ಲ. ಆದರೆ ಹಸ್ತಪ್ರತಿಯ 'ಪುರಂದರ ದಾಸರಾ ಪುತ್ರರಾ ವರ ಮಧ್ವರಾ। ನೆರೆ ತಾಳಪಾಕರಾ ಸುತಮತಿ ಕನಕರಾ'। ಎಂಬ ಸಾಲುಗಳು ಸ್ಪಷ್ಟ ಅರ್ಥವನ್ನು ಕೊಡುತ್ತವೆ. ಅಲ್ಲದೆ ಪುರಂದರ ದಾಸರ ಮಗ ಮಧ್ವದಾಸರ ಉಲ್ಲೇಖ ಚಾರಿತ್ರಿಕವಾಗಿ ಗಮನಾರ್ಹವಾಗಿದೆ. ಈ ಎಲ್ಲ ಕಾರಣಗಳಿಂದ 'ನೆನೆದು ನಮಿಸುವೆನು ವಾರಂ ವಾರ' ಎಂಬ ಕೀರ್ತನೆಯು ಮಹಿಪತಿರಾಯರ ಕೃತಿಯೇ ಎಂದು ಹೇಳಬಹುದು.

ಈಗ ಮಹಿಪತಿರಾಯರ ಕೃತಿಗಳ ಸಂಖ್ಯೆಯನ್ನು ಉಪಲಬ್ಧ ಹಸ್ತಪ್ರತಿಗಳು ಹಾಗು ಮುದ್ರಿತ ಸಂಗ್ರಹಗಳ ಆಧಾರದಿಂದ ಹೀಗೆ ನಿರ್ಣಯಿಸಬಹುದು.

ದೇಶಪಾಂಡೆ ಮನೋಹರರಾಯರು 'ಸ್ವಾನಂದ ಸಾಮ್ರಾಜ್ಯ' ಪುಸ್ತಕವನ್ನು ಬರೆಯುವಾಗ ಮಹಿಪತಿರಾಯರ ಬಹುತೇಕ ಕೃತಿಗಳನ್ನು ಸಂಗ್ರಹಿಸಿದ್ದರು. ಆ ಕುರಿತು ಅವರು ತಮ್ಮ ಪುಸ್ತಕದಲ್ಲಿ ಉಲ್ಲೇಖಿಸುತ್ತ ತಮ್ಮ ಹತ್ತಿರ ಇರುವ ಮಹಿಪತಿರಾಯ

ಕೃತಿಗಳ ವಿವರಗಳನ್ನು ಹೀಗೆ ಕೊಡುತ್ತಾರೆ. //೧೪//

| | | | |
|---|---|---|---|
| ಕನ್ನಡ ಪದಗಳು | ೬೨೦ | ಮರಾಠಿ ಪದಗಳು | ೪೩ |
| ಕನ್ನಡ ಸ್ತೋತ್ರಗಳು | ೧೨ | ಮರಾಠಿ ಆರತಿಗಳು | ೩ |
| ಕನ್ನಡ ಆರತಿಗಳು | ೨೫ | ಹಿಂದಿ ಪದಗಳು | ೧೮ |
| | | ಮಿಶ್ರಭಾಷಾ ಪದಗಳು | ೫ |
| ಒಟ್ಟು ಕನ್ನಡ ಪದಗಳು | ೬೫೭ | ಇತರ | ೬೯ |

ಹೀಗೆ ಒಟ್ಟು ೭೨೬ ಕೃತಿಗಳ ವಿವರವನ್ನು ಕೊಡುತ್ತಾರೆ

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದ 'ಮಹಿಪತಿರಾಯರ ಕೃತಿಗಳು' ಸಂಗ್ರಹದಲ್ಲಿ ಎರಡು ಪುನರುಕ್ತಿಗಳನ್ನು ಬಿಟ್ಟು ೬೮೩ ಕೃತಿಗಳನ್ನು ನೋಡಿದೆವಷ್ಟೆ. ಅವುಗಳಲ್ಲಿ ಎರಡು ವಚನಗಳು (ಕೃತಿ-೨೭೫) ಪ್ರತ್ಯೇಕವೆಂದು ಗಣಿಸಿದರೆ, ೬೮೪ ಕೃತಿಗಳಾದುವು. ಅವುಗಳಲ್ಲಿ ಮುದ್ರಿಕೆ ಇಲ್ಲದವುಗಳನ್ನು ಮಹಿಪತಿರಾಯರ ಕೃತಿಗಳೆಂದೆ ಗ್ರಹಿಸಿದರೂ ಅನ್ಯಮುದ್ರಿಕೆಯ ೫ ಕೃತಿಗಳನ್ನು (ಕೃತಿಸಂಖ್ಯೆ -೪೨೯, ಏಕೈಕ ಆಕರ ೧, ೬, ೧೮ ಮತ್ತು ಅಧಿಕ ಕೃತಿ-೮) ಬಿಡಬೇಕಾಗುವುದು. ಅಂದರೆ ಈಗ ಮಹಿಪತಿರಾಯರ ೬೭೯ ಕೃತಿಗಳು ಪ್ರಕಟವಾಗಿವೆ ಎಂದು ಗ್ರಹಿಸಬಹುದು. ಇವುಗಳ ಜೊತೆಗೆ ದೊರೆತ ಹಸ್ತಪ್ರತಿಗಳಲ್ಲಿ ಲಭ್ಯವಿದ್ದ ಅಪ್ರಕಟಿತ ಒಂದು ವಚನ ಹಾಗೂ ಐದು ಕೀರ್ತನೆಗಳನ್ನು (ಅನುಬಂಧದಲ್ಲಿ ಕೊಟ್ಟಿದೆ) ಸೇರಿಸಿದರೆ ಇಂದು ಮಹಿಪತಿರಾಯರ ೬೮೫ ಕನ್ನಡ ಕೃತಿಗಳು ಲಭ್ಯವಾಗಿವೆ ಎಂದು ಹೇಳಬಹುದು. ಇವುಗಳ ಜೊತೆಗೆ ಹಿಂದಿ (ದಖಣಿ) ಮರಾಠಿ ಹಾಗು ಮಿಶ್ರಭಾಷಾ ಕೃತಿಗಳನ್ನು ಸೇರಿಸಿದರೆ ಅಂತಿಮವಾಗಿ -

| | |
|---|---|
| ಕನ್ನಡ ಕೃತಿಗಳು | ೬೮೫ |
| ಮರಾಠಿ ಕೃತಿಗಳು | ೪೬ |
| ಹಿಂದಿ ಕೃತಿಗಳು | ೧೮ |
| ಮಿಶ್ರ ಕೃತಿಗಳು | ೫ |
| ಒಟ್ಟು | ೭೫೪ |

ಹೀಗೆ ಸಧ್ಯದ ಮಟ್ಟಿಗೆ ಮಹಿಪತಿರಾಯರ ೭೫೪ ಕೃತಿಗಳು ದೊರೆಯುತ್ತವೆ. ಇವುಗಳಲ್ಲಿ ದೊರೆತ ಕನ್ನಡ ಕೃತಿಗಳನ್ನು ವಿಷಯಾನುಗುಣವಾಗಿ ಸ್ಥೂಲವಾಗಿ ಹೀಗೆ ವಿಂಗಡಿಸಬಹುದು.

| | |
|---|---|
| ಹರಿಗುರುಗಳ ಮಹಿಮೆ | ೩೨೨ |
| ಅನುಭಾವ/ ಸಾಕ್ಷಾತ್ಕಾರ | ೧೩೪ |
| ಸ್ವಾನುಭವ ಉಪದೇಶ | ೧೫೩ |
| ದ್ವೈತ ಮತ | ೧೩ |
| ಇತರ | ೬೩ |
| ಒಟ್ಟು | ೬೮೫ |

ಇವುಗಳಲ್ಲಿಯ ಕೆಲವು ಮುದ್ರಿತ ಕೃತಿಗಳ ಪಾಠಾಂತರವನ್ನು ಗಮನಿಸಬಹುದು.

## ೫.೩ ಪಾಠಾಂತರಗಳು

ವಿಜಾಪುರ ಹಾಗು ಕಾಖಂಡಕಿಯ ಸುತ್ತಮುತ್ತಲಿನ ಹಳ್ಳಿಗಳ ಜನ ಕಳೆದ ಮುನ್ನೂರು ವರುಷಗಳಿಂದ ಮಹಿಪತಿರಾಯರ ಕೀರ್ತನೆಗಳನ್ನು ಹಾಡುತ್ತ ಬಂದಿದ್ದಾರೆ. ಅಲ್ಲಲ್ಲಿ ಅವರ ಕೃತಿಗಳ ಸಂಗ್ರಹ, ಹಸ್ತಪ್ರತಿಗಳೂ ದೊರೆಯುತ್ತವೆ. ಅವುಗಳಲ್ಲಿಯ ಸುಮಾರು ಹಸ್ತಪ್ರತಿಗಳು ಅವರ ಮನೆತನದವರಲ್ಲಿಯೇ ದೊರೆಯುತ್ತವೆ. ಅವುಗಳ ಆಧಾರದಿಂದ ಮಹಿಪತಿರಾಯರ ಕೃತಿಗಳನ್ನು ಸಂಗ್ರಹಿಸಿ ಹಲವು ರೀತಿಗಳಿಂದ ಅವುಗಳ ಪ್ರಾಮಾಣ್ಯವನ್ನು ಒರೆಗಲ್ಲಿಗೆ ಹಚ್ಚಿ ಅಪಪಾಠಗಳನ್ನು ನಿವಾರಿಸಿ ಯೋಗ್ಯ ಪಾಠಗಳನ್ನು ಹುಡುಕುವ ಕೆಲಸ ಆಗಬೇಕಾಗಿದೆ. ಅವರ ಮನೆತನದವರೇ ಸಂಗ್ರಹಿಸಿದ ಹಸ್ತಪ್ರತಿಗಳಿದ್ದರೂ ಅವುಗಳಲ್ಲಿ ಅಪಪಾಠಗಳು ಹೇರಳವಾಗಿವೆ.

ಮಹಿಪತಿರಾಯರು ತಮ್ಮ ಕೃತಿಗಳನ್ನು ಪ್ರತಿಮಾಡಿ ಇಡುತ್ತಿದ್ದರೋ ಇಲ್ಲವೋ ಎಂಬುದನ್ನು ಖಚಿತವಾಗಿ ಹೇಳಲಾಗದು. ಪರಂಪರೆಯಿಂದ ಕೇಳಿ ಬಂದ ಒಂದು ಹೇಳಿಕೆಯಂತೆ 'ಮಹಿಪತಿರಾಯರು ಕಾಲವಾದಮೇಲೆ ಒಂದು ದಿನ ಕಾಖಂಡಕಿಯಲ್ಲಿ ಅವರು ಕುಳಿತುಕೊಳ್ಳುವ ಕೋಣೆಗೆ ಬೆಂಕಿ ಹತ್ತಿ ಅದರಲ್ಲಿದ್ದ ರಾಯರ ಅಗಣಿತ ಪದಗಳ- ಕೈಬರಹದ ಪ್ರತಿಗಳು ಸುಟ್ಟು ಹೋದವು'' ಮುಂದೆ ಬೂದಿಯನ್ನು ಕೆದರಿದಾಗ ಕೆಲವು ಹೊತ್ತಿಗೆಗಳು ದೊರೆತುವು. ಅವುಗಳನ್ನು ಕೃಷ್ಣರಾಯರು ಹೊರತೆಗೆದು ಪ್ರತಿ ಮಾಡಿ ಇಟ್ಟರು.//೧೫// ಆದರೆ ಇಂದು ಮಹಿಪತಿರಾಯರಾಗಲಿ, ಅವರ ಮಗ ಕೃಷ್ಣರಾಯರಾಗಲಿ ಬರೆದಿರಬಹುದಾದ ಕೈ ಬರಹದ ಪ್ರತಿಗಳು ದೊರೆಯುವುದಿಲ್ಲ. ಈ ಮೊದಲೇ ಹೇಳಿದಂತೆ ದೊರೆತ ಹಸ್ತಪ್ರತಿಗಳಲ್ಲಿ ಕೃಷ್ಣರಾಯರ ಮಗ ಯತಿರಾಯರು ಸಂಗ್ರಹಿಸಿ ಬರೆದ ಹಸ್ತಪ್ರತಿಯೇ ಅತಿ ಹಳೆಯದು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯು ಮಹಿಪತಿರಾಯರ ಕೃತಿಗಳ ಸಂಗ್ರಹವನ್ನು ಪ್ರಕಟಿಸುವಾಗ ಈ ಹಸ್ತಪ್ರತಿ ದೊರೆತಿರಲಿಲ್ಲ. ಸಂಪಾದಕರಾದ ಡಾ. ಜಿ.ವರದರಾಜರಾವ್ ಅವರು ಹೇಳುವಂತೆ, 'ಅಥಣಿಯ ಶ್ರೀಮಾನ್ ದೇಶಪಾಂಡೆ ಮನೋಹರರಾಯರು ತಮ್ಮಲ್ಲಿರುವ ಕೀರ್ತನೆಗಳ ಹಸ್ತಪ್ರತಿಗಳನ್ನು ಉದಾರ ಹೃದಯದಿಂದ ಕೊಟ್ಟರು. ---------- ಆ ಬಳಿಕ ರಾಯರ ವಂಶಿಯರೇ ಆದ ಇಲಕಲ್ಲಿನ ಡಾ. ಕೆ.ಎ.ಕಾಖಂಡಕಿಯವರು ದೇವನಾಗರಿ ಲಿಪಿಯಲ್ಲಿ ಬರೆದಿರುವ ಕೋರಿಕಾಗದದ ಪ್ರತಿಯನ್ನು ಎರವಲಾಗಿ ನೀಡಿದರು----- - ಅತ್ಯಂತ ಪ್ರಾಚೀನವೆನ್ನಬಹುದಾದ ಇಲಕಲ್ಲಿನ ಪ್ರತಿಯಲ್ಲಿಯೇ ಕೆಲವು ಪಾಠಕ್ಲೇಶಗಳಿವೆ. ಅದಕ್ಕೂ ಇತರ ಮುದ್ರಿತ ಪ್ರತಿಗಳಿಗೂ ಭಿನ್ನ ಪಾಠಗಳು ಕಂಡು ಬರುತ್ತವೆ. ಆದ್ದರಿಂದ ಸಾಧ್ಯವಾದಷ್ಟು ಮಟ್ಟಿಗೆ ಇಲಕಲ್ಲ ಪ್ರತಿಯ ಪಾಠಕ್ಕೆ ಪ್ರಾಧಾನ್ಯವನ್ನಿತ್ತು ಉಳಿದ ಪಾಠಗಳನ್ನು ಸಂದರ್ಭೋಚಿತವಾಗಿ ಸ್ವೀಕರಿಸಿದೆ' ಎಂದು ಹೇಳುತ್ತಾರೆ. //೧೬// ಆದರೆ ಹಾಗೆ ಸ್ವೀಕರಿಸುವಾಗಲೂ

ಕೂಡ ಅನೇಕ ಅಪಪಾಠಗಳು ಬಂದುದನ್ನು ಕಾಣುತ್ತೇವೆ. ಅದಕ್ಕೆ ಬಹುಶ: ವಿಜಾಪುರ ಪರಿಸರದ ಕನ್ನಡ ಶಬ್ದಗಳನ್ನು ದೇವನಾಗರಿ ಲಿಪಿಯಿಂದ ಕನ್ನಡ ಲಿಪಿಗೆ ತರುವಾಗ ಸಂಪಾದಕರಿಗೆ ಸಾಕಷ್ಟು ತೊಂದರೆಯಾಗಿ ಇನ್ನಷ್ಟು ಅಪಪಾಠಗಳಿಗೆ ಎಡೆ ಮಾಡಿಕೊಟ್ಟದೆಯೆಂದು ವಿಧಿಯಿಲ್ಲದೆ ಹೇಳಬೇಕಾಗಿದೆ.

ಭಾಷೆಯಲ್ಲಿ ಪ್ರಭೇದಗಳು ತಲೆದೋರುತ್ತುದೊಂದು ನಿಸರ್ಗದ ಸಹಜ ನಿಯಮವಾಗಿದೆ. ಗ್ರಂಥಸ್ಥ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಹಾಗೂ ವಿಜಾಪುರದ ಕನ್ನಡಗಳಲ್ಲಿ ಮಹದಂತರವಿದೆ. ಒಂದು ಪ್ರದೇಶದ ಕನ್ನಡ ಪದವನ್ನು ಆ ಪ್ರದೇಶದ ಸ್ವರ ವಿಧಾನದಲ್ಲಿ ಕೇಳಿದರೇ ಅದರ ರುಚಿ ಹೆಚ್ಚು.

''ಸಾಮಾನ್ಯವಾಗಿ ಇಂದಿನ ಕನ್ನಡ ಪ್ರಕೃತಿ ರೂಪಗಳು (Morphemes) ಅ,ಇ,ಉ,ಎ ಕಾರಾಂತಗಳಾಗಿದ್ದರೂ 'ಎ' ಕಾರಾಂತವಾದ ಪ್ರಕೃತಿಗಳೆಲ್ಲವೂ ಉತ್ತರ ಕರ್ನಾಟಕದಲ್ಲಿ 'ಇ' ಕಾರಾಂತವಾಗಿ ಮಾರ್ಪಟ್ಟಿವೆ. ಉದಾ: ಮನೆ-ಮನಿ, ಕೆರೆ-ಕೆರಿ, ಇತ್ಯಾದಿ. ಆ್ಯ ಕಾರಾಂತವಾದ ಕೆಲವು ನಾಮ ಪ್ರಕೃತಿಗಳೂ ಉಂಟು. ಉದಾ: ಮಂಗ್ಯಾ, ಗಾಣಗ್ಯಾ, ಬಡಿಗ್ಯಾ ಇತ್ಯಾದಿ. ಬಹುವಚನದಲ್ಲಿ ಗೂಳ್-ರ್ ಎಂಬ ಪ್ರತ್ಯಯಗಳು ಬರುತ್ತವೆ. ಹುಡುಗ-ಹುಡುಗೋರು, ಜನ-ಜನರು, ಅಣತಮಗೂಳು, ಅಪಗೂಳು, ಅಕ್ಕಾರು, ಬಣಜಿಗ್ಯಾರು, ಬಡಿಗ್ಯಾರು ಇತ್ಯಾದಿ. ಅದರಂತೆ ಕ್ರಿಯಾಪದ ಆಖ್ಯಾತ ಪ್ರತ್ಯಯಗಳಲ್ಲಿ ಈನಿ-ಈವಿ, ಅನ-ಅರ-ಹಾರ ಎಂವಿತ್ಯಾದಿಯಾಗಿ ಬದಲಾಗುತ್ತವೆ.'' ಎಂದು ಡಾ. ಆರ್.ಸಿ.ಹಿರೇಮಠ ಅವರು ಹೇಳಿದ್ದನ್ನು ಗಮನಿಸಬೇಕು. //೧೭// ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಮೈಸೂರು ವಿಶ್ವವಿದ್ಯಾಲಯದ 'ಶ್ರೀ ಮಹಿಪತಿರಾಯರ ಕೃತಿಗಳು' ಸಂಗ್ರಹವನ್ನು ಅವಲೋಕಿಸಿದರೆ ತುಂಬ ಪಾಠ ದೋಷಗಳು ಕಂಡು ಬರುತ್ತವೆ. ಜೊತೆಗೆ ದೇವನಾಗರಿ ಲಿಪಿಯಿಂದ ಕನ್ನಡ ಲಿಪಿಗೆ ತರ್ಜುಮೆ ಮಾಡುವಾಗಲೂ ಆದ ಕೆಲವು ದೋಷಗಳು ಉಂಟು. ಎಲ್ಲ ಓಲೆಗರಿ ಕೃತಿಗಳ ಪಾಠಾಂತರ, ಅಪಪಾಠಗಳನ್ನು ಇಲ್ಲಿ ಕೊಡುವುದು ಕಷ್ಟ ಸಾಧ್ಯವಾದ್ದರಿಂದ ಕೆಲವು ಕೃತಿಗಳನ್ನಷ್ಟೇ ಇಲ್ಲಿ ಗಮನಿಸಿ ಅಪಪಾಠಗಳ ಪಟ್ಟಿ ಮಾಡಿಕೊಡಲಾಗಿದೆ. ದೊರೆತ ಹಸ್ತಪ್ರತಿಗಳಲ್ಲಿ ಮಹಿಪತಿರಾಯರ ಅಧಿಕ ಕೃತಿಗಳಿರುವ 'ಠ' ಹಸ್ತಪ್ರತಿಯಲ್ಲಿಯ ಕೃತಿಗಳನ್ನು ಮೈಸೂರು ವಿಶ್ವವಿದ್ಯಾಲಯದ ಸಂಗ್ರಹದೊಂದಿಗೆ ಹೋಲಿಸಲಾಗಿದೆ. ಅವುಗಳನ್ನು ಹೀಗೆ ಸೂಚಿಸಲಾಗಿದೆ.

ಠ ಹಸ್ತಪ್ರತಿ । ಕೃತಿ ಸಂಖ್ಯೆ । ನುಡಿಸಂಖ್ಯೆ । ಸಾಲು

ಮೈಸೂರು ಪ್ರತಿ । ಕೃತಿ ಸಂಖ್ಯೆ । ನುಡಿಸಂಖ್ಯೆ । ಸಾಲು

ವಿ।೩೫।೩।೧ ಯರಕವಾಗಿ ಸರಕನಿಸ್ಸು ಕರಕೊ ದೃಢ ಭಕ್ತಿಯಾ।
ಮೈ।೧೩೯।೩।೧ ಎರಕವಾಗಿ ಸರಕನೆ ನೀನು ಕರಕೊ ದೃಢ ಭಕ್ತಿಯಾ।

ಇಲ್ಲಿ ಸರಕನಿಸ್ನು - ಸರಕನೆ ನೀನು ಎಂದಾಗಿದೆ. ಅಲ್ಲದೆ ಯರಕ, ಎರಕವಾಗಿದೆ. ಸರಕನೆ ಇಸ್ನು ಹಾಗು ಸರಕನೆ ನೀನು ಎಂಬಲ್ಲಿಯೂ ಅರ್ಥದಲ್ಲಿ ಸಾಕಷ್ಟು ಅಂತರವಿದೆ.

ವಿ।೩೫।೩।೨ ಅರಕಕೋಟ ತೇಜ್ಯಾನಂಘ್ರಿ ಪರಿಕಿಸೋ ನೀ ಪೂರ್ತಿಯಾ।
ಮೈ।೧೩೯।೩।೨ ಅರಕಕೋಟ ತೇಜನಂಘ್ರಿ ಪರಿಕಿಸೋ ನೀ ಮೂರ್ತಿಯಾ।

ಇಲ್ಲಿ ವಿಜಾಪುರದ 'ಯ' ಕಾರ ಮೈಸೂರಿನ 'ಅ'ಕಾರಕ್ಕೆ ತಿರುಗಿ ಕೊನೆಯ ಪೂರ್ತಿ, ಮೂರ್ತಿಯಾಗಿದೆ.

ವಿ।೫೩।-೧೭ ಮರಳು ಮಂಕಗಳಿದು ಅರಿಯಾಪ್ರೊ।
ಮೈ।೧೪।-೧೭ ಮರುಳ ಮಂಕಗಳಿದರಿತಯುಪ್ರೊ।

★ ★ ★

ವಿ।೫೩।-೧೮ ಪದಗಿ ಬಂದತಿದರಿಟ್ಟು ಸದಮಲ ಬ್ರಹ್ಮಸುಖಾ।
ಮೈ।೧೪।-೧೮ ಒದಗಿ ಬಂದಿದರಿಪ್ಪು ಸದಮಲ ಬ್ರಹ್ಮಸುಖಾ।

★ ★ ★

ವಿ।೩೬।೧ ಯೇಳುತಲಿದ್ದು ಮನವ ನೀ ವಲೀ ನಿಜಮೊನಾ।
ಕುಲಕೋಟಿ ಉದ್ಧರಿಸುವ ನೆಲೆ ನಿಥ ಸ್ಥಾನ।
ಮೈ।೧೨೧।೧ ಏಳುತಲಿದ್ದು ಮನವೆ ನೀನೊಲಿಸು ನಿಜಮೊನ।
ಕುಲಕೋಟಿ ಉದ್ಧರಿಸುವ ನೆಲೆ ನಿಜ ಸ್ಥಾನ।

★ ★ ★

ವಿ।೩೬।೩ ತೋಳಬೇಕ್ಕಲೋ ಮನವ ಹೀನ ಮಲಿನಗುಣ।
ಕಳೇಬೇಕು ನೋಡಲಿದು ಕರ್ಮಕಮಂಧತನಾ।।
ಮೈ।೧೨೧।೩ ತೊಳಬೇಕಲೊ ಮನವ ಮಲಿನಗುಣ।
ಕಳಬೇಕು ನೋಡುಳಿದ ಕರ್ಮ ತಮಂಧತನಾ।।

★ ★ ★

ವಿ।೩೭।೧।೨ ಶರಣ ರಕ್ಷಕಾಗಬೇಕಿದೆ
ಮೈ।೬।೧।೨ ಶರಣ ರಕ್ಷಕ ಬಿರುದನು ಬೇಕಿದೆ (?)

ವಿ।೩೭।೨।೩ ಶರಗು ಹಿಡಿಕುವಾ ಪರಮ ಪುಣ್ಯದೆ।
ಮೈ।೬।೨।೩ ಸೆರಗು ಹಿಡಿಸ್ಯವ ಪರಮ ಪುಣ್ಯದೆ।

ಶಾ। ೩೮। ೪। ೨ ಭುವನದಲ್ಯದ ಸುಕನಳಿಕನ್ಯಾಯಾ।
ಮೈ। ೪೧೯। ೪। ೨ ಭುವನದಲ್ಲಿದೆ ಸುಕ ನಲಿಕಾ ನ್ಯಾಯ।

೫। ೧ ನ್ಯಾಯವ ತಿಳಿದರ ನೋಯುವನೊದು।
೫। ೧ ನ್ಯಾಯವ ತಿಳಿದರೆ ನೋಯುನದೆಂದು।
೫। ೨ ಶ್ರಯ ತಿಳಿಯಲು ತನಗ ತಾ ಬಂಧು।
೫। ೨ ಶ್ರೇಯವ ತಿಳಿದರೆ ತನಗೆ ತಾ ಬಂಧು।
೮। ೧ ಹೆಜ್ಜೆಲಿ ನಡವನು ಕೋಟಗೊಬ್ಬವನು।
೮। ೧ ಹೆಜ್ಜೆಲಿ ನಡೆವವ ಕೋಟಗೊಬ್ಬವನು।
೧೧। ೧ ಜಾಣನೆ ಜನ್ಮ ರಹಿತವಾದವನು।
೧೧। ೧ ಜಾಣನೆ ಜನ್ಮರಹಿತ ತಾನಾದವನು।
೧೧। ೨ ಜನ ವನ ಸಕಲ ಸಮವ ಗಂಡವನು।
೧೧। ೨ ಜನವನೆ ಸಕಲ ಸಮಗಂಡವನು।
೧೨। ೧ ಸಮಗಂಡವಗಳಿದಿಹ್ಯ ಶ್ರಮವೆಲ್ಲಾ।
೧೨। ೧ ಸಮಗಂಡವಗಳಿದಿಹ್ಯ ಭ್ರಮೆಯಿಲ್ಲಾ।

ಶಾ। ೩೮। ೧೩। ೧ ಸೊಲ್ಲಿಗೆ ಮುಟ್ಟದವ ಪ್ರತಿ ಇಲ್ಲಾ
ಮೈ। ೪೧೯। ೧೩। ೧ ಸೊಲ್ಲಿಗೆ ಮುಟ್ಟದವಗೆ ಪ್ರತಿಯಿಲ್ಲ

ಶಾ। ೩೮। ೧೩। ೨ ಎಲ್ಲರೊಳಗ ಪಾಪಾದವ ಬಲ್ಲಾ।
ಮೈ। ೪೧೯। ೧೩। ೨ ಎಲ್ಲರೊಳಗ ಪಾದ ದೇವ ಬಲ್ಲ।

ಶಾ। ೩೮। ೧೮। ೨ ಅನುದಿನ ಘನ ಗುರು ಸೇವಿಸಿ ಬಾಳು।
ಮೈ। ೪೧೯। ೧೮। ೨ ಅನುದಿನ ಘನ ಗುರು ಸೇವಿತ ಬಾಳು

★ ★ ★

ಶಾ। ೩೯। ೧। ೨ ನಿನಗಲ್ಯಾಮುದು ಘನ ಸುಖದಿಂಬು।
ಮೈ। ೪೫೬। ೧। ೨. ನಿನಗೆಲ್ಲ್ಯಮುದು ಘನ ಸುಖದಿಂಬು

ಇಲ್ಲಿ ವಿಜಾಪುರ ಪರಿಸರದ ಪ್ರತ್ಯಯ ಅರ್ಥವಾಗದ್ದಕ್ಕೆ 'ಘನಸುಖದಿಂಬು ನಿನಗೆಲ್ಲಿದೆ' ಎಂಬುದು ಎಲ್ಲಿದೆ? ಎಂದಾಗ ನಿಷೇಧಾರ್ಥವಾಗಿದೆ!

★ ★ ★

ಶಾ। ೩೯। ೧। ೧೦ ಸೋಸಿಲಿ ಹುಟ್ಟುದು ಅಸಿಯು ಕರ್ಮ।
ಮೈ। ೪೫೬। ೧। ೧೦ ಸೋಸಿಲಿ ಹುಟ್ಟುದು ಅಶೀಲ ಕರ್ಮ।

★ ★ ★

ಶಾ। ೪೨। ಧ್ರುವ। ೧ ಇದೆ ನೋಡಿ ಸ್ವತ ಸುದ್ಧ ಮಹಿ।
ಮೈ। ೫೦। ಧ್ರುವ। ೧ ಇದೇ ನೋಡಿ ಸ್ವತ ಸಿದ್ಧ ಮಹಿ।
ಶಾ। ೪೨। ೧। ೩ ಗುರುಸ್ಮರಣೆ ನಿಷ್ಠೆಯೊಳಗೂಡಿ।
ಮೈ। ೫೦। ೧। ೩ ಗುರುಸ್ಮರಣೆಯೆಂಬ ನಿಷ್ಠೆಯೊಳಗೂಡಿ।

★ ★ ★

ಶಾ।೪೬।೩।೪ ಸರ್ವ ಪಾಪ ಹೋಯಿತು ನೋಡಿ
ಮೈ।೪೩।೩।೪ ಸರ್ವ ಪಾಪ ಹೋಯಿತು ಓಡಿ

★ ★ ★

ಶಾ।೬೨।೨।೧ ಪತಿತ ಪಾವನಾ ಬಿರುದನೆ ಖರೆ ಮಾಡುದಿದೊಂದೆ ಪಥಾ।
ಪತಿತ ಪಾವನ ಬಿರುದ ನೆರದರೆ ಮಾಡುವದಿದೊಂದೆ ಪಥಾ।
ಮೈ।೩೨೯।೨।೧

ಅನುದಿನ ಲಿಸಕುಲ ನೀನೆ ಮುರಾರಿ
ಅನುದಿನ ಲಿಪಕುಲ ನೀನೆ ಮುರಾರಿ
ಶಾ।೫೭।೧।೨ ಅನೇಕಾಯಲೀಪ ನೀನೆ ಉದಾರಿ
ಮೈ।೧೧।೧।೨ ಅನೆ ಕಾಯ ಲಿ ಪರಿ ನೀನೆ ಉದಾರಿ
೨।೧
೨।೧

★ ★ ★

ಶಾ।೫೯।೨।೧ ರೇಚಕ ಪೂರ್ವಕದನುಭವ ತಿಳಿದು
ಮೈ।೬೫೫।೨।೧ ರೇಚಕ ಪೂರಕದನುಭವ ತಿಳಿದು
೩।೧ ಕ್ಷರ ಅಕ್ಷರ ತಿಳಿಯದೆ ಬರಪಾ ಅಕ್ಷರದಾ ಖೊಸ್ನ್ಯಾಕ
೩।೧ ಕ್ಷರ ಅಕ್ಷರವ ತಿಳಿಯದೆ ಬರೆವ ಅಕ್ಷರದ ರವಿಸ್ನ್ಯಾಕೆ

ಶಾ।೬೩।೧।೨ ಅರಿತು ಕೊಂಬುವಾದಿದೆಪೆ ಮೇಲು
ಮೈ।೬೩೯।೧।೨ ಅರಿತುಕೊಂಬುವದಿದೆ ಮೊದಲು
೨।೨ ಅರಿಯಲರಿಯದವಾಗಿದೆ ಭ್ರಮವು
೨।೨ ಅರವಿದ ಸರಿಯದವರಿಗಿದೆ ಭ್ರಮವು

★ ★ ★

ಶಾ।೨೧೬।೧।೧ ಶಬ್ದಜ್ಞಾನದ ಅಂಗಡಿ ನೀ ಹಾಕಿ
ಮೈ।೧೧೨।೧।೧ ಶಬ್ದಜ್ಞಾನದ ಅಂಗಡಿಯನೆ ಹಾಕಿ
೧।೪ ಸ್ವಪ್ನನಾದ್ಯೊ ವಿಷ ಸೋಂಕಿ
೧।೪ ಸ್ವಪ್ನನಾದ್ಯೋ ವಿಷಯ ಸೋಂಕಿ

★ ★ ★

ಶಾ।೧೦।೨।೨ ಅನುಭವಾನಂದಾ ಹೃದಯಾ ಘನಮಯ
ಮೈ।ಅ-೮।೨।೨ ಅನುಭವಾನಂದ ದುಯ ಘನಮಯ

★ ★ ★

ಶಾ।೧೨।೩।೧ ಗುರುವಿಂದಧಿಕ ಬ್ಯಾರಿಲ್ಲ ಸುಖ
ಮೈ।೩೭೦।೩।೧ ಗುರುವಿಂದಧಿಕ ಬ್ಯಾರಿಲ್ಲ ಸುಖ

★ ★ ★

'ಇಂದೆನ್ನ ಜನುಮ ಪಾವನವಾಯಿತು।
ತಂದೆ ಶ್ರೀಗುರು ನಿಮ್ಮ ಚರಣ ದರುಶನದಿ ।।ಧ್ರು।।

ಅರ್ಕಮಂಡಲಗಳು ರವಿಶಶಿ ಕಿರಣವು
ಝಳಝಳಿಸುವ ಪ್ರಭೆ ನೋಡಿ ಅನಿಮಿಷ ದೃಷ್ಟಿಲೆನ್ನ ।।ಅ.ಪ।।

ಅಕ್ಷದೊಳು ಸಾಕ್ಷಾತ್ ವಸ್ತುಗತಿಯ ನಿಮ್ಮ
ಪ್ರಕಾಶವನು ತಳೆದು ಅಂಧತ್ವಗಳೆದಿನ್ನು
ಓಂಕಾರ ಮೊದಲಾದ ದ್ವಾದಶ ನಾದದಾ
ಭೇದದ ಘೋಷವ ಕೇಳಿ ಬಧಿರತ್ವ ಕಳೆದಿನ್ನು ।।೧।।

(ಮ್ಮೈ-ಕೀ-೮೮, ಸೇವಾತತ್ವ-೧೬೩, ಸ್ವಾನಂದಾಸಾ-೬)

ಆದರೆ ದೊರೆತ ಹಸ್ತಪ್ರತಿಗಳಲ್ಲಿಯ 'ಅ' (ಕೃತಿಸಂಖ್ಯೆ -೪೮) ಮತ್ತು 'ಠ' (ಕೃತಿಸಂಖ್ಯೆ-೮೨) ಪ್ರತಿಗಳಲ್ಲಿ ಹೀಗಿದೆ.

'ಇಂದ್ಯನ್ನ ಜನುಮ ಪಾವನವಾಯಿತು।
ತಂದೆ ಶ್ರೀಗುರು ನಿಮ್ಮ ಶ್ರೀಚರಣ ದರುಶನದಿ ।।ಧ್ರು।।

ಅರ್ಕ ಮಂಡಲಗಳು ರವಿ ಶಶಿ ಕಿರಣವು।
ಝಳಝಳಿಸುವ ಪ್ರಭೆಯು ನೋಡಿ ಅನುಮಿಶದಾ ದೃಷ್ಟಿಲಿನ್ನಾ।
ಲಕ್ಷಿಯೊಳು ಸಾಕ್ಷಾತ್ವಸ್ತು ಗತಿಯು ನಿಮ್ಮ।
ಪ್ರಕಾಶವನು ಕಂಡಾಂಧತ್ವಗಳದಿನ್ನು ।।೧।।

ಓಂಕಾರ ಮೊದಲಾದ ದ್ವಾದಶ ನಾದದಾ
ಭೇದದಾ ಘೋಷವನು ಕೇಳನ್ನೀ ದೃಶ್ಯದಾ ಕರ್ಣಕೆ,ಇ
ಲಯಲೀಲಿಯೊಳು ಸಾದೃಶ್ಯ ಮೂರ್ತಿಯು ನಿಮ್ಮ
ಶ್ರುತಿಗಳು ಕೇಳಿ ಬಧಿರತ್ವವಾ ಗಳದಿನ್ನು ।।೨।।

ಹೀಗೆ ಇದು ಏಳು ನುಡಿಗಳ ಪದವಿದ್ದು ಅದನ್ನು ಆರು ನುಡಿಗಳ ಪದವನ್ನಾಗಿಸಿ ಪ್ರಕಟಿಸಿದ್ದಾರೆ. ಇಲ್ಲಿ ಪಾಠಾಂತರದೊಂದಿಗೆ ಪಾಠಲೋಪ ಹಾಗು ಅರ್ಥಾಂತರವೂ ಆಗಿದೆ. ಯೋಗ ಮಾರ್ಗದಲ್ಲಿ ಬರುವ ಪ್ರಕಾಶ, ನಾದ, ಬಿಂದು, ಕಳೆ ಇತ್ಯಾದಿಗಳನ್ನು ಒಂದೊಂದು ನುಡಿಯಲ್ಲಿ ವಿವರಿಸುತ್ತ ಪರಮಾತ್ಮನ ಸಾಕ್ಷಾತ್ಕಾರದ ಸ್ಥಿತಿಯವರೆಗೆ ವರ್ಣನೆಯನ್ನು ಮಾಡಿದ್ದಾರೆ. ಮೊದಲ ನುಡಿಯಲ್ಲಿ ಪ್ರಕಾಶದಿಂದ ಅಂಧತ್ವ ಕಳೆದಿದ್ದರೆ ಎರಡನೆಯ ನುಡಿಯಲ್ಲಿ ನಾದದಿಂದ ಬಧಿರತ್ವ ಕಳೆದಿದೆ. ಆದರೆ ಪ್ರಕಟಿತ ಪಾಠಗಳಲ್ಲಿ ಈ ಅರ್ಥಗಳು ಸ್ಪಷ್ಟವಾಗುವುದಿಲ್ಲ.

ಈ ಕಾರಣಗಳಿಂದಾಗಿ ಈಗ ಮತ್ತೊಮ್ಮೆ ಮಹಿಪತಿರಾಯರ ಎಲ್ಲ ಕೃತಿಗಳನ್ನು ಪರಿಷ್ಕರಿಸಿ ವಿಪುಲವಾದ ಅಪಪಾಠಗಳನ್ನು ತೆಗೆದು ಹಾಕಿ ಉಚಿತವಾದ ಕವಿಪಾಠಕ್ಕೆ ಸಮೀಪವಾದ ಪದಗಳನ್ನು ಆಯ್ಕೆ ಮಾಡಬೇಕು. ಕವಿಯ ಪಾಠವನ್ನು ಆರಿಸುವುದು ಅಂಶೀಗಣದ ಛಂದದಲ್ಲಿ ಅಧಿಕ ಕ್ಲಿಷ್ಟವಾದುದು. ಏಕೆಂದರೆ ಸಂಭಾವ್ಯ ಪಾಠಾಂತರಗಳು ಹಸ್ತಪ್ರತಿಗಳಲ್ಲೂ ವಿಪುಲವಾಗಿರುತ್ತವೆ. ಲಿಪಿಕಾರನ ಪ್ರಮಾದದಿಂದ, ತಿದ್ದುವಿಕೆಯಿಂದ, ಬಾಯಿಂದ ಬಾಯಿಗೆ ಹಾಗೂ ಪ್ರದೇಶದಿಂದ ಪ್ರದೇಶಕ್ಕೆ ಕೂಡ ಪಾಠಾಂತರಗಳು ಸಂಭವಿಸುತ್ತವೆ. ಕೆಲವು ಕಡೆಗಳಲ್ಲಿ ಲೋಪವಾಗಿದ್ದರೆ ಇನ್ನು ಕೆಲವು ಕಡೆಗಳಲ್ಲಿ ವಿಸ್ತಾರವಾಗಿರುತ್ತವೆ. ಅಂಥ ಕೆಲವು ಉದಾಹರಣೆಗಳನ್ನು ನೋಡಿದ್ದಾಯಿತು. ಆದ್ದರಿಂದ ಸಾಧ್ಯವಾದಷ್ಟು ಮಟ್ಟಿಗೆ ಮೂಲರೂಪದಲ್ಲಿಯೇ ಪ್ರಕಟಿಸುವ ಅಗತ್ಯ ಇದೆಯೆಂದು ಹೇಳಬಹುದು.

## ಅಡಿ ಟಿಪ್ಪಣಿಗಳು

೧. ಜಿ. ವರದರಾಜರಾವ್ (ಸಂ): ಶ್ರೀಮಹಿಪತಿರಾಯರ ಕೃತಿಗಳು ಪೀಠಿಕೆXXIV
೨. ರಾ ಸ್ವಾ ಪಂಚಮುಖಿ: ಕರ್ನಾಟಕ ಹರಿದಾಸ ಸಾಹಿತ್ಯ ಪುಟ XXXIII
೩. ಎಚ್.ಎಸ್.ವೆಂಕಟೇಶಮೂರ್ತಿ: ಕೀರ್ತನಕಾರರು ಪುಟ ೧೦೭-೧೦೮
೪. ಬೇಲೂರು ಕೇಶವದಾಸ: ಶ್ರೀ ಕರ್ನಾಟಕ ಭಕ್ತವಿಜಯ ಪುಟ ೪೦/೬೭೯
೫. ಅದೇ ಪುಟ ೬೮೦
೬. ಮಹಿಪತಿರಾಯರ ಕೃತಿಳನ್ನು ಉದ್ಧರಿಸುವಾಗ ಈ ಮುಂದೆ ಕೊಡುವ ಕ್ರಮಸಂಖ್ಯೆಗಳು ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ 'ಶ್ರೀ ಮಹಿಪತಿರಾಯರ ಕೃತಿಗಳು' ಎಂಬ ಸಂಗ್ರಹದಿಂದ ಎತ್ತಿಕೊಂಡವುಗಳು.
೭. ಹಸ್ತಪ್ರತಿ : ಟ . ಪ್ರ - ೧೯
೮. ಜಿ. ವರದರಾಜರಾವ (ಸಂ): ಶ್ರೀಮಹಿಪತಿರಾಯರ ಕೃತಿಗಳು ಪೀಠಿಕೆ LVII
೯. ಹಸ್ತಪ್ರತಿ: ಈ-೮೫ ಮತ್ತು ಕ-೪೩೫.
೧೦. ಜಿ.ವರದರಾಜರಾವ (ಸಂ): ಶ್ರೀಮಹಿಪತಿರಾಯರ ಕೃತಿಗಳು ಪೀಠಿಕೆ XXV ಅಡಿಟಿಪ್ಪಣಿ
೧೧. ಅಣ್ಣಪ್ಪಯ್ಯ ಹರಿದಾಸ (ಸಂ): ಕೀರ್ತನೆಗಳ ಸಂಗ್ರಹ ೬. .
ಶ್ರೀಪತಯ್ಯ ಹರಿದಾಸ (ಸಂ): ಸೇವಾತತ್ವ ಕೀ-೨೬
ಜಿ. ವರದರಾಜರಾವ (ಸಂ): ಶ್ರೀಮಹಿಪತಿರಾಯರ ಕೃತಿಗಳು ಕೀ ೩೭೧
೧೨. ಘೀ. ಸ್ವಾ. ಕಮಲಾಪುರ: ಸತ್ಕಥಾ ಪುಟ ೭೫
೧೩. ಅದೇ ಪುಟ ೬೫
೧೪. ಸ್ವಾನಂದ ಸಾಮ್ರಾಜ್ಯ: ಪುಟ ೧೦೮
೧೫. ದೇಶಪಾಂಡೆ ಮನೋಹರರಾವ: ಸ್ವಾನಂದ ಸಾಮ್ರಾಜ್ಯ ಪುಟ ೪೧
೧೬. ಜಿ. ವರದರಾಜರಾವ (ಸಂ): ಶ್ರೀಮಹಿಪತಿರಾಯರ ಕೃತಿಗಳು ಪೀಠಿಕೆ LVI
೧೭. ಆರ್.ಸಿ.ಹಿರೇಮಠ: ಧಾರವಾಡ- ವಿಜಾಪುರ ಕನ್ನಡ
'ಸುವರ್ಣ ಸಂಚಯ' ಮೈ.ವಿ.ವಿ. ಪ್ರಕಟಣೆ
ಪುಟ ೨೭೨ ರಿಂದ ೨೮೩

## ಅಧ್ಯಾಯ -ಆರು

# ಕೃತಿಗಳ ಅವಲೋಕನ

### ೬.೧ ಹಿನ್ನೆಲೆ

ಮಹಿಪತಿರಾಯರು ಹುಟ್ಟಿನಿಂದ ಮಾಧ್ವರು. ಪ್ರಾರಂಭದ ಅಭ್ಯಾಸ ನಡೆದದ್ದು, ಮಧ್ವಶಾಸ್ತ್ರ ಪಂಡಿತರಾದ ಅವರ ತಂದೆ ಕೋನೇರಿರಾಯರಲ್ಲಿ ಆದ್ದರಿಂದ ಬಾಲ್ಯದಲ್ಲಿಯೇ ಅವರ ಕಿವಿಗಳಲ್ಲಿ ಮಧ್ವಮತ ತತ್ವಗಳು ಸಹಜವಾಗಿ ಬಿದ್ದಿರಲು ಸಾಕು. ಮುಂದಿನ ದಿನಗಳಲ್ಲಿ ಅವರ ಸಾಧನ ಮಾರ್ಗ ಯೋಗ ಮುಖವಾಗಿದ್ದರೂ ಹರಿದಾಸ್ಯವನ್ನು ಒಪ್ಪಿಕೊಂಡಿದ್ದರು. ಹರಿ ಸರ್ವೋತ್ತುಮತ್ವ, ಹರಿನಾಮ ಮಹಿಮೆಗಳ ಗುಣಗಾನದೊಂದಿಗೆ ಯೋಗ ಸಿದ್ಧಿಯನ್ನು ಪಡೆದವರಾಗಿದ್ದರು. ತಮ್ಮ ಕೀರ್ತನೆಗಳಲ್ಲಿ ಎರಡನೂ ಹೇಳಲು ಪ್ರಯತ್ನಿಸಿದರು. ಉಳಿದ ಹರಿದಾಸರಂತೆ ಅವರು ತಂಬೂರಿ ತಾಳಗಳನ್ನು ಹಿಡಿದು ಊರೂರು ಅಲೆಯಲಿಲ್ಲ. ಅವರು ತಮ್ಮ ಇಡೀ ಬದುಕಿನಲ್ಲಿ ವಿಜಾಪುರ, ಸಾರವಾಡ, ಶಹಪೂರ ಹಾಗೂ ಕಾಖಂಡಕಿ ಈ ನಾಲ್ಕು ಊರುಗಳನ್ನು ಬಿಟ್ಟು ಬೇರೆಡೆಗಳಲ್ಲಿ ಕ್ಷೇತ್ರದರ್ಶನಗಳಿಗೆ ಕೂಡ ಹೋದ ಉಲ್ಲೇಖಗಳು ದೊರೆಯುವುದಿಲ್ಲ. ಬದುಕಿನ ಕೊನೆಯ ದಿನಗಳಲ್ಲಿ ಅವರು ಆಗಿನ ಹತ್ತಿರದ ಕೊಲ್ಹಾರಕ್ಕೆ ಹೋಗಿ ಬರುತ್ತಿರಬಹುದೆಂದು ನಂಬಬಹುದಾಗಿದೆ. ಈ ಐದು ಊರುಗಳು ಕೂಡ ಯಾವುದೇ ಮತದ, ಧರ್ಮದ ಪುಣ್ಯಕ್ಷೇತ್ರಗಳಾಗಿರಲಿಲ್ಲ. ಸ್ಥಳ ಮಹಾತ್ಮೆಗಳನ್ನು ಪಡೆದಿರಲಿಲ್ಲ ಎಂಬುದು ಗಮನಾರ್ಹವಾಗಿದೆ. ಅವರ ಮರಿಮಗ ಹೇಳುವಂತೆ

'ಕಾಖಂಡಕಿ ಸ್ಥಳ ಶ್ರೀಕರ ವಂದ್ಯ ನಿರಾಕರಿಸದೆ ಅಂಗೀಕರಿಸಿದಿರಾ।
ಎಂದೆಂದಿಗೂ ಹೊರಗೊಂದಿನ ಹೋಗದೆ।
ಮಂದಿರದೊಳಗಾನಂದದಲಿಹರಾ।' ಎಂಬುದು ಸತ್ಯ //೧// ಹೀಗೆ ಹೇಳಿತೆಂದು ಅವರಿಗೆ ಹೊರಗಿನ ಜಗತ್ತಿನ ಸಂಪರ್ಕ ಇರಲಿಲ್ಲವೆಂದಲ್ಲ.

'ನೆಟ್ಟನೆ ಶರಣರ ಪುಟ್ಟಿಸಿರಧಿಕಾ। ಬಿಟ್ಟುಪದೇಶವ ಕೊಟ್ಟು ಸಾಕುವರಾ' ಎಂಬಂತೆ ಅವರೆ ಶರಣರನ್ನು ಪುಟ್ಟಿಸಿದರು.//೨// ಅವರಿಗೆ ಹೇಳಿದ ಅನುಭವಗಳು, ತತ್ವಗಳು, ಉಪದೇಶಗಳನ್ನು ಅವರ ಕೃತಿಗಳೆಂದು ಗ್ರಹಿಸಬಹುದು.

ಮಹಿಪತಿರಾಯರು ಬಹುಭಾಷಾ ವಿಶಾರದರಾಗಿದ್ದರು. ಸಹಜವಾಗಿ ಆ ಭಾಷೆಗಳಲ್ಲಿಯ ಭಕ್ತಿ ಸಾಹಿತ್ಯವನ್ನು ಅವರು ಅಭ್ಯಸಿಸಿದವರಾಗಿದ್ದರು. ಮಹಾರಾಷ್ಟ್ರದಲ್ಲಿಯ ಮಹಾನುಭಾವ, ಭಾಗವತ ಅವಧೂತ ಸಂಪ್ರದಾಯಗಳು ಹಾಗು ಮುಸ್ಲಿಂರಿಂದ ಪ್ರಚಲಿತದಲ್ಲಿದ್ದ ಸೂಫಿ ಸಂಪ್ರದಾಯ ಕರ್ನಾಟಕದ ವೀರಶೈವ ಶರಣ ಸಾಹಿತ್ಯಗಳನ್ನು ಅವರು ಓದಿಕೊಂಡಿದ್ದರು. ಆದ್ದರಿಂದ ಅವರ ಅನೇಕ ಕೃತಿಗಳಲ್ಲಿ ಈ ಎಲ್ಲ ಸಂಪ್ರದಾಯಗಳ ಪಾರಿಭಾಷಿಕ ಪದಗಳು ಕಂಡು

ಬರುತ್ತವೆ. 'ನೇತಿ- ನೇತಿ' 'ಸೋऽಹಂ' 'ಸರ್ವಂ ಖಲು ಬ್ರಹ್ಮ ಇದಂ' ಇತ್ಯಾದಿ ಅದ್ವೈತಪರ ಶ್ರುತಿ ವಚನಗಳೂ ಇವರ ಕೃತಿಗಳಲ್ಲಿ ಕಂಡು ಬರುತ್ತವೆ. ನಿರ್ಗುಣ, ನಿರಾಕಾರ, ಶೂನ್ಯ, ಬಯಲು ನಿರ್ಬಯಲು ಇತ್ಯಾದಿ ಪದಪ್ರಯೋಗಗಳಿಗೂ ಕೊರತೆ ಇಲ್ಲ. ಇದರಿಂದಾಗಿ ಹಲವರು ಇವರ ಸಂಪ್ರದಾಯವನ್ನು ಗುರುತಿಸುವಲ್ಲಿ ಭಿನ್ನ ಅಭಿಪ್ರಾಯಗಳನ್ನು ತಾಳುವಂತೆ ಆಗಿದೆ. ಅವರ ಕೃತಿಗಳಿಗೆ ಮಹಾರಾಷ್ಟ್ರದ ಅನುಭಾವ ಪರಂಪರೆ ಮತ್ತು ಅದ್ವೈತ ಭಕ್ತಿಯ ವ್ಯಾಖ್ಯಾನ ಮಾಡಿದ್ದೂ ಇದೆ. ಅದನ್ನು ಮೊದಲು ಪ್ರಾರಂಭಿಸಿದವರು ಖ್ಯಾತ ಅನುಭಾವಿ, ತತ್ವಜ್ಞಾನಿ ಗುರುದೇವ ರಾನಡೆ ಅವರು. ಮುಂದಿನ ದಿನಗಳಲ್ಲಿ ಅವರ ದಾರಿಯಲ್ಲೇ ಸಾಗಿ ಅವರ ಶಿಷ್ಯ ಅಥಣಿಯ ಶ್ರೀ ಮನೋಹರರಾವ ದೇಶಪಾಂಡೆ ಅವರು ಮಹಿಪತಿರಾಯರ ಕೃತಿಗಳಿಗೆ ಅವಧೂತಪರವಾದ ವಿವರಣೆಗಳನ್ನು ಕೊಟ್ಟರು.

ಶ್ರೀ ಹರಿದಾಸ ಶ್ರೀಪತಯ್ಯನವರು ರಾಯರ ಆಧ್ಯಾತ್ಮ ದೃಷ್ಟಿ ಮಾಧ್ವಪರವಾದದ್ದು ಎಂದು ತಾವು ಸಂಪಾದಿಸಿದ 'ಸೇವಾತತ್ವ' ದಲ್ಲಿ ಪ್ರತಿಪಾದಿಸಿದರು, ಮಧ್ವ ಮತದಲ್ಲಿಯೇ ಅವರಿಗೆ ಅನನ್ಯವಾದ ಶ್ರದ್ಧೆ ಇತ್ತು ಎಂದು ಹೇಳಿದರು. ಅನಂತರದ ದಿನಗಳಲ್ಲಿ ಮೈಸೂರು ವಿಶ್ವವಿದ್ಯಾಲಯವು ಪ್ರಕಟಿಸಿದ ಶ್ರೀ ಮಹಿಪತಿರಾಯರ ಕೃತಿಗಳ ಸಂಗ್ರಹದಲ್ಲಿ ಸಂಪಾದಕರು ಪೀಠಿಕೆಯಲ್ಲಿ ರಾಯರ ಆಧ್ಯಾತ್ಮಿಕ ಮೌಲ್ಯ ಹಾಗೂ ಸಾಹಿತ್ಯ ಮೌಲ್ಯಗಳನ್ನು ತುಸು ಚರ್ಚಿಸಿದ್ದಾರೆ. ವಿಶ್ವವಿದ್ಯಾಲಯದ ಪ್ರಕಟನೆಗೆ ಇರಬೇಕಾದ ಸಂಯಮ ಹಾಗೂ ಗಾಂಭೀರ್ಯದಿಂದ ಈ ಸ್ವಾನುಭವ ಸಿದ್ಧಿಗಳೆರಡನ್ನೂ ಎತ್ತಿ ಹಿಡಿದು ದ್ವೈತ ಸಂಪ್ರದಾಯವೇ ರಾಯರ ಕೀರ್ತನೆಗಳ ತಳಹದಿ ಎಂಬುದನ್ನು ಹಿತಮಿತವಾಗಿ ಹೇಳಿದರು.

ಇತ್ತೀಚಿನ ವರುಷಗಳಲ್ಲಿ ದರ್ಶನರತ್ನ ಪ್ರೊ. ಕೆ.ಟಿ. ಪಾಂಡುರಂಗಿ ಅವರು 'ಶ್ರೀ ಮಹಿಪತಿರಾಯರ ಕೃತಿಗಳಲ್ಲಿಯ ಆಧ್ಯಾತ್ಮಿಕ ದೃಷ್ಟಿ' ಎಂಬ ಚಿಕ್ಕ ಪುಸ್ತಿಕೆಯನ್ನು ಬರೆದು ಅದರಲ್ಲಿ ರಾಯರ ಆಧ್ಯಾತ್ಮಿಕ ದೃಷ್ಟಿ ಶ್ರೀ ಮನ್ಮಧ್ವಮತ ಪರವಾದದ್ದು ಎಂದು ಒತ್ತಿ ಹೇಳಿದರು.

ಹೀಗೆ ಹಲವಾರು ವಿದ್ವಾಂಸರು ತಮ್ಮ-ತಮ್ಮ ಸಂಪ್ರದಾಯಗಳಂತೆ, ತಾವು ನಂಬಿದ ಶ್ರದ್ಧೆಯ ಬೆಳಕಿನಲ್ಲಿ ಮಹಿಪತಿ ರಾಯರಂಥ ಮಹಾತ್ಮರ, ಯೋಗಿಗಳ ತಮಗೆ ಅನುಕೂಲವಾಗುವಂಥ ಕೆಲವು ಕೃತಿಗಳನ್ನು ಆಯ್ದುಕೊಂಡು ಅರ್ಥೈಸಲು ಪ್ರಯತ್ನಿಸಿದ್ದಾರೆ. ಅದು ಅವರವರು ಕಂಡುಕೊಂಡ ದೃಷ್ಟಿ. ಅದಕ್ಕೆ ಅವರು ಸ್ವತಂತ್ರರು. ಆದರೆ ಅದುವೆ ನಿರ್ಣಯವಾಗಲಾರದು.

ಪ್ರಸ್ತುತ ಮಹಿಪತಿರಾಯರ ಕೃತಿಗಳನ್ನು ಅವಲೋಕಿಸುವಾಗ ಇಂಥ ಸಮಸ್ಯೆಗಳು

ಪ್ರತಿ ಹೆಜ್ಜೆ-ಹೆಜ್ಜೆಗೂ ಬರುತ್ತವೆ. ದ್ವೈತವೂ ಇದೆ, ಅದ್ವೈತವೂ ಇದೆ. ದ್ವೈತ-ಅದ್ವೈತ ಎರಡೂ ಇಲ್ಲ. ಅದನ್ನು ರಾಯರೇ ತಮ್ಮ ಒಂದು ಕೃತಿಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. 'ದ್ವೈತ-ಅದ್ವೈತೆಂದು ಹೊಡದಾಡದಿರೋ ಪ್ರಾಣಿ। ಚೇತಿಸಿ ಬ್ಯಾರಿಹ ವಸ್ತುಗಾಣಿ' ಎಂದು ಈ ಸಮಸ್ಯೆಯನ್ನು ಬಗೆಹರಿಸಿದ್ದಾರೆ. ಆದರೆ 'ದಾರ್ಶನಿಕ ಅನುಭವದ ವಿಶ್ಲೇಷಣೆಗೆ ನಿಶ್ಚಿತ ತತ್ವಜ್ಞಾನದ ಆಧಾರ ಅಗತ್ಯ, ತಾತ್ವಿಕ ತಳಹದಿಯ ಅನಿಶ್ಚಿತತೆ ಅಥವಾ ಸಾಂಕರ್ಯವು ದಾರ್ಶನಿಕ ಅನುಭವದ ವಿಶ್ಲೇಷಣೆಗೆ ಸಹಾಯಕವಾಗುವುದಿಲ್ಲ. ಯೋಗಿಗಳೂ, ಮಹಾತ್ಮರೂ ತಾತ್ವಿಕ ಭೂಮಿಕೆಗಳ ವಾದ ವಿವಾದಗಳಲ್ಲಿ ಕಾಲಹರಣ ಮಾಡಲು ಇಷ್ಟಪಡುವದಿಲ್ಲ ಎಂಬುದೂ ನಿಜ. ಆದರೆ ಅವರ ಸಾಧನೆಗೆ ಒಂದು ನಿಶ್ಚಿತ ತತ್ವಜ್ಞಾನದ ತಳಹದಿ ಇದ್ದೇ ಇರುತ್ತದೆ.' ಎಂಬುದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ.

ಮನೆತನದಿಂದ ಮಹಿಪತಿರಾಯರು ಮಾಧ್ವ-ವೈಷ್ಣವ ಸಂಪ್ರದಾಯಕ್ಕೆ ಸೇರಿದವರು. ವಂಶಪಾರಂಪರ್ಯವಾಗಿ ಮಧ್ವ ಮತ ತತ್ವಗಳಲ್ಲಿ ಅಚಲವಾದ ನಂಬುಗೆಯನ್ನು ಇಟ್ಟವರು. ಆದರಿಂದಾಗಿ ವಾಸ್ತವದಲ್ಲಿ ಮಹಿಪತಿರಾಯರು ಕೂಡ ಆ ಶ್ರದ್ಧೆಯನ್ನು ಬದಲಿಸಲಿಲ್ಲ. ಹರಿದಾಸರಂತೆಯೇ ಅವರು ಕೂಡ ವಿಷ್ಣು ಸರ್ವೋತ್ತುಮತ್ವ, ಲಕ್ಷ್ಮೀದೇವಿಯು ಪ್ರಕೃತಿ ನಿಯಾಮಕಳು, ಜಗತ್ತು ಪಾರಮಾರ್ಥಿಕ ಸತ್ಯ, ಮುಕ್ತಿ -ನೈಜಸುಖಾನುಭವ ಹಾಗೂ ಮುಕ್ತಿಗೆ ನಿರ್ಮಲವಾದ ಭಕ್ತಿಯೇ ಮುಖ್ಯ ಸಾಧನೆಯೆಂದು ನಂಬಿದ್ದರು. ಅವುಗಳನ್ನು ತಮ್ಮ ಕೃತಿಗಳಲ್ಲಿ ಪ್ರತಿಪಾದಿಸಿದ್ದಾರೆ. ಆದರೆ ರಾಯರ ಕೃತಿಗಳಿಗೆ ಇದೊಂದೇ ಮುಖ ಇರಲಿಲ್ಲ. ಅವರು ತಮ್ಮ ಸಾಧನೆಗೆ ಬಳಸಿದ್ದು ಯೋಗ ಮಾರ್ಗ. ಈ ಸಾಧಕನ ಜೀವನ ಮಾತ್ರ ಭಾಸ್ಕರ ಸ್ವಾಮಿಗಳಿಂದ ಅವರ ಅನುಗ್ರಹದಿಂದಲೇ ಪ್ರಾರಂಭವಾಯಿತು. ಆದ್ದರಿಂದ ಸಾಧನ ಮಾರ್ಗದಲ್ಲಿಯ ವಿವಿಧ ಹಂತಗಳಲ್ಲಿಯ ಸಾಧಕನ ಸ್ವರೂಪ ಆ ಯೋಗ ಮಾರ್ಗದ್ದೇ ಆಗಿದೆ. ಮಾರ್ಗ ಮಧ್ಯದಲ್ಲಿ ದ್ವೈತ -ಅದ್ವೈತದ ತಳಕು ಇಲ್ಲ. ನಾಮಸ್ಮರಣೆ ಜಪ, ತಂತ್ರಯೋಗ ಹಾಗೂ ರಾಜಯೋಗದ ಅನುಭವಗಳನ್ನು ಅವರು ಅದ್ಭುತವಾಗಿ ವರ್ಣಿಸಿದ್ದಾರೆ.

ಹರಿದಾಸರ ಪರಂಪರೆಯಲ್ಲಿ ಕಂಡು ಬರದ ರೀತಿಯಲ್ಲಿ ಕೆಲವೊಮ್ಮೆ ಗುರುವಿನ ವರ್ಣನೆ, ಗುರು ತತ್ವದ ಮಹತ್ವವನ್ನು ಚಿತ್ರಿಸಿದ್ದಾರೆ ಎಂದು ಅನಿಸಬಹುದು. ಉಳಿದ ಯಾವ ಹರಿದಾಸರೂ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿರದ 'ದತ್ತಾತ್ರಯ'ನ ಕುರಿತಾದ ಕೀರ್ತನೆಗಳನ್ನು ರಾಯರು ರಚಿಸಿದರು. ಉಳಿದ ಹರಿದಾಸರು ವಿಷ್ಣು ಭಕ್ತಿ - ಭಕ್ತಿಯ ಅನುಭವಗಳನ್ನು ಮಾತ್ರ ವರ್ಣಿಸಿದರೆ ಮಹಿಪತಿರಾಯರು ಯೋಗಮಾರ್ಗದ ವಿಶಿಷ್ಟ ಅನುಭವಗಳನ್ನು ಸವಿವರವಾಗಿ ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದರು. ಆದ್ದರಿಂದ ಮಹಿಪತಿರಾಯರು ಕೇವಲ ಹರಿದಾಸರೆಂದಾಗಲೀ, ಯೋಗಿಗಳೆಂದಾಗಲೀ

ತಂತ್ರಸಾಧಕರೆಂದಾಗಲೀ, ಮಹಾಭಕ್ತರೆಂದಾಗಲೀ ಪರಿಗಣಿಸಲು ಬರುವುದಿಲ್ಲ. ಅವರು ಈ ಎಲ್ಲವುಗಳೂ ಆಗಿದ್ದರು ಮತ್ತು ಸಮಕಾಲೀನದಲ್ಲಿ ಸಾಧ್ಯವಿದ್ದ ಎಲ್ಲ ಮಾರ್ಗಗಳಿಂದಲೂ ಆಧ್ಯಾತ್ಮ ಸಾಧನೆ ಮಾಡಿ ಅದ್ಭುತ ಸಿದ್ಧಿಗಳನ್ನು ಪಡೆದಿದ್ದರು. ಈ ದೃಷ್ಟಿಯಿಂದ ಅವರ ಸಾಧನ ಮಾರ್ಗವು ಸಂಕೀರ್ಣವಾದದ್ದು. ಅಂತೆಯೇ 'ಕರ್ನಾಟಕದ ಅಷ್ಟೇ ಏಕೆ ವಿಶ್ವದ ಅನುಭಾವಿಗಳಲ್ಲಿಯೇ ಅವರ ಸ್ಥಾನವು ವಿಶಿಷ್ಟವಾದದ್ದು' ಎಂಬ ಗುರುದೇವ ರಾನಡೆ ಅವರ ಹೇಳಿಕೆ ಗಮನಾರ್ಹವಾಗಿದೆ. ಅದನ್ನು ಚರ್ಚಿಸಲು ವಿಮರ್ಶಕನಿಗೆ ಎಲ್ಲ ಸಂಪ್ರದಾಯಗಳ ಶಾಸ್ತ್ರಾಭ್ಯಾಸದ ಜೊತೆಗೆ ನಿರ್ದಿಷ್ಟ ಯೋಗಾಭ್ಯಾಸದ ಪರಿಚಯ ಸಿದ್ಧಿಗಳೂ ಬೇಕು. 'ಆತ್ಮಾನು ಸಂಧಾನದಿಂದ ಬ್ರಹ್ಮ ಸಾಕ್ಷಾತ್ಕಾರವನ್ನು ಸಾಧಿಸಿ, ಯಾವ ತುತ್ತತುದಿಯನ್ನು ಮುಟ್ಟಿರುವರೆಂಬುದನ್ನು, ಆ ಕ್ಷೇತ್ರದಲ್ಲಿ ಸಾಕಷ್ಟು ಪರಿಣತಿಯನ್ನು ಪಡೆದವರು ಮಾತ್ರ ವಿಶ್ಲೇಷಿಸಿ ಹೇಳಲು ಶಕ್ತರು' ಎಂಬುದನ್ನು ಮರೆಯುವಂತಿಲ್ಲ.

ಆದ್ದರಿಂದ ಇರುವ ಇತಿ-ಮಿತಿಗಳಲ್ಲಿ ಮಹಿಪತಿ ರಾಯರ ಕನ್ನಡ ಕೃತಿಗಳನ್ನು, ಸಂಪ್ರದಾಯ, ಸಾಧನೆ, ಸಾಕ್ಷಾತ್ಕಾರ ಸುಪಥ ದರ್ಶನ ಹಾಗೂ ಸಾಹಿತ್ಯ ಸೌಂದರ್ಯ ಎಂದು ಐದು ವಿಭಾಗಗಳಲ್ಲಿ ಸಮೀಕ್ಷಿಸುವ ಪ್ರಯತ್ನ ಮಾಡಲಾಗಿದೆ.

೬.೨ ಸಂಪ್ರದಾಯ:

ಸಾಧನೆಗೆ ಒಂದು ನಿಶ್ಚಿತ ತತ್ವಜ್ಞಾನದ ತಳಹದಿ ಇದ್ದೇ ಇರುತ್ತದೆ ಎಂದು ಹೇಳಿತಷ್ಟೆ. ಮಹಿಪತಿರಾಯರ ಸಾಧನೆಯ ತಳಹದಿ ಶ್ರೀಮನ್ಮಧ್ವಮತ ಸಂಪ್ರದಾಯವೇ ಆಗಿತ್ತು.

ಮಧ್ವಮತದ ತತ್ವಗಳನ್ನು ಶ್ರೀ ವ್ಯಾಸರಾಯರು ಒಂದು ಶ್ಲೋಕದಲ್ಲಿ ಸುಂದರವಾಗಿ ಹೇಳಿದ್ದಾರೆ.

"ಶ್ರೀ ಮನ್ಮಧ್ವಮತೇ ಹರಿ: ಪರತರ: ಸತ್ಯಂ ಜಗತ್ತತ್ವತೋ।
ಭೇದೋ ಜೀವಗಣಾ ಹರೇರನುಚರಾ: ನೀಚೋಚ್ಚ ಭಾವಂಗತಾ।
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ।
ಹ್ಯಕ್ಷಾದಿತ್ರಿತಯಂ ಪ್ರಮಾಣ ಮಖಿಲಾಮ್ನಾಯೈಕವೇದ್ಯೋ ಹರಿ:।।"

ಶ್ರೀ ಹರಿಯು ಸರ್ವೋತ್ತಮನು. ಜಗತ್ತು ಪಾರಮಾರ್ಥಿಕ ಸತ್ಯ, ಪಂಚಭೇದಗಳು ಸತ್ಯ ಮತ್ತು ನಿತ್ಯ. ಜೀವಗಣಗಳು ಶ್ರೀ ಹರಿಯ ಅನುಚರರು - ಅಥವಾ ಪ್ರತಿಬಿಂಬಗಳು ನಿತ್ಯತಾರತಮ್ಯವುಳ್ಳವರು. ಸ್ವರೂಪಸುಖಾನುಭವವೇ ಮುಕ್ತಿ. ನಿರ್ಮಲವಾದ ಭಕ್ತಿಯು ಮುಕ್ತಿಗೆ ಸಾಧನವು. ಪ್ರತ್ಯಕ್ಷ, ಅನುಮಾನ ಆಗಮಗಳು ಸಾಧನ ಪ್ರಮಾಣಗಳು, ಮತ್ತು ಶ್ರೀ ಹರಿಯು ಆಗಮ ಮಾತ್ರ ವೇದ್ಯನು ಎಂದು ಶ್ರೀ ಮಧ್ವಾಚಾರ್ಯರ ತತ್ವಗಳನ್ನು ಸಂಕ್ಷಿಪ್ತವಾಗಿ ಸುಂದರವಾಗಿ ಶ್ರೀ

ವ್ಯಾಸರಾಯರು ನಿರೂಪಿಸಿದ್ದಾರೆ. ಈ ತತ್ವಗಳನ್ನು ಮಹಿಪತಿರಾಯರು ತಮ್ಮ ಕೃತಿಗಳಲ್ಲಿ ಹೇಳಿದ 'ಇಷ್ಟದೈವಸ್ತುತಿ' ಗುರುಪರಂಪರೆ, ಹಲವಾರು ಪೌರಾಣಿಕ ಪ್ರಸಂಗಗಳ ಉಲ್ಲೇಖ ಹಾಗೂ ಆಗಿಂದಾಗ್ಗೆ ಜನರಿಗೆ ಹೇಳಿರುವ ನೀತಿ ಬೋಧೆಗಳಿಂದ ಗ್ರಹಿಸಲು ಸಾಧ್ಯವಿದೆ.

ರಾಯರ ಇಷ್ಟದೈವವು 'ಶ್ರೀಹರಿ' ಎಂಬುದನ್ನು ಅವರ ೬೮೫ ಕೃತಿಗಳಲ್ಲಿಯ ಸುಮಾರು ೩೨೦ ಕ್ಕಿಂತ ಹೆಚ್ಚಿನ ರಚನೆಗಳಿಂದ ತಿಳಿಯಬಹುದಾಗಿದೆ. ಶ್ರೀ ಹರಿಯು ಮಾಧ್ವರ ಇಷ್ಟದೈವ. ಅವನು ಸರ್ವೋತ್ತಮನು. ಸ್ವತಂತ್ರನು. ಹರಿಸರ್ವೋತ್ತಮತ್ವವು ಮಧ್ವಾಚಾರ್ಯರ ಉಪದೇಶದ ತಿರುಳು.

'ಶೃಣುತಾಮಲ ಸತ್ಯವಚ: ಪರಮಂ।
ಶಪಥೇರಿತ ಮುಚ್ಛ್ರಿತ ಬಾಹುಯುಗಂ।
ನ ಹರೇ: ಪರಮೋ: ನ ಹರೇ: ಸದೃಶ:।
ಪರಮ: ಸ ತು ಸರ್ವಚಿದಾತ್ಮಗಣಾತ್।।'

ಎಂದು ಶ್ರೀ ಮಧ್ವಾಚಾರ್ಯರು ತಮ್ಮ 'ದ್ವಾದಶ ಸ್ತೋತ್ರ'ದಲ್ಲಿ ಸಾರಿ ಹೇಳುತ್ತಾರೆ. ಶ್ರೀ ಹರಿಗಿಂತ ಉತ್ತಮನಾದವನಿಲ್ಲ. ಅವನಿಗೆ ಸಮನಾದವರೂ ಇಲ್ಲ. ಎಲ್ಲ ಜೀವರಾಶಿಗಳಿಗಿಂತ ಅವನು ಉತ್ತಮನು ಎಂದು ನಾನು ಎರಡೂ ಕೈಗಳನ್ನೆತ್ತಿ ಶಪಥ ಮಾಡುತ್ತ ಪರಮ ಸತ್ಯವಾದ ಈ ಮಾತನ್ನು ಹೇಳುತ್ತಿದ್ದೇನೆ ಕೇಳಿ ಎಂದು ಅವರು ಹೇಳುತ್ತಾರೆ.

ಇದನ್ನೇ ಮಹಿಪತಿರಾಯರು ಏಳು ನುಡಿಗಳ ತಮ್ಮ ಒಂದು ನಿಡಿದಾದ ಕೃತಿಯಲ್ಲಿ ಸುಂದರವಾಗಿ ನಿರೂಪಿಸುತ್ತಾರೆ.

'ಹರಿ ಹರಿ ಹರಿ ಹರಿ ಹರಿಯೆನ ಬೇಕು
ಹರಿ ಸ್ಮರಣೆಯೊಳನುದಿನವಿರಬೇಕು ।।ಧ್ರು।।

(ಮ.ಕೀ.೬೪೩)//೩//

ಈ ಕೀರ್ತನೆಯಲ್ಲಿ 'ಹರಿಯೇ ಶ್ರೀ ಪರಬ್ರಹ್ಮ, ಹರಿ ಪರಂದೈವ, ಹರಿಯೇ ತಾಯಿ-ತಂದೆ, ಬಂಧು ಬಳಗ, ಆಪ್ತ ಮಿತ್ರರು ಸಲಹುವ ದೊರೆ ಸುಖ ಸೌಖ್ಯದ ಸಿರಿ,' ಹರಿಯೇ ಸರ್ವೋತ್ತಮ ಸ್ವಾಮಿ, ಸಕಲ ತಾ ಧರ್ಮ, ಹರಿಯೇ ಶ್ರೀ ಪರಮಾತ್ಮ ಎಂದು ಹೇಳುತ್ತಾರೆ. ಆದ್ದರಿಂದ ಆತನನ್ನು 'ಹರಿ ಹರಿಯೆಂದು ನೆನಿಯೋ ಮರೆಯದೆ ಮನುಜ' ಎಂದು ಮತ್ತೊಂದು ಕೀರ್ತನೆಯಲ್ಲಿ ಹೇಳುತ್ತಾರೆ. 'ಹಲವು ಪರಿಲಿ ಶ್ರೀ ಹರಿಸರ್ವೋತ್ತಮನನ್ನು ನಡೆಯುತ, ನುಡಿಯುತ್ತ, ನಡೆನುಡಿಯೊಳಗೆ ಇಡುವುತ ತೊಡವುತ ಮುಡವುತ, ಮನದೊಳು, ಉಣುತ, ಉಡುತ ಅನ್ನೋದಕ ಕೊಳುತ ವನಿತೆಯರೊಡಗೂಡಿ ಘನಸುಖ ಪಡೆಯುತ ಅನುಭವದಿಂದ ಆನಂದದಿಂದ, ತನುಮನದೊಳಗೆ ಕ್ಷಣ-ಕ್ಷಣಕ್ಕೆ ಏಳುತ ಕೂಡುತ ಮಲಗುತ ಆ ಪೊಡವಿಧರನನ್ನು ಬಿಡದೆ ಸ್ಮರಿಸು ಎಂದು ಘಂಟಾ ಘೋಷವಾಗಿ ಹೇಳುತ್ತಾರೆ. (ಮ.ಕೀ.೬೪೧)

ಇನ್ನೊಂದು ಕೀರ್ತನೆಯಲ್ಲಿ ಮಧ್ವಾಚಾರ್ಯರು ತಮ್ಮ ದ್ವಾದಶ ಸ್ತೋತ್ರದಲ್ಲಿ ಹೇಳಿದ 'ಹರಿದೇವ ಪರೋ, ಹರಿರೇವ ಗುರೋಃ ಹರಿದೇವ ಜಗತ್ಪಿತ್ರ ಮಾತೃ ಗತಿ:।।' ಎಂಬುದನ್ನು ಅವರದೇ ಧಾಟಿಯಲ್ಲಿ

'ಗುರು ಮಧ್ವಪರ್ಣೇಳಿದ ನಿಜಕೀಲು।
ಅರಿತುಕೊಂಬುದಿದೆ ಮೇಲು।
ಪರಮಭಾಗವತರನುಭವದ ಬಾಗಿಲು।
ಹರಿದೇವ ಪರೋ ಹರಿದೇವ ಗುರೋ।
ಹರಿಯೇ ಗುರುವೆಂದರಪ್ಪಿರೋ।।' (ಮ.ಕೀ.೬೩೫)

ಎಂದು ತಾನು ಶ್ರೀ ಹರಿಯನ್ನೇ ಗುರು ಎಂದು ಆರಾಧಿಸುವುದನ್ನು ಸ್ಪಷ್ಟ ಪಡಿಸುತ್ತಾರೆ. ಮತ್ತು ಅದು 'ಗುರು ಮಧ್ವರು ಹೇಳಿದ ನಿಜ ಕೀಲು' ಎಂಬುದನ್ನು ಒಪ್ಪುತ್ತಾರೆ.

'ಹರಿದೇವ ಜಗತ್ಪಿತೃ ಮಾತೃ ಗತಿ:' ಎಂಬುದನ್ನು

'ಹರಿಯೇ ತಾಯಿತಂದೆನಬೇಕು।
ಹರಿಯೇ ನಿಜಬಂಧುಬಳಗೆನಬೇಕು।
ಹರಿಯೇ ಆಪ್ತ ಮೈತ್ರನಬೇಕು।
ಹರಿ ಕುಲಕೋಟಿ ಬಳಗೆನಬೇಕು।
ಹರಿ ಹರಿ ಹರಿ ಹರಿ ಹರಿಯೆನಬೇಕು।
ಹರಿಸ್ಮರಣೆಯೊಳನುದಿನವಿರಬೇಕು. (ಮ.ಕೀ.೬೪೩)

ಎಂದು ಮುಂದುವರೆದು ತಾವು ಹರಿಯನ್ನೇ ಗುರುವೆಂದು ಆರಾಧಿಸುವುದನ್ನು ಸ್ಪಷ್ಟಪಡಿಸುತ್ತಾರೆ.

ಇಂಥ ಹರಿಸರ್ವೋತ್ತಮನ ನಾಮಸ್ಮರಣೆಯ ಮಹಿಮೆಯನ್ನು, ಹಿರಿಮೆಯನ್ನು ರಾಯರು ಹಲವಾರು ಸಲ ತುಂಬು ಹೃದಯದಿಂದ ಸ್ಮರಿಸುತ್ತಾರೆ.

'ಎಲ್ಲಿ ಶ್ರೀ ಹರಿನಾಮ ಘೋಷ।
ಅಲ್ಲಿ ಸಕಲ ಸುಖ ಸಂತೋಷ।
ಸುಲಭದಲಿಹುದು ಭವ ಭಯದ ನಾಶ।
ಹರಿ ನಾಮ ಘೋಷ।।
ಹರಸುವುದಾನಂದದ ಹರುಷ।
ಹರಿಸುವುದು ಕಲಿಮಲ ಕಲುಷ।
ತ್ವರಿತೋಡಿಸುವುದು ಮಹಾಪಾತಕ ದೋಷ।
ಹರಿನಾಮ ಘೋಷ।।
ಸ್ವಹಿತ ಸಾಧನದ ಸು ಉಪದೇಶ।
ಬಾಹ್ಯಾಂತರ ದೋರುವ ಪ್ರಕಾಶ।
ಮಹಿಪತಿಗಿದೆ ನಿತ್ಯವನುಭವದುಲ್ಲಾಸ।
ಹರಿನಾಮ ಘೋಷ। (ಮ.ಕೀ.೬೨೫)

ಹರಿನಾಮ ಘೋಷದಿಂದ ಉದ್ಧಾರವಾದವರು ಹಲವರು ಎಂದು ಇನ್ನೊಂದು ಕೀರ್ತನೆಯಲ್ಲಿ ಹೇಳುತ್ತಾರೆ. ಪ್ರಲ್ಹಾದ, ಪಾಂಡವರು, ಉಪಮನ್ಯು, ಧ್ರುವ, ಒಬ್ಬರೇ ಇಬ್ಬರೇ ಹೇಳಿ ಮುಗಿಸದಷ್ಟು ಜನ ಭಕ್ತರಿದ್ದಾರೆ. (ಮ.ಕೀ.೬೪೦) ಶ್ರೀ ಹರಿಯ ಅನುಯಾಯಿಗಳನ್ನು ಕಂಡರೂ ರಾಯರಿಗೆ ಅನನ್ಯವಾದ ಅಭಿಮಾನ ಮತ್ತು ಆದರ.

'ಹರಿನಂಬಿದವರಿಗೆ ಸರಿಯೆ ಜಗದೊಳಗೆ
ಹರಿದಾಸಾದವಗೆ ಸಕಲ ಮಾನ್ಯವಗೆ,

(ಮ.ಕೀ.೬೨೮)

ಎಂಬ ಕೀರ್ತನೆಯಲ್ಲಿ ಕೊನೆಗೆ 'ಹರಿದಾಸರ ದಾಸಾದ ಮಹಿಪತಿಗೆ ಸರಿಯುಂಟೆ ಪೂರ್ವ ಪುಣ್ಯದ ಫಲ ಸ್ತುತಿಗೆ' ಎಂದು ಕೇಳುತ್ತಾರೆ.

'ಹರಿ ಭಕುತರ ದರುಶನವು ಅತಿ ಹರುಷವು' ಎಂದು ಪ್ರಾರಂಭವಾಗುವ ಮತ್ತೊಂದು ಕೀರ್ತನೆಯಲ್ಲಿ ರಾಯರು ಅವರ ಮಹಿಮೆಗಳನ್ನೆಲ್ಲ ಉಲ್ಲೇಖಿಸಿ ಕೊನೆಗೆ

'ಹರಿಭಕ್ತರ ಸಂಗ ಸ್ನಾನ ಗಂಗ ತುಂಗ।
ಹರಿಮಹಿಮರ ಅಂಗ ಅಂತರಂಗ।
ಹರಿಪರಮಾನಂದ ಗುರುಕರುಣಾ ಕೃಪಾಂಗ।
ತರಳ ಮಹಿಪತಿ ಭವ ಭಯವು ಭಂಗ'

(ಮ.ಕೀ.೬೩೧)

ಎಂದು ತಮ್ಮ ಭಕ್ತಿಯನ್ನು ಸಮರ್ಪಿಸುತ್ತಾರೆ.

'ಹರಿಯು ಪರಾತ್ಪರ ಪೂರ್ಣನು' (ಮ.ಕೀ.೬೩೨)
'ಆತ ತ್ರಿಗುಣರಹಿತ ಅನಂದೋಬ್ರಹ್ಮ' (ಮ.ಕೀ.೧೯೧)
'ಅವನು ಚಿದಾನಂದಾತ್ಮಕ ರೂಪ ಉಳ್ಳವ ಪುರುಷೋತ್ತಮ'(ಕೀ.೧೯೨)

'ಹರಿಯು, ಶ್ರೀಗುರು, ಪರಾತ್ಪರ ಬ್ರಹ್ಮ, ಅತೀತವಾದ ಗುಣತ್ರಯ ಪರಮಾತ್ಮ, ನಿರ್ಗುಣಾನಂದ, ನಿಗಮಗೋಚರ ಅಗಣಿತ ಗುಣ ಪರಿಪೂರ್ಣ ಪರಮ ಪುರುಷ, ಪರಮ ಪ್ರಕಾಶ, ಪರಮಾನಂದ ಸ್ವರೂಪ, ಪರಾತ್ಪರ ಪೂರ್ಣನೂ ಆಗಿದ್ದಾನೆ.' (ಮ.ಕೀ.೯೧)

ಇಲ್ಲಿ ನಿರ್ಗುಣಾನಂದ ಎಂಬ ಮಾತು ಗೂಢವಾಗಿದೆ. ಆನಂದವು ಬ್ರಹ್ಮನ ಸ್ವರೂಪವೂ ಹೌದು. ಗುಣವೂ ಹೌದು. ಈ ಗುಣ-ಗುಣಿ ಅಭೇದವನ್ನು ತೋರಿಸಲು ನಿರ್ಗುಣಾನಂದ ಎಂದು ಹೇಳಲಾಗಿದೆ. ಇದನ್ನು ಕೇವಲ ನಿರ್ಗುಣ ಎಂಬರ್ಥದಲ್ಲಿ ತೆಗೆದುಕೊಂಡರೆ ಮುಂದೆ ಹೇಳಿದ ಅಗಣಿತಗುಣ ಪರಿಪೂರ್ಣ ಎಂಬುದಕ್ಕೆ ಸಂಗತವಾಗುವುದಿಲ್ಲ' ಎಂದು ಪ್ರೊ।। ಕೆ.ಟಿ. ಪಾಂಡುರಂಗಿ ಅವರು ಹೇಳುತ್ತಾರೆ. //೪//

ಹೀಗೆಯೇ ಇನ್ನೊಂದು ಕೀರ್ತನೆಯಲ್ಲಿ 'ಅಗಣಿತ ಗುಣಪರಿಪೂರ್ಣವಾದ ನಾಮ। ನಿರ್ಗುಣಾನಂದವಾಗಿಹ್ಯ ನಾಮ' (ಮ.ಕೀ.೨೦೬) ಎಂಬುದನ್ನು 'ಪರಮಾತ್ಮನ ಸ್ವರೂಪ ಮತ್ತು ಆನಂದಗುಣ ಇವುಗಳಲ್ಲಿ ಭೇದವಿಲ್ಲವೆಂಬುದನ್ನು ಸೂಚಿಸಿರುವುದು, ಶ್ರೀ ಹರಿಯೇ ಗುರುವೆಂದು ಸ್ತುತಿಸುವ ಅವರ ಕೀರ್ತನೆಗಳಲ್ಲಿ ಶ್ರೀ ಹರಿಯ ಮಹಿಮೆಯು ಮಧ್ವ ಸಿದ್ಧಾಂತದ ಪ್ರಮೇಯಗಳಿಗೆ ಅನುಸಾರವಾಗಿ ಸುಂದರವಾಗಿ ವರ್ಣಿಸಲ್ಪಟ್ಟಿರುತ್ತವೆ'' ಎಂಬ ಪ್ರೊ. ಪಾಂಡುರಂಗಿ ಅವರ ಅಭಿಪ್ರಾಯವನ್ನು ಗಮನಿಸಬೇಕು.//೫//

ಹರಿ ಸರ್ವೋತ್ತಮತ್ವವನ್ನು ಒಪ್ಪಿಕೊಂಡ ರಾಯರಿಗೆ ಹರಿಯ ಅವತಾರಗಳಲ್ಲಿಯೂ ಪೂಜ್ಯ ಭಾವನೆ, ಅನನ್ಯ ಭಕ್ತಿ, ಹಲವಾರು ಕೀರ್ತನೆಗಳಲ್ಲಿ ರಾಮ, ಕೃಷ್ಣ, ಹಾಗೂ ಹರಿಯ ದಶಾವತಾರಗಳನ್ನು ಮನದಣಿ ಹಾಡಿ ಹೊಗಳಿದ್ದಾರೆ.

| | |
|---|---|
| 'ಸಾರ್ವಭೌಮ ಶ್ರೀರಾಮ ಶರಣ ರಕ್ಷಕ ನೇಮ | (ಕೀ ೫೮೨) |
| 'ರಾಮರಾಮೆನ್ನಿರೋ ಮುಕ್ತಿತಾಕಾರಣ' | (ಕೀ ೪೮೩) |
| 'ಶ್ರೀರಾಮ ರಾಮನೇ ಸಾರ್ವಭೌಮ' | (ಕೀ ೫೧೯) |
| 'ಸ್ವಾಮಿ ಸೀತಾರಾಮ ಪತಿತಪಾವನ ನಾಮ' | (ಕೀ ೫೯೯) |
| 'ಕಾಯಯ್ಯ ರಘುರಾಮ ದೀನ ಜನೋದ್ಧಾರ' | (ಅನು -೭) |
| 'ಸ್ವಾಮಿ ನೀನೆ ಸಾರ್ವಭೌಮ ರಘುರಾಮ' | (ಅನು- ೨೧) |

ಮೊದಲಾದ ಕೀರ್ತನೆಗಳಲ್ಲಿ ರಘುರಾಮನನ್ನು ಕೊಂಡಾಡಿದ್ದಾರೆ. ಕೃಷ್ಣಾವತಾರವು ಎಲ್ಲ ಹರಿದಾಸರಿಗೂ ಪ್ರಿಯವಾದ ವಿಷಯ, ಅಂತೆಯೇ ರಾಯರಿಗೂ ಅದು ಹೊರತಾಗಿಲ್ಲ. ಬಾಲಕೃಷ್ಣ, ನವನೀತಚೋರ ಹಾಗೂ ಅವನ ಅನೇಕ ಲೀಲೆಗಳನ್ನು ಆತನ ಅನಂತ ಮಹಿಮೆಗಳನ್ನು ಹಲವಾರು ಕೀರ್ತನೆಗಳಲ್ಲಿ ತುಂಬ ಸೊಗಸಾಗಿ ನಿರೂಪಿಸಿದ್ದಾರೆ.

| | |
|---|---|
| 'ಕೃಷ್ಣ ಎಂಥದೋ ನಿನ್ನ ಕರುಣೆ' | (ಕೀ ೧೭೦) |
| 'ಈತನೀಗ ಕೃಷ್ಣನಾಥನು ಶ್ರೀನಾಥನಮ್ಮ' | (ಕೀ ೮೯) |
| 'ಕೃಷ್ಣ ಕೃಪಾಲ ಕರುಣಾದಾಯಕ' | (ಕೀ ೧೭೧) |
| 'ಕೃಷ್ಣ ಎನಗ್ಯಾಕಯ್ಯ ನಮ್ಮ ಕೂಡ' | (ಕೀ ೧೭೨) |
| 'ಕಪಟನಾಟಕನೀತ ಕೃಪಾಸಿಂಧು' | (ಕೀ ೧೩೮) |
| 'ಇವನ ಕಂಡೀರ್‍ಯಾ ನಮ್ಮ ನವನೀತ ಚೋರನ' | (ಕೀ ೬೪) |
| 'ಇವ ನೋಡಮ್ಮ ನವನೀತ ಚೋರ' | (ಕೀ ೬೫) |

ಮೊದಲಾದ ಕೀರ್ತನೆಗಳಲ್ಲಿ ಕೃಷ್ಣನ ಮಹಿಮೆ, ಲೀಲೆಗಳು ಹೃದಯಂಗಮವಾಗಿ ನಿರೂಪಿತವಾಗಿವೆ. 'ವಾಸುದೇವ' ನಾಮವಂತೂ ರಾಯರಿಗೆ ಅತಿಪ್ರಿಯವಾದ ನಾಮ ಬಹಳಷ್ಟು ಕೀರ್ತನೆಗಳಲ್ಲಿ ವಾಸುದೇವನ ಪ್ರಸ್ತಾಪವಿದೆ.

'ವಾಸುದೇವನೊಬ್ಬನೆ ಸರ್ವೇಶ।
ಭಾಸ್ಕರ ಕೋಟಿ ಪ್ರಕಾಶ।
ಭಾಸುತಲಿಹ್ಯರ ಗುರು ದೇವೇಶ।
ದಾಸ ಮಹಿಪತಿ ಪ್ರಾಣೇಶ।

(ಮ. ಕೀ ೫೪೫)

ಎನ್ನುತ್ತಾರೆ ಹರಿಯ ದಶಾವತಾರಗಳನ್ನು ಬಣ್ಣಿಸಿದ ರೀತಿ ಅಪರೂಪವಾದದ್ದು.

ಮಧ್ವ-ಮತದಲ್ಲಿ ಶ್ರೀ ಹರಿಯು ಸರ್ವೋತ್ತಮನೂ, ಪುರುಷೋತ್ತಮನೂ ಆಗಿದ್ದರೆ, ಲಕ್ಷ್ಮೀದೇವಿಯು ಈ ಪ್ರಕೃತಿಯ ನಿಯಾಮಕಳು. ಶ್ರೀ ಹರಿಯು ಅವಳನ್ನು ಸೃಷ್ಟಿಯಲ್ಲಿ ಪ್ರೇರಿಸುವನು. ಈಕೆಯು ಅಚೇತನ ಪ್ರಕೃತಿಗೆ ಅಭಿಮಾನಿ ನಿಯಾಮಕಳು. ಆಕೆಯ ಅನುಗ್ರಹದಿಂದ, ಚತುರ್ಮುಖ ಬ್ರಹ್ಮದೇವರು ಬ್ರಹ್ಮಾಂಡವನ್ನು ಸೃಜಿಸುವರು. ಶ್ರೀ ಹರಿಯು ಲಕ್ಷ್ಮೀದೇವಿಯ ಮುಖಾಂತರ ಬ್ರಹ್ಮಾದಿ ದೇವತೆಗಳಿಂದ ಈ ಜಗತ್ತಿನ ಎಲ್ಲ ವ್ಯಾಪಾರಗಳನ್ನು ನಡೆಸುವನು. ರಾಯರ ಕೃತಿಗಳಲ್ಲಿ ಲಕ್ಷ್ಮೀದೇವಿಯ ಚಿತ್ರ ಕೂಡ ಈ ಅರ್ಥದಲ್ಲಿ ಬಂದಿದೆ.

'ನಮ್ಮಮ್ಮನ ಕಂಡೆ ಬೊಮ್ಮನ ಪಡೆದಿಹಳ' (ಮ. ಕೀ ೩೩೨) ಎಂಬ ಕೀರ್ತನೆಯಲ್ಲಿ 'ಮಾತಾ ಪಿತೃವೆಂಬುದು ಸೂತ್ರಧಾರಿ ತಾನೊಬ್ಬಳೆ' ಎನ್ನುತ್ತಾರೆ ಜಗತ್ತು ಪಾರಮಾರ್ಥಿಕ ಸತ್ಯವೆಂಬ ವಿಷಯವನ್ನು ಕೂಡ ಅವರ ಅನೇಕ ಕೃತಿಗಳಲ್ಲಿ ಕಾಣಬಹುದು.

ಮಹಿಪತಿರಾಯರು ಕ್ರಮಿಸಿದ ಮಾರ್ಗವು ರಾಜಯೋಗದ್ದಾದರೂ ಭಕ್ತಿಯೋಗವು ಅವರ ಜೀವನದ ಸಹಜಗತಿಯಾಗಿತ್ತು. ಶ್ರೀ ಹರಿಯಲ್ಲಿ ನಿರ್ದೋಷವಾದ ಭಕ್ತಿಯೇ ಮುಕ್ತಿಗೆ ಸಾಧನ ಎಂಬುದನ್ನು ಅವರು ಒಪ್ಪುತ್ತಾರೆ. ಬೇರೆ ಬೇರೆ ಪ್ರಕಾರದ ಸಾಧನ ಸಿದ್ಧಿಗಳು ಅವರ ಮಾಧ್ವ ಸಂಪ್ರದಾಯದ ಶ್ರದ್ಧೆಗೆ ಅಡ್ಡ ಬರಲಿಲ್ಲ. ಇನ್ನೊಂದು ಮಾರ್ಗದ ಸಹಾಯವನ್ನು ಪಡೆದುಕೊಂಡೂ ಅವರು ಹರಿದಾಸರ ಮಾರ್ಗದಲ್ಲಿಯೇ ಮುಂದುವರೆದದ್ದು ಅವರ ಜೀವನದ ವೈಶಿಷ್ಟ್ಯವಾಗಿದೆ. ಶ್ರೀ ಹರಿಯನ್ನು ಅವರು ಆರಾಧಿಸಿದ ಬಗೆಯನ್ನು ನೋಡಿದರೆ ಈ ಮಾತು ಸ್ಪಷ್ಟವಾಗುತ್ತದೆ.

'ಸಕಲಪವಗೆ ಶ್ರೀ ಹರಿಯೇ।
ತಂದೆ ತಾಯಿ ಸ್ವಹಿತಾತ್ಮನು ನೀನೆ।
ಬಂಧು ಬಳಗ ಸರ್ವಾತ್ಮನು ನೀನೆ।
ದೈವ ಗುರು ಕುಲಗೋತ್ರನು ನೀನೆ।
ಕಾವ ಕರುಣ ಸೂತ್ರಾಂತನು ನೀನೆ।

(ಮ. ಕೀ. ೫೨೬)

ಶ್ರೀ ಹರಿಯೇ ಎಲ್ಲದ್ದಕ್ಕೂ ಕಾರಣನು. ಎಲ್ಲವೂ ಶ್ರೀ ಹರಿಯ ಸ್ವರೂಪವೇ ಆಗಿದೆ. ಆ ಶ್ರೀ ಹರಿಯನ್ನು ಸೇವಿಸಿ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕು. ಶ್ರೀ ಹರಿಯ ಸೇವೆಯು ಮುಕ್ತಿಗಿಂತಲೂ ಮೀಗಿಲಾದುದು ಎಂಬುದೇ ಮಹಿಪತಿರಾಯರ ಸಂದೇಶವಾಗಿದೆ.

'ಸೇವೆ ಸುಖವೋ ಶ್ರೀ ಹರಿ ಸೇವೆ ಸುಖವೋ।
ಸೇವೆಗಿಂದಧಿಕ ಸುಖ ಸಾಯೋಜ್ಯ ಮುಕುತಿ ಪದದೊಳಗಿಲ್ಲ।
--- --- ---
ದಾಸನಾಗಿ ವಾಸುದೇವನ ಪಾದ ಕಮಲಾರಾಧಿಸುವೆ। (ಮ ಕೀ ೬೨೧)

ಇಂಥ ಶ್ರೀ ಹರಿಯನ್ನು ನಂಬಿದವರಿಗೆ ಜಗದೊಳಗೆ ಸರಿಯಾರು? ಎಂದು ಕೇಳುತ್ತ ತಾವು ಹರಿದಾಸರು ಎಂದು ಅಭಿಮಾನಪೂರ್ವಕವಾಗಿ ಹೇಳಿಕೊಳ್ಳುತ್ತಾರೆ. ಹೀಗೆ ಹರಿದಾಸರ ದಾಸರಾಗಿ ಶ್ರೀ ಹರಿಯನ್ನೇ ಹೊಂದಿ ಬದುಕಿ ಇಹ-ಪರ ಸುಖವನ್ನು ಪಡೆಯುವುದೇ ಜೀವನದ ಉದ್ದೇಶವೆಂದು ಹೇಳುತ್ತಾರೆ.

'ಹೊಂದಿ ಬದುಕಿರೋ ಮನವೆ ಇಂದಿರೇಶನ।

ಹರಿಚರಣ ಕಮಲವ ಕಂಡು।
ಹರಿನಿಜ ಧ್ಯಾನ ನೆಲೆಗೊಂಡು।
ಹರಿಕರುಣವ ಪಡಕೊಂಡು।
ಹರಿನಾಮಾಮೃತ ಸವಿದುಂಡು।
--- --- --- ---
ಶ್ರೀ ಹರಿಸೇವೆ ಮಾಡಿಕೊಂಡು।
ಇಹ ಪರ ಸುಖ ಸೂರೆಗೊಂಡು।
ಬಾಹ್ಯಾಂತ್ರ ಪೂರ್ಣಮನಗಂಡು।
ಮಹಿಪತಿಸ್ವಾಮಿ ವಾಲ್ಗೈಸಿಕೊಂಡು। (ಮ. ಕೀ ೬೫೨)

ಮಧ್ವ ಸಿದ್ಧಾಂತದ ಇನ್ನೊಂದು ಪ್ರಮೇಯವು ಜೀವರಾಶಿಯೆಲ್ಲ ಶ್ರೀ ಹರಿಗೆ ಅಧೀನವಾಗಿದೆ ಎಂಬುದು ಅದನ್ನು ರಾಯರು ತಮ್ಮ ಹಲವಾರು ಕೀರ್ತನೆಗಳಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ.

'ಆನೆ ಮೊದಲಿರುವೆ ಕಡೆ ತಾಂ ನಡೆಸುತಿರಲಿಕ್ಕೆ।
ಜನಕೊಡ್ಡಿ ಕೈಯ ನಾ ದಣಿಯಲೇಕೆ।
ಅನುದಿನ ಹರಿವಾಕ್ಯ ಅನುಭವಿಸುತಿರಲಿಕ್ಕೆ।
ಅನುಮಾನವಿಡಿದು ನಾ ಹೆಣಗಲ್ಯಾಕೆ।
ಸಂಸಾರ ಚಿಂತೆ ನಮ್ಮ ಸ್ವಾಮಿ ಶ್ರೀ ಹರಿಗುಂಟು।
ಕಂಸಾರಿ ಕೃಷ್ಣ ಕರುಣಿಸುವ ಇದರಿಟ್ಟು' (ಮ ಕೀ ೬೨೩)

ಅದರಂತೆ 'ಬಲು ದೊಡ್ಡ ದೊರೆ ದೊರಕಿದೆನಗೊಬ್ಬ ನೋಡಿ' ಎಂಬ (ಮ. ಕೀ.೪೦೪) ಕೀರ್ತನೆಯಲ್ಲಿ ಹರಿ ಸರ್ವೋತ್ತಮತ್ವ, ಹರಿಯ ಅಧೀನತೆ, ತಾರತಮ್ಯ ಮೊದಲಾದ ಮಧ್ವ ಸಿದ್ಧಾಂತದ ಪ್ರಮೇಯಗಳನ್ನು ನೋಡಬಹುದು. ಇದೇ

ದೃಷ್ಟಿಯಿಂದ 'ಇಂದು ಶ್ರೀ ಗುರುಪಾದಪದ್ಮ' (ಕೀ -೮೩), 'ಈತ ಶ್ರೀನಾಥ ದಾತ ತ್ರೈಲೋಕ್ಯಕೀತ' (ಕೀ-೯೦) ಇವುಗಳಲ್ಲಿಯ 'ಶೇಷಶಯನ,' 'ಪಿತಾಮಹನ ಪಿತ' ಮೊದಲಾದ ಪದಗಳು ಹಾಗೂ 'ಕರುಣಾಕರನೀತ ಕರಿಭಯಹರಿದಾತ - ಹರಿ ಪರಂದೈವ ಗುರುನಾಥ' (ಕೀ-೧೪೧) 'ನಮ್ಮ ಕುಲದೈವನೀತ ಬೊಮ್ಮನ ಪಡೆದಾತ' (ಕೀ-೩೩೩) 'ಮಂಗಳಾರತಿ ಮಾಡಿ ಮಂಗಳ ಮಹಿಮಾನಂಗ ಜನಕ ಹರಿ ತುಂಗ ವಿಕ್ರಮಂಗೆ ಮಂಗಳಾರತಿಯ' (ಕೀ-೪೭೮) 'ಲೇಸು ಲೇಸಾಯಿತು ಭಾಸ್ಕರ ಗುರು ಕೃಪೆ ಲೇಸು ಲೇಸಾಯಿತು' (ಕೀ- ೪೮೬) ಮೊದಲಾದ ಕೀರ್ತನೆಗಳಲ್ಲಿಯ ದ್ವೈತಪರ ಪದಗಳನ್ನು ಗಮನಿಸಬೇಕು.

'ಲೇಸು ಲೇಸಾಯಿತು ಭಾಸ್ಕರ ಗುರುಕೃಪೆ' ಎಂಬ ಕೀರ್ತನೆ ವಾಸ್ತವದಲ್ಲಿ ಅವಧೂತ ಪರಂಪರೆಯ ಭಾಸ್ಕರ ಗುರುಗಳನ್ನು ಸ್ತುತಿಸುವ ಕೀರ್ತನೆ. ಆದರೆ ಕೊನೆಯ ಸಾಲುಗಳು ಹೇಳುವ 'ಕೂಡಿತು ಸಮರಸವಾಗಿ ಮಹಿಪತಿ ಜೀವ ಒಡಿಯನ ಚರಣದಂಗುಷ್ಠದಲಿ' ಎಂಬುದು ಮಧ್ವ ಸಂಪ್ರದಾಯವನ್ನೇ ಹೇಳುತ್ತಿರುವುದು ಗಮನಾರ್ಹವಾಗಿದೆ.

ಹರಿತತ್ವ ಹೇಳುವ 'ಎನ್ನಪರಾಧವೇನು ನಿನ್ನ ಸೂತ್ರಾಡಿಸಿದ್ಹಾಂಗ ಆಡುವೆ ಹರಿ' (ಕೀ ೧೦೨) 'ಕಾಯೋ ಕಾಯೋ ಕಾಯೋ ದಯಾನಿಧಿ ಕರುಣಕೃಪಾಳ (ಕೀ-೧೬೫) ಎಂಬ ಕೀರ್ತನೆಗಳೂ ಉಲ್ಲೇಖಾರ್ಹವಾಗಿವೆ.

ಬಿಂಬರೂಪೀ ಪರಮಾತ್ಮನ ಸಾಕ್ಷಾತ್ಕಾರ ದ್ವೈತಭಾವ ಮೊದಲಾದವುಗಳನ್ನು ಗುರುತಿಸುವ ಕೆಲವು ಕೀರ್ತನೆಗಳನ್ನು ನೋಡಬಹುದು.

'ಇಕ್ಕೊ ಘನ ಪರಬ್ರಹ್ಮದ ಬೆಳಗಿದು
ಶುಕಾದಿ ಮುನಿಗಳು ಸೇವಿಸುವದು' (ಕೀ. ೨೮)

'ಧನ್ಯ ಗೈಸಿತು ಮೂಢ ಮಹಿಪತಿ
ಪ್ರಾಣಜೀವ ಕೈವಲ್ಯನಿಧಿ ಗುರುನಾಥ (ಕೀ. ೩೯).

'ದೀನ ಮಹಿಪತಿಗೆ ಸನಾಥ ಮಾಡುವ
ಸ್ವಾನುಭವ ಬ್ರಹ್ಮ ಭೋಗ' (ಕೀ-೪೦)

'ಬುಧ ಜನರನುದಿನ ಸೇವಿಸುತಿಹ್ಯ
ಸದಮಲವಾದ ಸದಾ ಸುವಿಸುಖ' (ಕೀ-೬೬)

'ಧನ್ಯಗೈಸಿತು ಮಹಿಪತಿ ಪ್ರಾಣಜೀವನ' (ಕೀ-೬೭)

'ಮುಂಬಿಗಾಗ್ಯಾವೈನ್ನೊಳು ಸು ಉಲ್ಲಾಸ
ಅಂಬುಜಾಕ್ಷನ ಕಂಡೆ ಸು ಪ್ರಕಾಶ
ತುಂಬಿ ತುಳುಕುತಲ್ಯದ ಬಲು ಹರುಷ
ಇಂಬು ಸಾಲದು ಬ್ರಹ್ಮಾಂಡ ಆಕಾಶ
ದೀನ ಮಹಿಪತಿ ಸ್ವಾಮಿ ಕೃಪಾಸಿಂಧು
ಮನೋಹರ ಮಾಡಿದ ತಾನೆ ಬಂದು' (ಕೀ-೬೯)

'ದೀನ ಮಹಿಪತಿಗಾನಂದ ಸುಕಾಲ
ಭಾನುಕೋಟಿ ತೇಜ ದಾಸಾನುಕೂಲ' (ಕೀ-೭೬)

'ಭಾಸುತಾನೆ ಸರ್ವೇಶ ಭಾಸ್ಕರ ಕೋಟಿ ಪ್ರಕಾಶ (ಕೀ-೮೦)

'ಭಾನುಕೋಟಿ ತೇಜ ಪ್ರಕಾಶ ನೋಡುವ
ದೀನ ಮಹಿಪತಿ ಸ್ವಾಮ್ಯೆಂದು ಕೊಂಡಾಡುವ' (ಕೀ-೮೩)

'ಕಣ್ಣಾರೆ ಕಂಡೆ ಸದ್ಗುರು ಚರಣ
ಧನ್ಯಧನ್ಯವಾಯಿತು ಮಹಿಪತಿ ಜೀವನ' (ಕೀ-೧೧೬)

'ಘವ ಘವಿಸುವ ಅವಿನಾಶನ ಪ್ರಭೆಯಿದು
ಮಹಿಪತಿ ವಸ್ತು ಮಯವೊ' (ಕೀ-೧೧೯)

'ಕಣ್ಣಾರೆ ಕಂಡೆ ಭಾನುಕೋಟಿ ಪ್ರಕಾಶ
ನಿಮ್ಮ ಧನ್ಯ ಧನ್ಯವಾದ ಮಹಿಪತಿಯು' (ಕೀ-೧೯೭)

'ದಾಸ ಮಹಿಪತಿಯೊಳದೆ ವಾಸವಾಗ್ಯದೆ' (ಕೀ-೩೭೫)

'ಬೆಳಗೇ ಬೆಳಗಾಯಿತು ಘನ ಗುರುದಯ
ಮನದೊಳು ನಿಜ ಒಡಮೂಡಿ' (ಕೀ-೪೨೪)

'ಲೋಕಪಾಲಕ ಸ್ವಾಮಿ ತಾ ಸಹಕಾರಿ' (ಕೀ-೧೯)

ಹೀಗೆ ಇನ್ನೂ ಅನೇಕ ಕೀರ್ತನೆಗಳನ್ನು ಉದಾಹರಿಸಬಹುದು. ಮೇಲ್ನೋಟಕ್ಕೆ ಅದ್ವೈತ ಪರವಾದ, ಅವಧೂತ ಪಂಥದ ಪರಮಾತ್ಮನೊಡನೆ ಐಕ್ಯದ ಅರ್ಥವನ್ನೀಯುವ ಅವರ ಕೀರ್ತನೆಗಳನ್ನು ಕೂಡ ಸೂಕ್ಷ್ಮವಾಗಿ ನೋಡಿದರೆ ದ್ವೈತಪರ ಭಾವನೆಯೇ ಕಂಡು ಬರುತ್ತದೆ.

'ಸೂರ್ಯನಿಲ್ಲದ ಸುಪ್ರಕಾಶ ತುಂಬೇದ ಹೇಳಬೇನ
ಚಂದ್ರನಿಲ್ಲದೆ ಬೆಳದಿಂಗಳು ಬಿದ್ದದ ಬಹಳ' (ಕೀ-೧೧)

ಎನ್ನುವ ಪದ್ಯದಲ್ಲಿ ಪ್ರಕಾಶದ ಅನುಭವವನ್ನು ನಿರೂಪಿಸುತ್ತ ಕೊನೆಯ ಸಾಲಿನಲ್ಲಿ 'ದೀನ ಮಹಿಪತಿಗೆ ತಾನೆ ತಾನಾದ ಸದ್ಗುರುವೀಗ' ಎಂದು ಹೇಳುತ್ತಾರೆ. ಇಲ್ಲಿ ವಾಸ್ತವವಾಗಿ ' ದೀನ ಮಹಿಪತಿ ತಾನೆ ತಾನಾದ' ಎಂದು ಹೇಳದೆ 'ದೀನ ಮಹಿಪತಿಗೆ ತಾನೆ ತಾನಾದ' ಎಂಬ ಚತುರ್ಥಿ ವಿಭಕ್ತಿಯನ್ನು ಉಪಯೋಗಿಸಿದ್ದನ್ನು ಗಮನಿಸಬೇಕು. ಸಂಬಂಧವಾಚಕವಾದ ಚತುರ್ಥಿ ವಿಭಕ್ತಿಯ ಪ್ರಯೋಗವು ತಮ್ಮ ಅನುಭವದೊಡನೆ ಐಕ್ಯವನ್ನು ಹೇಳದೆ ಪರಮಾತ್ಮನು ತಮಗೆ 'ತಾನೆ ತಾನಾದ ಸದ್ಗುರುವಾದ' ಎಂದು ಮಾತ್ರ ಹೇಳಿರುವುದು ಪರಮಾತ್ಮನ ನಾದ ಸ್ವರೂಪವನ್ನು ನಿರೂಪಿಸುವಾಗ ತಾವು ಮಾತ್ರ ಭಿನ್ನವಾಗಿಯೇ ಉಳಿಯುತ್ತಾರೆ.

ಮಧ್ವ ತತ್ವಗಳಲ್ಲಿ ಅಚಲವಾದ ನಂಬುಗೆಯನ್ನಿಟ್ಟ ರಾಯರು ತಮ್ಮ ಹರಿಭಕ್ತಿಗೆ ತಕ್ಕಂತೆ, ತಮ್ಮ ಆಚಾರ್ಯರಾದ ಶ್ರೀ ಮಧ್ವರನ್ನು ಕೊಂಡಾಡಿರುವುದನ್ನು ಇಲ್ಲಿ ಗಮನಿಸಬೇಕಾದುದು ಅಗತ್ಯವಾಗಿದೆ.

'ಗುರು ಮಧ್ವ ಮುನಿರನ್ನ ಮೂರು ಪರಿಯ ತೋರಿದೆ ನಿನ್ನ।
ಹರಿಭಕ್ತಿಯಲಿ ಅವಿಚ್ಛಿನ್ನ ಸರಿಯಾರು ಧರೆಯೊಳು ನಿನ್ನ।
ಸ್ಮರಣೆಯಲಿಹೆ ರಾಮನ ಪರಮ ಪಾವನ್ನ।।

ಅತಿ ಪರಾಕ್ರಮ ಕ್ಷಿತಿಯೊಳು ನಿನ್ನದೆ ನೇಮ।
ಪ್ರಥಮದಲ್ಯಾದೆ ಹನುಮ ದ್ವಿತೀಯದಲ್ಯಾದೆ ಭೀಮ।
ತೃತೀಯದಲಿ ಪೂರ್ಣಪ್ರಜ್ಞನೆನಿಸಿದೆ ನಿಸ್ಸೀಮ।।

ಸಾತ್ವಿಕ್ಕೆ ಕಾರಣ ಮಹಾದ್ವೈತ್ಯರ ಮರ್ದನ।
ಶ್ರೀ ಹರಿ ಸಾನ್ನಿಧ್ಯ ಪೂರ್ಣ ಇಹ ಸಕಲ ನಿಪುಣ।
ಮಹಿಪತಿ ಹುಲ್ಲು ಪ್ರಾಣ ಸ್ಥಾಪಿತ ಸಾಧನ।। (ಕೀ-೨೧೬)

ಹೀಗೆ ಶ್ರೀ ಹರಿಯ ಸಾನ್ನಿಧ್ಯ ವಿಶೇಷವಿರುವ ಆಚಾರ್ಯ ಮಧ್ವರನ್ನು ಸ್ತುತಿಸಿದ್ದಾರೆ. ಅವಿಚ್ಛಿನ್ನವಾದ ಹರಿಭಕ್ತಿ ಯಲ್ಲಿ ಅವರಿಗೆ ಸರಿಯಾದವರು ಯಾರೂ ಇಲ್ಲವೆಂದೂ ಹೇಳಿದ್ದಾರೆ. ಮತ್ತು ಗುರು ಮಧ್ವರು ವಾಯುದೇವರ ಅವತಾರ ಎಂಬುದನ್ನು ನೆನೆದಿದ್ದಾರೆ. ಆಚಾರ್ಯ ಗುರುಮಧ್ವರನ್ನು ಸ್ಮರಿಸುವದರೊಂದಿಗೆ ತಮ್ಮ ಇನ್ನೊಂದು ಕೀರ್ತನೆಯಲ್ಲಿ ಗುರು ಪರಂಪರೆಯನ್ನು ಸ್ತುತಿಸಿದ್ದಾರೆ. 'ನೆನೆದು ನಮಿಸುವೆನು ವಾರಂ ವಾರ' (ಕೀ-೩೭೧) ಎಂಬ ಕೀರ್ತನೆಯನ್ನು ಗಮನಿಸಿದರೆ ವಂಶಪರಂಪರೆಯಾಗಿ ಈ ಮನೆತನದವರ ಆಚಾರ -ವಿಚಾರಗಳ ಸಂಪ್ರದಾಯವು ಮಧ್ವಮತಾನುಯಾಯಿಗಳೆಂಬುದು ಸ್ಪಷ್ಟವಾಗುತ್ತದೆ.

ಮೊದಲೇ ಹೇಳಿದಂತೆ ಅವರ ಮಾರ್ಗ ಕೇವಲ ಭಕ್ತಿಯದಾಗಿರಲಿಲ್ಲ. ಲೌಕಿಕ

ಜೀವನದಿಂದ ಅವರನ್ನು ಆಧ್ಯಾತ್ಮದ ಕಡೆಗೆ ಸೆಳೆದ ಶಕ್ತಿ ಯೋಗ ಪ್ರಧಾನವಾದದ್ದು. ಅವರ ಚಿತ್ತ ಆತ್ಮಾನು ಸಂಧಾನದ ಮೂಲಕ ಆ ಪರಮಾತ್ಮನನ್ನು, ಪರವಸ್ತುವನ್ನು ಪರಬ್ರಹ್ಮನನ್ನು ಕಂಡು, ಆ ಚಿತ್ಸುಖವನ್ನು ಅರಿಯುವತ್ತ ಹೊರಳಿತು. ಈ ಕಾರಣಗಳಿಂದ "ಅವರು ಶ್ರೀ ಮನ್ಮಧ್ವಾಚಾರ್ಯರು ಪ್ರತಿಪಾದಿಸಿದ ಹರಿಸರ್ವೋತ್ತಮತ್ವವನ್ನು ನಂಬಿ, ಆ ಮೂಲಕ ತಮ್ಮ ಆಧ್ಯಾತ್ಮಿಕ ಬಲವನ್ನು ಮೊದ-ಮೊದಲು ಬೆಳೆಸಿಕೊಂಡರು ಎನ್ನಲು ಅಡ್ಡಿಯಿಲ್ಲ' ಎಂಬ ಡಾ. ಜಿ. ವರದರಾಜರಾವ್ ಅವರ ಅಭಿಪ್ರಾಯ ಸರಿಯಲ್ಲ //೬// ಯಾಕೆಂದರೆ ಬೆಳೆಸಿಕೊಳ್ಳಲು ಮೊದಮೊದಲು ಅಥವಾ ಕೊನೆಕೊನೆಗೆ ಎಂಬ ಕಾಲಾವಕಾಶವೇ ಅವರ ಜೀವನದಲ್ಲಿ ಬರಲಿಲ್ಲ. ಅಭೂತಪೂರ್ವವಾದ ಅನುಭವವು ಒಂದು ರಾತ್ರಿ ಕಳೆಯುವುದರ ಒಳಗಾಗಿ ಅವರಿಗೆ ಬಂದು ಬಿಟ್ಟಿತ್ತು. ಅದನ್ನು ಅವರ ಪಾಲಿಗೆ ಒದಗಿಸಿಕೊಟ್ಟ ಸಕಲ ಶ್ರೇಯಸ್ಸು ಸಾರವಾಡದ ಮಹಾಯೋಗಿಗಳಾದ ಶ್ರೀ ಭಾಸ್ಕರ ಸ್ವಾಮಿಗಳಿಗೆ ಸೇರಿದ್ದೆಂದು ರಾಯರೇ ಹೇಳುತ್ತಾರೆ. ಆ ವಿಶಿಷ್ಟ ಯೋಗಾನುಭವಗಳನ್ನು ಹೇಳುವಾಗಲೂ ಕೂಡ ತಾವು ನಂಬಿದ, ಮಧ್ವಮತದ ಸೂಕ್ಷ್ಮ ತತ್ವಗಳನ್ನು ಅನುಭವಗಳನ್ನು ಮರೆಯದೆ ವ್ಯಕ್ತಪಡಿಸಿರುವುದು ಗಮನಾರ್ಹವಾಗಿದೆ. ಅದರ ಪ್ರತ್ಯೇಕ ಅಭ್ಯಾಸದ ಅಗತ್ಯವಿದೆಯೆಂದು ಹೇಳಬಹುದು.

ಆದ್ದರಿಂದ ಅವರ ಆಧ್ಯಾತ್ಮಿಕ ಬಲದ ಬೆಳವಣಿಗೆಗೂ ವಂಶಪಾರಂಪರ್ಯವಾಗಿ ಬಂದ ಸಂಪ್ರದಾಯಕ್ಕೂ ತಳಕು ಹಾಕುವುದು ಉಚಿತವೆನಿಸುವುದಿಲ್ಲ. ಶ್ರದ್ಧೆ ಬೇರೆ, ಸಿದ್ಧಿ ಬೇರೆ, ಶ್ರದ್ಧೆ ರಕ್ತಗತವಾಗಿ ಬಂದದ್ದು ಸಿದ್ಧಿ ಸ್ವ ಸಾಧನದಿಂದ ಬಂದದ್ದು. ಅದಕ್ಕಾಗಿ ಮಧ್ವಮತ ಸಂಪ್ರದಾಯದ ತಮ್ಮ ಶ್ರದ್ಧೆಯನ್ನು ಬದಲಿಸಿಕೊಳ್ಳುವ ಪ್ರಮೇಯವೂ ರಾಯರಿಗೆ ಬರಲಿಲ್ಲ. ಕೊನೆಯವರೆಗೂ ಅವರು ಮಾಧ್ವರಾಗಿಯೇ ಉಳಿದರು. ಆ ಮತದಲ್ಲಿಯ ತತ್ವಗಳಿಗೆ ಬದ್ಧರಾಗಿದ್ದರು. ಅದರಂತೆ ಅವರು ತಮ್ಮ ರಾಜಯೋಗ ಮಾರ್ಗದಲ್ಲಿ ಸಾಧಿಸಿದ ಸಿದ್ಧಿಯೂ ಅನನ್ಯವಾಗಿದೆ. ಅವರ ಮಾತಿನಲ್ಲಿಯೇ ಹೇಳುವದಾದರೆ "ಆಡೇನಂದರ ಆ ಮಾತು ನಾಡಿಗೇನು ತಿಳಿದೀತು। ಪಡೆದವಗೆ ದೋರಿತು ಬಿಡದ್ಹಾಂಗಾತು" (೩೬-೧೩೩) ಅದರ ಕಿಂಚಿತ್ ದರ್ಶನದ ಪ್ರಯತ್ನವನ್ನು ಈಗ ಮಾಡಬಹುದು.

### ೬.೩ ಸಾಧನೆ

ಆಧ್ಯಾತ್ಮಿಕ ಅನುಭವಗಳು ಅಂತರಂಗದ ಜಗತ್ತಿಗೆ ಸೇರಿದವುಗಳು. ಸಾಧಕನ ಸಿದ್ಧಪುರುಷನ ಅಂತರಂಗದ ಅನುಭವಗಳನ್ನು ಅರ್ಥ ಮಾಡಿಕೊಳ್ಳುವದು, ಅವುಗಳನ್ನು ವಿಶ್ಲೇಷಿಸಿ ವಿಮರ್ಶಿಸುವುದು ಅತ್ಯಂತ ಕಠಿಣದ ಕೆಲಸ. ಅನುಭಾವಿಗಳ ಅಂತರಂಗದ ಜೀವನ ಅದರಲ್ಲಿಯೂ ಅವರು ಪಡೆದ ಅನುಭವಗಳನ್ನು ಕುರಿತು ಬರೆಯುವುದು ಸಾಹಸದ ಮಾತಾಗುತ್ತದೆ. ತಮ್ಮ ಜೀವನ ಚರಿತ್ರೆಯನ್ನು

ಬರೆಯುವುದಕ್ಕೆ ಒಪ್ಪಿಗೆ ಕೇಳಿದ ಸಾಧಕರೊಬ್ಬರಿಗೆ ಮಹಾಯೋಗಿ ಶ್ರೀ ಅರವಿಂದರು 'ನನ್ನ ಜೀವನ ಚರಿತ್ರೆಯನ್ನು ಬರೆಯುವುದು ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಅದು ಮಾನವೀಯ ಪ್ರಜ್ಞೆಯ ಆಚೆಗೆ ನಡೆದದ್ದು' ಎಂದು ಉತ್ತರ ಕೊಟ್ಟರು. //೭// ಅನುಭಾವಿಯು ಏರಿದ ಎತ್ತರವನ್ನು ನಿರ್ದಿಷ್ಟವಾಗಿ ಹೇಳುವದು ಅಸಾಧ್ಯ. ಅವನ ನಡೆ ನುಡಿಗಳಿಂದ, ಸಮಾಜ ವ್ಯಕ್ತಿಗಳ ಜೊತೆಗೆ ಅವನು ಇಟ್ಟುಕೊಂಡ, ಸಂಬಂಧಗಳ ಮೇಲಿಂದ, ಅಲ್ಲಲ್ಲಿ ವ್ಯಕ್ತಪಡಿಸಿದ ಶಬ್ದಗಳ ಮೂಲಕ ಅವರ ಸಿದ್ಧಿಯ ಸ್ವರೂಪವನ್ನು ಊಹಿಸಿಕೊಳ್ಳಬಹುದು.

ಮಹಿಪತಿರಾಯರ ಆಧ್ಯಾತ್ಮಿಕ ಸಾಧನೆ, ಅವರು ಅನುಸರಿಸಿದ ಅನುಭಾವ ಮಾರ್ಗ ಹಾಗೂ ಪಡೆದ ಸಿದ್ಧಿಗಳ ಕುರಿತು ಬರೆಯುವುದಕ್ಕೆ ಅವರ ಜೀವನದಲ್ಲಿ ನಡೆದವೆನ್ನಬಹುದಾದ ಘಟನೆಗಳು ಹಾಗೂ ಅವರು ರಚಿಸಿದ ಕೀರ್ತನೆಗಳೇ ಆಧಾರವಾಗಿವೆ. ಅವುಗಳನ್ನು ಕೀರ್ತನೆಗಳು ಎನ್ನುವುದಕ್ಕಿಂತ ಕೃತಿಗಳು ಅಥವಾ ಪದಗಳು ಎಂದು ಕರೆಯುವುದೇ ಹೆಚ್ಚು ಸೂಕ್ತವೆನ್ನಿಸುತ್ತದೆ. ಈ ಕೃತಿಗಳ ಆಧಾರದಿಂದ ಅವರ ಆಧ್ಯಾತ್ಮ ಜೀವನ ಸಾಧನೆ ಹಾಗೂ ಸಿದ್ಧಿಗಳ ಕುರಿತು ಇಲ್ಲಿ ಹೇಳಲು ಪ್ರಯತ್ನಿಸುತ್ತಿರುವುದು ಒಂದು ಪ್ರಯೋಗವೇ ಹೊರತು, ಈ ಕುರಿತು 'ಇದಮಿತ್ಥಂ' ಎಂದು ಅಲ್ಲ. ಅದಕ್ಕೆ ಮೊದಲು ಸಾಧಕನ ಜೀವನದ ಹಿನ್ನೆಲೆಯನ್ನು ಅರಿತುಕೊಳ್ಳುವದು ಅವಶ್ಯವಾಗಿದೆ.

ಮನುಷ್ಯನು ಆಧ್ಯಾತ್ಮ ಜೀವನವನ್ನು ಯಾಕೆ ಬಯಸುತ್ತಾನೆ? ಈ ಮಾರ್ಗದತ್ತ ಹೊರಳಲು ಕಾರಣವಾದರೂ ಏನು? ಎಂಬ ಪ್ರಶ್ನೆಗಳು ಉದ್ಭವಿಸುವುದು ಸಹಜವಾಗಿದೆ. ಪ್ರತಿಯೊಬ್ಬನು ತನ್ನ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳುವಲ್ಲಿ ಎಂದಿನಿಂದಲೂ ಪ್ರಗತಿಯನ್ನು ಸಾಧಿಸುತ್ತ ಬಂದಿದ್ದಾನೆ. ಈ ಕುರಿತು ವೈಜ್ಞಾನಿಕ ಸಂಶೋಧನೆಗಳೂ ಅವನ ನೆರವಿಗೆ ಬಂದಿವೆ. ಈಗಲೂ ಕೂಡ ಹೊಸ ಹೊಸ ಸಂಶೋಧನೆಗಳತ್ತ ಅವನು ಮುಂದುವರೆದಿದ್ದಾನೆ. ಆದರೂ ಮನುಷ್ಯ ಸುಖವಾಗಿದ್ದಾನೆಯೇ? ಎಂಬ ಪ್ರಶ್ನೆಗೆ ಉತ್ತರ ದೊರೆಯುವುದಿಲ್ಲ. ಅನಾದಿ ಕಾಲದಿಂದಲೂ ಅವನು ಎದುರಿಸುತ್ತಿರುವ ಮೂಲಭೂತ ಸಮಸ್ಯೆಗಳು ಇನ್ನೂ ಪರಿಹಾರ ಕಾಣದೆಯೇ ಉಳಿದಿವೆ. ಹಾಗಾದರೆ ಪರಿಹಾರ ಕಾಣದ ಮೂಲಭೂತ ಸಮಸ್ಯೆಗಳು ಯಾವವು? ತನಗೆ ತಿಳಿದೋ ಅಥವಾ ತಿಳಿಯದೆಯೊ ಮನುಷ್ಯ ಹುಡುಕುತ್ತಿರುವುದು ದು:ಖರಹಿತವಾದ ಆನಂದ, ಮರಣ ರಹಿತವಾದ ಜೀವನ. ಇವುಗಳನ್ನು ಪಡೆಯಲು ಮಾನವನು ನಿರಂತರವಾಗಿ ಹೋರಾಟವನ್ನು ನಡೆಸಿಯೇ ಇದ್ದಾನೆ. ಇವುಗಳನ್ನು ಪಡೆಯಲು ಅಸಂಖ್ಯ ತೊಂದರೆಗಳನ್ನೂ ಎದುರಿಸಿದ್ದಾನೆ. ಅನೇಕ ಆಘಾತಗಳನ್ನು ಸಹಿಸಿದ್ದಾನೆ. ಇಷ್ಟಾಗಿಯೂ ಅವುಗಳನ್ನು ಪಡೆಯಲು ವಿಫಲನಾಗಿದ್ದಾನೆ. ಆದರೆ ಅವುಗಳನ್ನು ಪಡೆದೇ ತೀರುವ ಅಭೀಪ್ಸೆಯು ಅವನ

ಹೃದಯದಲ್ಲಿ ಬೆಳೆಯುತ್ತಲೇ ನಡೆದಿದೆ. ಈ ಅಭಿಪ್ಸೆಯ ಪರಿಪೂರ್ಣತೆಗಾಗಿ ಮಾನವನು ಹುಡುಕಿಕೊಂಡ ಮಾರ್ಗ ಆಧ್ಯಾತ್ಮ ಜೀವನವಾಗಿದೆ. ಪ್ರತಿಯೊಬ್ಬ ಪ್ರಜ್ಞಾವಂತ ಮನುಷ್ಯನು ಮಾನವನ ಮೂಲಭೂತ ಸಮಸ್ಯೆಗಳ ಪರಿಹಾರಕ್ಕೆ ಮತ್ತು ಜೀವನದ ಪರಿಪೂರ್ಣತೆಗೆ ಆಧ್ಯಾತ್ಮದ ಕಡೆಗೆ ಹೊರಳುವುದು ಸಹಜವಾಗಿದೆ.

ಸರಿ, ಪ್ರಜ್ಞಾವಂತ ಮನುಷ್ಯನು ಆಧ್ಯಾತ್ಮದ ದಾರಿಯನ್ನು ಬಯಸುತ್ತಾನೆ. ಆದರೆ ಅದು ಯಾವಾಗ ಮತ್ತು ಹೇಗೆ ಎಂಬುದು ಈ ವರೆಗೆ ರಹಸ್ಯವಾಗಿಯೇ ಉಳಿದಿದೆ. ಜೀವನದಲ್ಲಿಯ ಈ ತೆರನಾದ ಪರಿವರ್ತನೆಯ ಕಾಲ-ಕಾರಣಗಳು ಬೇರೆ-ಬೇರೆಯಾಗಿಯೇ ಇವೆ. ಆದರೂ ಈ ಮಾರ್ಗದಲ್ಲಿ ನಡೆದ ಯೋಗಿಗಳ, ಅನುಭಾವಿಗಳ, ಸಂತರ ಜೀವನ ಚರಿತ್ರೆಗಳನ್ನು ಅವಲೋಕಿಸಿದಾಗ ಅವರು ಈ ಆಧ್ಯಾತ್ಮದ ದಾರಿಯತ್ತ ಹೊರಳಲು ಸಾಮಾನ್ಯವಾದ ಕೆಲವು ಕಾರಣಗಳು ಕಂಡು ಬರುತ್ತವೆ.

೧ ಬಾಲ್ಯದಿಂದಲೂ ಬೆಳೆದುಬಂದ ಆಧ್ಯಾತ್ಮಿಕ ವಾತಾವರಣ ಹಾಗೂ ಸಂಸ್ಕಾರಗಳು ಇದಕ್ಕೆ ಉದಾಹರಣೆಯಾಗಿ, ಶಂಕರ-ಮಧ್ವರು, ಶ್ರೀಪಾದರಾಯರು, ವ್ಯಾಸತೀರ್ಥರು ಮೊದಲಾದವರ ಹೆಸರುಗಳನ್ನು ಹೇಳಬಹುದು.

೨ ಜೀವನದಲ್ಲಿ ತೀವ್ರ ನಿರಾಸೆಯನ್ನು ಅನುಭವಿಸಿ, ಜೀವನದ ವಿಫಲತೆಯನ್ನು ಅನುಭವಿಸಿ ಅನಂತರ ಆಧ್ಯಾತ್ಮದತ್ತ ಹೊರಳಿದವರು - ಇಲ್ಲಿ ಗೌತಮ ಬುದ್ಧ, ಕನಕದಾಸ ಮೊದಲಾದವರನ್ನು ಹೇಳಬಹುದು.

೩ ಅಕಸ್ಮಾತ್ತಾಗಿ ಎಂಬಂತೆ ನಡೆದ ವಿಲಕ್ಷಣ ಘಟನೆಗಳಿಂದ ಆಯಾಚಿತವಾಗಿ ಒದಗಿ ಬಂದ ಗುರುಗಳ ಅನುಗ್ರಹದಿಂದ ತಮ್ಮ ಜೀವನದ ಗತಿಯನ್ನು ಬದಲಿಸಿ ಆಧ್ಯಾತ್ಮದತ್ತ ಹೊರಳಿದವರು, ಜಯತೀರ್ಥರು (ಟೀಕಾರಾಯರು), ತುಳಸೀದಾಸರು, ಅರವಿಂದರು, ವಿವೇಕಾನಂದ ಮೊದಲಾದವರ ಹೆಸರುಗಳನ್ನು ಉಲ್ಲೇಖಿಸಬಹುದು.

ಮಹಿಪತಿರಾಯರು ಈ ಮೂರನೆಯ ಗುಂಪಿಗೆ ಸೇರಿದವರಾಗಿದ್ದಾರೆ. ಸಾರವಾಡದಲ್ಲಿ ಭಾಸ್ಕರ ಸ್ವಾಮಿಗಳನ್ನು ಭೇಟಿಯಾಗುವುದಕ್ಕಿಂತ ಮೊದಲು ನಿಜವಾದ ಅರ್ಥದಲ್ಲಿ ಅವರು ಸಾಧಕರಾಗಿರಲಿಲ್ಲ. ಭಾಸ್ಕರ ಸ್ವಾಮಿಗಳ ಭೆಟ್ಟಿ ಮತ್ತು ಅವರ ಅನುಗ್ರಹಗಳು ರಾಯರ ಜೀವನದಲ್ಲಿ ಸಂಪೂರ್ಣ ಪರಿವರ್ತನೆಯನ್ನೇ ಉಂಟು ಮಾಡಿದುವು.

ಭಾಸ್ಕರ ಸ್ವಾಮಿಗಳ ಮೊದಲು ಸೂಫಿ ಸಂತ 'ಸಂಗಾಸಾಹ'ನ ಭೆಟ್ಟಿ ಹಾಗೂ ಉಂಗುರದ ಕಥೆಗಳು ಮರಾಠಿ ಚರಿತ್ರೆಯಲ್ಲಿ ಬರುತ್ತವೆ. ಆದರೆ ಇತರತ್ರ ಈ ಕುರಿತು ಉಲ್ಲೇಖಗಳು ದೊರೆಯುವುದಿಲ್ಲ. ವಿಶೇಷತ: ಸಾರವಾಡದ ಭಾಸ್ಕರ ಸ್ವಾಮಿಗಳ

ಕುರಿತು ಮಹಿಪತಿರಾಯರು ತಮ್ಮ ಹಲವಾರು ಕೃತಿಗಳಲ್ಲಿ ಸ್ಮರಿಸಿದ್ದಾರೆ, ನಂಗಾಶಾಹನ ಕುರಿತು ಒಂದು ಕೃತಿಯಲ್ಲೂ ಉಲ್ಲೇಖಿಸದಿದ್ದುದು ಗಮನಾರ್ಹವಾಗಿದೆ. ಆದರೂ ಅವರ ಒಂದು ಕೃತಿ 'ಜಯದೇವ ಜಯದೇವ ಜಯ ಗುರು ನಾಗೇಶ' (ಕೀ- ೨೪೦) ದಲ್ಲಿಯ 'ನಾಗೇಶ'ವನ್ನು ಅರ್ಥಮಾಡಿಕೊಳ್ಳುವುದು ಕಠಿಣವಾಗುತ್ತದೆ. ಮುಂದಿನ ನುಡಿಗಳು ಹಿಂದುಗಳ ನಾಗದೇವತೆಯನ್ನೂ ಉಲ್ಲೇಖಿಸುವುದಿಲ್ಲ. ಪ್ರತಿಯಾಗಿ 'ಜನ್ಮ ಮರಣಗಳೆಂಬ ಖಿಳ್ಳಿ ಕವಡಿಗಳು' ಎಂಬ ಸಾಲುಗಳು ಸೂಫಿ ಸಂತರ ಶಬ್ದಗಳಂತೆ ಕಾಣುತ್ತವೆ. ಈ ನಾಗೇಶನೇ 'ನಂಗೇಶ' ಅಥವಾ 'ನಂಗಾಶಾಹ' ಇರಬಹುದೇ ಎಂಬ ಸಂದೇಹ ಬರುತ್ತದೆ. ಹಾಗಿದ್ದರೆ ಅದೊಂದು ಅಪೂರ್ವ ಐಕ್ಯಕ ಕೃತಿ ಎನಿಸುತ್ತದೆ. ಆದರೆ ಮುದ್ರಿತ ಪಾಠದ ವ್ಯತಿರಿಕ್ತ ಇತರ ಹಸ್ತಪ್ರತಿಗಳಲ್ಲಿ ಈ ಕೃತಿಯು ದೊರೆಯುವುದಿಲ್ಲ.

ಈ ಕಾರಣಗಳಿಂದ ಮಹಿಪತಿರಾಯರ ಪರಿವರ್ತನೆಗೆ ಮೊದಲ ಕಾರಣಕರ್ತರು ಭಾಸ್ಕರ ಸ್ವಾಮಿಗಳೆಂದೇ ಭಾವಿಸಲಾಗಿದೆ.

ಯೋಗ ಸಾಧನ ಮಾರ್ಗವು ತನ್ನದೇ ಆದ ರೀತಿ ಹಾಗೂ ನಿಯಮಗಳನ್ನು ಹೊಂದಿದೆ. ಸಾಧಕನು ಪ್ರಾಮಾಣಿಕವಾಗಿ ತನ್ನ ಸಾಧನ ಮಾರ್ಗದಲ್ಲಿ ಗೊತ್ತಿಲ್ಲದೆಯೇ ಮುಂದುವರೆದಂತೆ ಅವನಿಗೆ ಯೋಗ್ಯ ಕಾಲದಲ್ಲಿ ಯೋಗ್ಯ ಗುರುಗಳು ದೊರೆತು ಅವರಿಂದ ಮಾರ್ಗದರ್ಶನವೂ ದೊರೆಯುತ್ತದೆ. ಅದೆಲ್ಲವೂ ಪೂರ್ವನಿಯೋಜಿತವಾಗಿದ್ದರೂ, ಆ ನಿರ್ದಿಷ್ಟ ಸಮಯ ಒದಗಿ ಬರುವವರೆಗೆ ಸಾಧಕನಿಗೆ ಅದರ ಸುಳಿವು ಕೂಡ ದೊರೆಯುವುದಿಲ್ಲ. ಟೀಕಾರಾಯರಿಗೆ ಶ್ರೀ ಅಕ್ಷೋಭ್ಯತೀರ್ಥರ ಭೆಟ್ಟಿ, ಸ್ವಾಮಿ ವಿವೇಕಾನಂದರಿಗೆ ಶ್ರೀ ರಾಮಕೃಷ್ಣ ಪರಮ ಹಂಸರ ಭೆಟ್ಟಿ ಇವು ಸಾಧಕನಿಗೆ ಒದಗಿ ಬರುವ ಘಟನೆಗಳು. ಇವುಗಳಿಂದ ಈ ಮಾರ್ಗದ ವಿಚಿತ್ರ ರೀತಿಯ ಅರಿವಾಗದೇ ಇರದು. ಈ ಕುರಿತು 'ಸನತ್ನು ಜಾತೀಯ ಯೋಗ ಹಾಗೂ ಅದರ ಉದ್ದೇಶಗಳು' ಎಂಬ ಗ್ರಂಥದಲ್ಲಿ ವಿಶದವಾಗಿ ಹೇಳಿದೆ. ಸಾಧನ ಮಾರ್ಗವು ದೊರೆಯಬೇಕಾದರೆ ಸಾಧಕನಿಗೆ ನಾಲ್ಕು ಸಂಗತಿಗಳು ಅವಶ್ಯ.

೧.ಸಂಕಲ್ಪ, ೨.ಕಾಲ, ೩.ಗುರು ಹಾಗೂ ೪.ಶಾಸ್ತ್ರ ಇವುಗಳೇ ಆ ನಾಲ್ಕು ಸಂಗತಿಗಳು, ಸಾಧನ ಮಾರ್ಗದಲ್ಲಿ ಮುಂದುವರೆಯಲು - ಸಾಧಕನಿಗೆ ದೃಢ ಸಂಕಲ್ಪವು ಅವಶ್ಯವಾಗಿದೆ. ಅದಕ್ಕೆ ಯೋಗ್ಯ ಕಾಲವು ಒದಗಿ ಬರಬೇಕು. ಕಾಲವು ಪಕ್ವವಾದಾಗ ನಿಯತ ಗುರುಗಳು ದೊರೆಯುತ್ತಾರೆ ಮತ್ತು ಮುಂದಿನ ಸಾಧನಕ್ಕೆ ಶಾಸ್ತ್ರಜ್ಞಾನದ ಅವಶ್ಯಕತೆ ಇದೆ. ಅದುಕೂಡ ದೈವಾನುಗ್ರಹದಿಂದ ಲಭ್ಯವಾಗುತ್ತದೆ.

ದೇವರಿದ್ದಾನೆಯೇ ಎಂಬ ಪ್ರಶ್ನೆ ಸ್ವಾಮಿ ವಿವೇಕಾನಂದರನ್ನು ಕಾಡುತ್ತಿತ್ತು. ಅದಕ್ಕೆ ಉತ್ತರ ಹುಡುಕುವುದರಲ್ಲಿಯೇ ಅವರು ನಿರತರಾಗಿದ್ದರು. ದೇವರ ಅಸ್ತಿತ್ವದ

ಪ್ರಶ್ನೆ, ಅದನ್ನು ಹುಡುಕುವುದೇ ಅವರ ಸಂಕಲ್ಪವಾಗಿತ್ತು. ಯೋಗ್ಯ ಕಾಲವು ಬಂದಾಗ ಅವರಿಗೆ - ಶ್ರೀ ರಾಮಕೃಷ್ಣ ಪರಮ ಹಂಸರ ಭೆಟ್ಟಿಯಾಯಿತು. ರಾಮಕೃಷ್ಣ ಪರಮ ಹಂಸರ ತಪಸ್ಸಿನ ಫಲ ಸ್ವಾಮಿ ವಿವೇಕಾನಂದರ ಆಳವಾದ ಶಾಸ್ತ್ರ ವ್ಯಾಸಂಗ ಅವರನ್ನು ಸಿದ್ಧಿಯ ಕಡೆಗೆ ಕರೆದೊಯ್ಯುವು. ಮಳಖೇಡದ ಟೀಕಾರಾಯರ ವಿಷಯವೂ ಇದೇ ರೀತಿಯಾಗಿದೆ. ದೇಶಪಾಂಡೆಗಳ ಮನೆತನದಲ್ಲಿ ಹುಟ್ಟಿದ ಧೊಂಡೋಪಂತರು ಸಾಂಪ್ರದಾಯಿಕ ನಿತ್ಯಕರ್ಮಗಳನ್ನು ಮಾಡುತ್ತ ಶಾಸ್ತ್ರವ್ಯಾಸಂಗವನ್ನೂ ತಕ್ಕ ಮಟ್ಟಿಗೆ ಮಾಡಿದ್ದರು. ಅವರ ಅಂತರಂಗದಲ್ಲಿ ಭಗವಂತನ ಕಡೆಗೆ ಒಲವು ಇರಲೇಬೇಕು. ಬಹಿರಂಗದಲ್ಲಿ ಅದು ಕಾಣಿಸಿರಲಿಲ್ಲ. ಕಾಲವು ಪಕ್ವವಾದಾಗ ಶ್ರೀ ಅಕ್ಷೋಭ್ಯತೀರ್ಥರು ಭೆಟ್ಟಿಯಾದರು. 'ಕಿಂ ಪಶು: ಪೂರ್ವ ದೇಹೇ' ಎಂಬ ಗುರುಗಳ ವಾಕ್ಯವು ಧೊಂಡೋಪಂತರಿಗೆ ಪೂರ್ವಜನ್ಮದ ಸ್ಮರಣೆಯನ್ನು ತಂದುಕೊಟ್ಟತು. ಅದು ಅವರ ಜೀವನದಲ್ಲಿ ಪರಿವರ್ತನೆಯ ಕ್ಷಣವಾಗಿ ಪರಿಣಮಿಸಿತು. ಮುಂದೆ ಅವರೇ ಜಯತೀರ್ಥರಾಗಿ ಟೀಕಾರಾಯರೆಂದು ಲೋಕವಿಖ್ಯಾತರಾದರು.

ಮಹಿಪತಿರಾಯರು ಬ್ರಾಹ್ಮಣ ವೈದಿಕ ಸಂಪ್ರದಾಯದಲ್ಲಿ ಬೆಳೆದವರು. ಪರಂಪರೆಯಿಂದ ಶಾಸ್ತ್ರವ್ಯಾಸಂಗವನ್ನು ಮಾಡಿದವರಾಗಿದ್ದರು. ಧರ್ಮ ಪರಾಯಣರಾಗಿ, ಪ್ರಾಮಾಣಿಕವಾಗಿ ಜೀವನವನ್ನು ಸಾಗಿಸಿದ್ದರು. ಅಂದಿನ ರಾಜಕೀಯದಲ್ಲಿ ಸೇರಿ ಲೌಕಿಕವಾಗಿ ಸಾಕಷ್ಟು ಉನ್ನತ ಪದವಿಯನ್ನು ಪಡೆದಿದ್ದರು. ಐಹಿಕ ಸುಖಭೋಗಗಳಲ್ಲಿ ಮುಳುಗಿದವರಾಗಿದ್ದರು. ಆದರೆ ಅಂತರಂಗದಲ್ಲಿ ಆಧಾರವು ಶುದ್ಧವಾಗಿ ಸಾಧನ ಜೀವನಕ್ಕೆ ಸಿದ್ಧವಾಗಿದ್ದರು. ಯೋಗ್ಯ ಗುರುಗಳ ಅವಶ್ಯಕತೆ ಇತ್ತು. ಈ ಸಮಯದಲ್ಲಿ 'ಸಂಗಾಸಾಹ' ನ ಭೆಟ್ಟಿ ಒಂದು ನಿಮಿತ್ತವಾಗಿ ಅವರಿಗೆ ಭಾಸ್ಕರ ಸ್ವಾಮಿಗಳ ಸಂದರ್ಶನವು ಒದಗಿ ಬಂದಿತು. ಗುರು-ಶಿಷ್ಯರ ಈ ಮಿಲನವು ಮಹಿಪತಿರಾಯರ ಜೀವನದಲ್ಲಿ ಅಪೂರ್ವ ಬದಲಾವಣೆಯನ್ನು ತಂದಿತು. ಈ ಭೆಟ್ಟಿಯ ನಂತರ ರಾಯರು ತಮ್ಮ ಇಡೀ ಜೀವನವನ್ನು ಸಾಧನಕ್ಕಾಗಿಯೇ ಮೀಸಲಿಟ್ಟರು.

ಗುರುಗಳ ಮೊದಲ ದರ್ಶನದಲ್ಲಿಯೇ ರಾಯರಿಗೆ ದಿವ್ಯ ಆಧ್ಯಾತ್ಮಿಕ ಅನುಭವವಾಯಿತು. ತಮಗೆ ಬಂದ ಅನುಭವವನ್ನು ಅವರು ತಮ್ಮ ಒಂದು ಕೃತಿಯಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ.

'ಇಂದ್ಯೆನ್ನ ಜನ್ಮ ಪಾವನವಾಯಿತು
ತಂದೆ ಶ್ರೀಗುರು ನಿಮ್ಮ ಚರಣದರುಶನದಿ' (೬೯-೨೮)

ಎಂದು ಪ್ರಾರಂಭವಾಗುವ ಕೃತಿಯು ಗೂಢ ಆಧ್ಯಾತ್ಮಿಕ ಅನುಭವಗಳನ್ನು ಒಳಗೊಂಡಿದೆ. ಕೊನೆಯ ನುಡಿಯು ಅವರಿಗೆ ಗುರುದರ್ಶನವು ಒದಗಿ ಬಂದ

ಪರಿಯನ್ನು ಸ್ಪಷ್ಟವಾಗಿ ಹೇಳುತ್ತದೆ.

> 'ಭಾಸ್ಕರಸ್ವಾಮಿಯು ಕರುಣಾಳು ಮೂರ್ತಿಯು।
> ಮೂಢಮಹಿಪತಿಯ ಕೃಪಾಂಬುಧಿಯು।
> ಕರುಣದಿ ಅಭಯ ಹಸ್ತವನು ಶಿರಸದಲ್ಲಿಡಲಾಗಿ।
> ಧನ್ಯನಾದೇನು ಸತಿಪತಿ ಸಹವಾಗಿನ್ನು।।

ಗುರುಚರಣಗಳಲ್ಲಿ ನಮಸ್ಕರಿಸಿದಾಗ ಭಾಸ್ಕರ ಸ್ವಾಮಿಗಳು ತಮ್ಮ ವರದ ಹಸ್ತವನ್ನು ಮಹಿಪತಿರಾಯರ ತಲೆಯಮೇಲಿಟ್ಟರು. ಆ ಕ್ಷಣವೇ ಮಹಿಪತಿರಾಯರಿಗೆ ದಿವ್ಯ ಅನುಭವವಾಯಿತು. ''ಅರ್ಕ ಮಂಡಲಗಳು, ರವಿ-ಶಶಿ ಕಿರಣಗಳು, ಝುಳ-ಝುಳಿಸುವ ಪ್ರಭೆಯನ್ನು ಅವರು ನೋಡಿದರು. ಓಂಕಾರ ಮೊದಲಾದ ದ್ವಾದಶನಾಮದ ವೇದ ಘೋಷಗಳನ್ನು ಕೇಳಿದರು. ಚಿನ್ಮಯ ಚಿದ್ರೂಪವನ್ನು ಕಂಡು ಬೆರಗಾದರು. ಏಕೋ ದೇವ ಈತ ವಿಶ್ವಾತ್ಮ ಹಂಸನೆಂದು ಕಂಡುಕೊಂಡರು. ಅವರ ಆತ್ಮದಲ್ಲಿ ಭಕ್ತಿ-ಮುಕ್ತಿಯು ಉದಾರಿಯಾಗಿ ಸಾರಿ ದೋರಿತು. ಉತ್ಪತ್ತಿ ಸ್ಥಿತಿ ಲಯದ ಬೀಜವು ಹುರಿದು, ಧರೆಯೊಳಗೆ ಗರ್ಭಪಾಶದ ಬಲಿಯು ಹರಿಯಿತು. ಇಪ್ಪತ್ತೊಂದು ಸಾವಿರ ಆರು ನೂರದ ಜಪದ ರೀತಿಯು ತಿಳಿಯಿತು. ಸುಷುಮ್ನದಲ್ಲಿ ಪ್ರಾಣೇಶ ಮೂರ್ತಿಯ ಅರಿವು ಮೂಡಿತು. ಅಂಧತ್ವ ಕಳೆದು ಪ್ರಕಾಶ ಮೂಡಿತು'' ಈ ಅಭುಭವವೇ ವಿಲಕ್ಷಣವಾದದ್ದು ಅದು ಭಾಸ್ಕರ ಸ್ವಾಮಿಗಳ ವರದ ಹಸ್ತ ಸ್ಪರ್ಶದ ಪರಿಣಾಮವು. ಮಹಿಪತಿರಾಯರ ಹೃದಯದ ಸಂಕಲ್ಪವು ಶಾಸ್ತ್ರವ್ಯಾಸಂಗದಿಂದ ಅಂತರಂಗದ ಶುದ್ಧಿಯಾಗಿ ಸಕಾಲವು ಒದಗಿ ಬಂದಾಗ ಗುರು ಭಾಸ್ಕರರ ದರ್ಶನವಾಗಿ ಅವರ ಜೀವನವು ಧನ್ಯವಾಯಿತು. ಆದರೆ ಇದೆಲ್ಲ ಗುರು ದರ್ಶನ ಸ್ಪರ್ಶ ಮಾತ್ರದಿಂದ ಸಾಧ್ಯವೆ? ವರದ ಹಸ್ತವನ್ನು ಶಿರಸದಲ್ಲಿಟ್ಟಾಕ್ಷಣ ಈ ಅನುಭವದ ಸಾಧ್ಯತೆ ಇದೆಯೇ ಎಂಬ ಸಮಸ್ಯೆಗೆ ಈ ಶತಮಾನದ ರಾಮಕೃಷ್ಣ ಪರಮಹಂಸರ ಹಾಗೂ ವಿವೇಕಾನಂದರ ಕಥೆಯೇ ಸಾಕ್ಷಿಯಾಗಿದೆ. ವಿವೇಕಾನಂದರಿಗೆ ಪರಮಹಂಸರು ದೇವರನ್ನು ತೋರಿಸಿದ ಕಥೆ ಲೋಕವಿಖ್ಯಾತವಾಗಿದೆ.

ಸಾಧನ ಮಾರ್ಗದಲ್ಲಿ ಪ್ರವೇಶಿಸಿದ ಸಾಧಕನು, ಸಾಧನೆಮಾಡಿ ಮೂರು ವಿಧಗಳಲ್ಲಿ ಸಿದ್ಧಿಯನ್ನು ಪಡೆಯಬೇಕಾಗುತ್ತದೆ. ಪರಮಾತ್ಮನ ಸಾಕ್ಷಾತ್ಕಾರದಲ್ಲಿ ಮೊದಲನೆಯದು ಆತ್ಮ ಸಾಕ್ಷಾತ್ಕಾರ. ತನ್ನಲ್ಲಿಯೇ ಅಡಗಿದ ಪರಮಾತ್ಮನ ಬಿಂಬರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವದು - ಅದು ವೈಯಕ್ತಿಕ ಆತ್ಮ ಸಾಕ್ಷಾತ್ಕಾರವೆನಿಸುತ್ತದೆ. ಅನಂತರ ಎರಡನೆಯ ಹಂತ ವಿಶ್ವಸಾಕ್ಷಾತ್ಕಾರ. ಅಂದರೆ ಪರಮಾತ್ಮನ ರೂಪವನ್ನು ಇಡೀ ವಿಶ್ವದ ಪ್ರತಿಯೊಂದು ವಸ್ತುವಿನಲ್ಲಿಯೂ ಅನುಭವಿಸುವುದು. ಮೂರನೆಯ ಹಂತ ವಿಶ್ವಾತೀತ ಸಾಕ್ಷಾತ್ಕಾರ. ತನ್ನಲ್ಲಿ, ವಿಶ್ವದಲ್ಲಿ ಕಂಡ ಪರಮಾತ್ಮನು ವಿಶ್ವಾತೀತನಾಗಿರುವುದನ್ನು ಅನುಭವಿಸುವುದೇ ಆಗಿದೆ. ಇವುಗಳ

ಸಿದ್ಧಿಗಾಗಿ ಸಾಧಕನು ಮೊದಲು ತನ್ನಲ್ಲಿಯ ಲೋಪದೋಷಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಆಗ ಆತನು ಮನಸ್ಸು ದೇಹಗಳಲ್ಲಿ ಪವಿತ್ರನಾಗುವನು. ಭಕ್ತಿಯಿಂದ ಪರಮಾತ್ಮನನ್ನು ಆರಾಧಿಸುವನು. ತನ್ನ ಹೃದಯದಲ್ಲಿ ಪರಮಾತ್ಮನ ದರ್ಶನವನ್ನು ಪಡೆಯುವನು. ಒಮ್ಮೆ ಹೀಗೆ ಆತ್ಮ ಸಾಕ್ಷಾತ್ಕಾರವಾದ ಮೇಲೆ ಸಾಧಕನು ನಿಮ್ನ ಪ್ರಕೃತಿಯಿಂದ ಮುಕ್ತನಾಗುವನು. ಅವನ ಅಹಂಕಾರವು ಪೂರ್ಣವಾಗಿ ಇಲ್ಲದಾಗಿ ಜೀವನವೆಲ್ಲವೂ ಪರಮಾತ್ಮನ ಸಂಕಲ್ಪವೆಂಬುದು ಅವನ ಅನುಭವಕ್ಕೆ ಬರುತ್ತದೆ. ಕರ್ಮ ಬಂಧನದಿಂದ ಮುಕ್ತನಾಗುವನು ಮತ್ತು ಈ ಜೀವನ ಲೀಲೆಯನ್ನು ಅವನು ಕೇವಲ ಸಾಕ್ಷಿಯಾಗಿ ಅವಲೋಕಿಸತೊಡಗುವನು. ಅವನು ಜೀವನವೆಲ್ಲವೂ ಭಗವಂತನಿಗೆ ಅರ್ಪಿತವಾಗಿ ಕೇವಲ ದೈವೀ ಸಂಕಲ್ಪದಂತೆಯೇ ಅವನು ಜೀವಿಸುವನು ಮತ್ತು ಭಗವಂತನ ಸಂಕಲ್ಪದ ಪೂರ್ಣತೆಗಾಗಿಯೇ ಅವನು ಜೀವಿಸುವನು. ಅವನ ನಿತ್ಯದರ್ಶನಕ್ಕಾಗಿ ಹಂಬಲಿಸುವನು.

ಹೀಗೆ ಭಗವಂತನ ಸಾಕ್ಷಾತ್ಕಾರವಾದ ಮೇಲೆ ಆ ಭಗವಂತನು ಇಡೀ ವಿಶ್ವವನ್ನೇ ತುಂಬಿರುವ ಅನುಭವವು ಸಾಧಕನಿಗೆ ಆಗುತ್ತದೆ. ಸೃಷ್ಟಿಯೆಲ್ಲವೂ ಭಗವಂತನ ಅಭಿವ್ಯಕ್ತಿ, ಎಲ್ಲವೂ ಭಾಗವತ ಚೇತನ, ಸರ್ವವೂ ಮಂಗಲಮಯ. ಪವಿತ್ರ ಪರಮಾತ್ಮನನ್ನು ಉಳಿದು ಬೇರೆ ಏನೂ ಇಲ್ಲ. ಈ ವಿರಾಟ್ ವಿಶ್ವವೆಲ್ಲವೂ ಭಗವಂತನ ಸಂಕಲ್ಪ ಮತ್ತು ಎಲ್ಲದರಲ್ಲಿಯೂ ಅಂದರೆ ಒಳಗೆ, ಹೊರಗೆ, ಮೇಲೆ, ಕೆಳಗೆ, ಹಿಂದೆ, ಮುಂದೆ, ಎಡಕ್ಕೆ, ಬಲಕ್ಕೆ ಹೀಗೆ ಎಲ್ಲ ಕಡೆಗೆ ಕೇವಲ ಭಗವಂತನ ಅಸ್ತಿತ್ವವೇ ತುಂಬಿದೆ ಎಂಬ ಅನುಭವವನ್ನು ಪಡೆಯುವನು.

ಇಡೀ ವಿಶ್ವವನ್ನು ತುಂಬಿದ ಹಾಗೂ ಎಲ್ಲವೂ ತಾನೇ ಆಗಿರುವ ಭಗವಂತನು ಈ ವಿಶ್ವವನ್ನು ಮೀರಿ ಅದರ ಆಚೆಗೂ ಇರುವನು. ತನ್ನ ಲೀಲೆಗಾಗಿ ತಾನೇ ಸೃಷ್ಟಿಸಿದ ಈ ವಿಶ್ವದ ಯಾವ ಬಂಧನಗಳಿಗೂ ಅವನು ಒಳಗಾಗಿಲ್ಲ. ಅವನು ವಿಶ್ವಾತೀತನೂ, ಸ್ವತಂತ್ರನೂ .ಸ್ವಯಂ ಪೂರ್ಣನೂ, ಸಕಲ ಗುಣ ಪರಿಪೂರ್ಣನೂ ಆಗಿರುವನು. ಸಾಧಕನು ಈ ವಿಶ್ವಾತೀತ ಪರಮಾತ್ಮನ ಸಾಕ್ಷಾತ್ಕಾರದ ಅನುಭವವನ್ನು ಪಡೆಯುವನು.

ಮಹಿಪತಿರಾಯರು ತಮ್ಮ ಸಾಧನದಿಂದ ಈ ಮೂರು ಅವಸ್ಥೆಗಳ ಸಿದ್ಧಿಯನ್ನು ಪಡೆದವರಾಗಿದ್ದರು. ಸಿದ್ಧಿಯನ್ನು ಪಡೆಯುತ್ತಿದ್ದಂತೆ ಕ್ರಮವಾಗಿ ಅವುಗಳನ್ನು ತಮ್ಮ ಕೃತಿಗಳಲ್ಲಿ ಸ್ಪಷ್ಟವಾಗಿ ನಿರೂಪಿಸಿದರು. ಅವರ ಯೋಗಾನುಭವವಂತೂ ಆಶ್ಚರ್ಯಕರವಾದ ರೀತಿಯಲ್ಲಿ ಅಭಿವ್ಯಕ್ತವಾಗಿದೆ. ಅತ್ಯಂತ ಗೂಢ ಹಾಗೂ ರಹಸ್ಯವೆಂದು ತಿಳಿಯಲಾದ ಅನುಭವಗಳನ್ನು ಕೂಡ ಅವರು ಸುಲಭವಾದ ಹಾಗೂ ಎಲ್ಲರಿಗೂ ತಿಳಿಯುವ ರೀತಿಯಲ್ಲಿ ಹೇಳಿದ್ದಾರೆ. ಅವರ ಅನುಭವಗಳನ್ನು ಅವರ

ಶಬ್ದಗಳಲ್ಲಿಯೇ ತಿಳಿದುಕೊಳ್ಳುವುದೂ ಒಂದು ಆನಂದದ ಅನುಭವ.

ಮಹಿಪತಿರಾಯರು ತಮ್ಮ ಸಾಧನಕ್ಕೆ ಬಳಸಿದ್ದು ರಾಜಯೋಗ, ರಾಜಯೋಗದ ಪ್ರಮುಖ ಉಪಕರಣವೆಂದರೆ ಮನಸ್ಸು, ಸಾಮಾನ್ಯ ಮನಸ್ಸನ್ನು ನಿಯಂತ್ರಿಸಿ, ಶುದ್ಧಗೊಳಿಸಿ ಅದನ್ನು ದೈವೀ ಪ್ರಜ್ಞೆಯತ್ತ ಹರಿಬಿಡಬೇಕು. ಆಸನ -ಪ್ರಾಣಾಯಾಮಗಳ ಸಹಾಯದಿಂದ ದೈಹಿಕ ಶಕ್ತಿ ಪ್ರಾಣಶಕ್ತಿಗಳನ್ನು ಸ್ತಬ್ಧಗೊಳಿಸಿ ಏಕಾಗ್ರಗೊಳಿಸಬೇಕು. ದೈಹಿಕ ಹಾಗೂ ಪ್ರಾಣಶಕ್ತಿಗಳನ್ನು ಶುದ್ಧಗೊಳಿಸುವುದರಿಂದ ಉನ್ನತ ದೈವೀ ಪ್ರಜ್ಞೆ ಮತ್ತು ಶಕ್ತಿಗಳನ್ನು ಧರಿಸಲು ಅವು ಶಕ್ತವಾಗುವವು. ಈ ದೈಹಿಕ ಹಾಗೂ ಪ್ರಾಣ ಶಕ್ತಿಗಳ ಮೇಲೆ ಅವಲಂಬಿಸಿದ ಮನಸ್ಸು, ಅವುಗಳ ಸಹಾಯದಿಂದ ತಾನೂ ಶುಷ್ಕವಾಗಿ ಏಕಾಗ್ರತೆಯನ್ನು ಸಾಧಿಸುವುದು. ನಿಮ್ನಸ್ತರದ ವಿಚಾರಗಳು ಹಾಗೂ ಭಾವನೆಗಳಿಂದ ಮುಕ್ತವಾದ ಮನಸ್ಸು ಊರ್ಧ್ವಗಾಮಿಯಾಗಿ ಸಾಗುತ್ತ ದೈವೀ ಪ್ರಜ್ಞೆಯನ್ನು ಮುಟ್ಟುತ್ತದೆ. ಈ ದೈವೀ ಪ್ರಜ್ಞೆಯನ್ನು ಮುಟ್ಟಿದ ಮನಸ್ಸು ಸಮಾಧಿ ಸ್ಥಿತಿಯನ್ನು ಹೊಂದುತ್ತದೆ. ಸಮಾಧಿ ಸ್ಥಿತಿಯನ್ನು ಹೊಂದಿದ ಮನಸ್ಸು ಆತ್ಮದ ಮುಕ್ತಿಗೆ ಸಹಾಯಕವಾಗಿ ಆತ್ಮನಲ್ಲಿ ಪರಮಾತ್ಮನ ಮೂರ್ತಿಯನ್ನು ಕಾಣಲು ಸಾಧ್ಯವಾಗುತ್ತದೆ.

ಸಾಧನದ ಪ್ರಾರಂಭದಲ್ಲಿ ಅದರಲ್ಲಿಯೂ ಧ್ಯಾನಮಾರ್ಗದಲ್ಲಿ ಮನಸ್ಸಿನ ವಿಚಾರಗಳು ಏಕಾಗ್ರತೆಗೆ ಭಂಗವನ್ನುಂಟು ಮಾಡುತ್ತವೆ. ಮನಸ್ಸು ಸ್ವಭಾವತ: ಚಂಚಲವಷ್ಟೆ. ಆ ಚಂಚಲ ಮನಸ್ಸಿನ ಹೊಯ್ದಾಟ ನಿಂತು ಅದು ಸ್ತಬ್ಧವಾಗದೆ ಮುಂದಿನ ದಾರಿಯು ಸುಗಮವಾಗುವುದಿಲ್ಲ. ಭಾಸ್ಕರ ಸ್ವಾಮಿಗಳ ಕೃಪೆಯಿಂದ ತಮ್ಮ ಮನಸ್ಸು ಹೇಗೆ ಶಾಂತವಾಯಿತು ಎಂಬುದನ್ನು ಮಹಿಪತಿರಾಯರು ತಮ್ಮ ಅನೇಕ ಕೃತಿಗಳಲ್ಲಿ ಹೇಳಿದ್ದಾರೆ.

'ಲೇಸಾಯಿತು ಲೇಸಾಯಿತು ಭಾಸ್ಕರ ಗುರುಕೃಪೆ ಲೇಸಾಯಿತು।
ಹಸ್ತವಿಡಲು ಎನ್ನಮಸ್ತಕದ ಮೇಲೆ ಸ್ವಸ್ತತೋಂದಿತು ಮನ ನಿಶ್ಚಯದಲಿ।।'

(ಮ.ಕೀ-೪೮೬)

'ಲೇಸಾಯಿತು ಸದ್ಗುರುಕೃಪೆ ಲೇಸು ಲೇಸಾಯಿತು।
ನೀಡಿದಭಯ ಹಸ್ತ ಮಾಡಿತು ಮನಸ್ವಸ್ಥ।
ಗೂಢವಾಗಿತ್ಯ ವಸ್ತುಗೂಡಿತು ಸಾಧ್ಯಸ್ತ। (ಕೀ-೪೮೭)

ಗುರುಕೃಪೆಯಿಂದ ಅವರ ಮನಸ್ಸು ಶಾಂತವಾಗಿ ಅಂತರ್ಮುಖವಾಯಿತು. ಅಂತರಂಗದಲ್ಲಿಯ ಪರಮಾತ್ಮನತ್ತ ಹೊರಳಿತು. ಸಾವಧಾನ ಚಿತ್ತದಿಂದ ಅಂತಸ್ಥ ಪರಮಾತ್ಮನೆಡೆಗೆ ಅವರ ಭಕ್ತಿಯು ಹರಿಯಿತು. ಆಗ ಪರಮಾತ್ಮನ ದರ್ಶನದ ಹಂಬಲ ಅಧಿಕವಾಗತೊಡಗಿತು. ಹಂಬಲ ಹೆಚ್ಚಾದಂತೆ ಪರಮಾತ್ಮನ ದರ್ಶನದ

ಚಿಹ್ನೆಗಳೂ ಕಾಣಹತ್ತಿದುವು.

'ಇಂದು ಹೊಳೆವುತದೆ ಸುಚಿನ್ಹಬೋಧ।
ತಂದೆ ಕಂಡೆವೆನೊ ಸದ್ಗುರು ಶ್ರೀಪಾದ।
ಪ್ರಾಣದೊಡೆಯ ಬಾಪ್ಪಾಂಗನೇನೋ।
ಘೂರ್ಣ ಕ್ಷಣಕ್ಕೊಮ್ಮಾಗುತಿದೆ ಸುಶಕುನ।
ಕಣ್ಣುಬ್ಬಾರುತಿದೆ ಬಲದೆನ್ನ।
ಚೆನ್ನಾಗ್ಯಾಗಮ್ಯ ತಾನೇನೋ ಸುಪ್ರಸನ್ನ।
ತೋಳಭುಜ ಹಾರುತಿದೆ ಬಹಳ।

ಹೀಗೆ ಬಲಗಣ್ಣು -ಬಲಭುಜಗಳು ಹಾರುತ್ತ ಶುಭಶಕುನಗಳು ತೋರುತ್ತಿದ್ದಂತೆ,

'ಬುದ್ಧಿ ಮನಸಿಗಾಗುತಿದೆ ವಿಕಾಸ।
ಸಧ್ಯ ಹೃದಯವಾಗುತದೆ ಉಲ್ಲಾಸ।
ಸಾಧ್ಯವಾಗುವ್ಹಾಂಗ್ಹಾನೇನೋ ತಾ ಸರ್ವೇಶ।
ಖೂನ ದೋರಿ ಬರುತದೆನಗೊಂದು।
ಭಾನುಕೋಟಿ ತೇಜ ತಾ ಬಾಪ್ಪಾಂಗಿಂದು।
ದೀನ ಮಹಿಪತಿಗುರು ಕೃಪಾಸಿಂಧು। (೩-೮೭)

ಹೀಗೆ ಭಗವಂತ ಇನ್ನೇನು ಬಂದೇಬಿಟ್ಟ, ಬಂದು ದರ್ಶನ ಕೊಡುತ್ತಾನೆಂಬ ಶುಭ ಶಕುನಗಳಾದುವು. ಆದರೆ ಇದು ದರ್ಶನವಲ್ಲವಲ್ಲ! ಮತ್ತೆ ಸಾಧನೆ ಮುಂದುವರೆಯಿತು. ಅದರ ಪರಿಣಾಮವಾಗಿ ಅವರಿಗೆ ಮತ್ತೆ ಅನೇಕ ಅನುಭವಗಳಾದವು. ರಾಜಯೋಗ ಮಾರ್ಗದಲ್ಲಿಯ ಒಂದೊಂದೇ ಬಾಗಿಲುಗಳು ತೆರೆಯುತ್ತ ಹೋದವು. ಈಗ ಮನಸ್ಸು ಅಂತರ್ಮುಖವಾಯಿತಷ್ಟೆ. ಅನಂತರ ಮೂಲಾಧಾರದಲ್ಲಿ ನಿದ್ರಿಸುತ್ತಿರುವ ಕುಂಡಲಿನಿಯು ಜಾಗ್ರತವಾಗಿ ಬೆನ್ನಹುರಿಯ ಇಡಾ-ಪಿಂಗಳ ನಾಡಿಗಳ ಮಾರ್ಗದಿಂದ ಮೇಲಕ್ಕೇರಿ ಸುಷುಮ್ನಾ ನಾಡಿಯ ತುದಿಯ ಮೇಲೆ ಏರುತ್ತದೆ. ಅಲ್ಲಿಂದ ಕಂಠದಲ್ಲಿಯ ವಿಶುದ್ಧ ಚಕ್ರದ ಮುಖಾಂತರ ಮುಂದೆ ಸಾಗಿ ತಲೆಯಲ್ಲಿಯ ಬ್ರಹ್ಮ ರಂಧ್ರದವರೆಗೆ ಸಾಗುವುದು. ಅಲ್ಲಿ ಸಹಸ್ರದಳ ಕಮಲದಲ್ಲಿ ಲೀನವಾಗುವುದು. ಈ ರೀತಿ ಕುಂಡಲಿನಿ ಜಾಗ್ರತವಾಗಿ ಮೇಲಕ್ಕೆ ಹೋಗುವಾಗ ಸಾಧಕನಿಗೆ ವಿವಿಧ ಅನುಭವಗಳು ಬರುತ್ತವೆ. ಹೃದಯ ಚಕ್ರದಲ್ಲಿ ಕುಂಡಲಿನೀ ಶಕ್ತಿಯು ಸಂಚಾರ ಮಾಡುವಾಗ ಅನಾಹತ ನಾದಗಳು ಕೇಳಿಸುತ್ತವೆ. ಭ್ರೂಮಧ್ಯದಲ್ಲಿ ಏಕಾಗ್ರತೆಯನ್ನು ಸಾಧಿಸಿದಾಗ ಹೊಳೆ-ಹೊಳೆವ ಪ್ರಕಾಶಗಳು ಕಾಣಿಸುತ್ತವೆ. ಆಗ ಸಹಸ್ರಾರದಲ್ಲಿ ಕೋಟಿಸೂರ್ಯರ ಬೆಳಕು ತೋರಿ ಪರಮಾತ್ಮನ ದರ್ಶನವಾಗುತ್ತದೆ. ಅಂಥ ಪರಮಾತ್ಮನ ದರ್ಶನವನ್ನು ಪಡೆದ ಮಹಿಪತಿರಾಯರು ತಮ್ಮ ಅನುಭವಗಳನ್ನು ಪದರು-ಪದರಾಗಿ ಬಿಡಿಸಿ ಇಡುತ್ತಾರೆ.

'ಒತ್ತಿ ಆಧಾರ ಬಲದೆತ್ತಿ ಕುಂಡಲಿನಿಯು।
ಕಿತ್ತಿ ಸರ್ಪಿತ್ತಿ ಮುಖಮಾಡಿ ಊರ್ಧ್ವ।
ಗತಿಯ ಮತ್ತೆ ಷಟಚಕ್ರಗಳ।
ಗತಿಗಳನು ದೋರಿದಾತ ಸಾಕ್ಷಾತ ಗುರುವು।।' (೩-೨೧೯)

ಈ ರೀತಿ ಜಾಗ್ರತವಾದ ಕುಂಡಲಿನಿಯು ಮುಂದೆ ಸಾಗುತ್ತದೆ.

'ಇಡಾ ಪಿಂಗಳಮಧ್ಯ ನೋಡಿ ಈಗ।
ನಾಡಿ ಸುಷುಮ್ನವಿಡಿದು ಕೂಡಿ ಬ್ಯಾಗ।
ನೋಡ ಬಲ್ಲಿದ ಬ್ರಹ್ಮಾನಂದ ಭೋಗ।
ಗೂಢ ವಿದ್ಯವಿದು ತಾ ರಾಜಯೋಗ।।' (ಕೀ-೩೭೭)

ಈಗ ಮತ್ತೆ ಕುಂಡಲಿನಿಯು ಇನ್ನೂ ಮುಂದೆ ಸಾಗುತ್ತದೆ.

'ಆಧಾರವಂ ಬಲಿದು ಸ್ವಾಧೀಷ್ಠಾನವದಾಟಿ।
ಹಾದಿವಿಡಿದು ನೋಡು ಮಣಿಪೂರದ।
ಒದಗಿ ಕುದುವ ಅನಾಹತ ಹೃದಯಸ್ಥಾನವ।
ಸಾಧಿಸಿ ನೋಡುವದು ವಿಶುದ್ಧವ।
ಭೇದಿಸಿ ನೋಡುವದಾಜ್ಞಾಚಕ್ರ ದ್ವಿದಳ।
ಸಾಧಿಸುವದು ಸುಖಿ ಸಾಧು ಜನ।
ಅಧರದಲಿಹ್ಯ ತಾ ಅಧಿಷ್ಠಾನವ ನೋಡು।
ಅಧಿಪತಿ ಬ್ರಹ್ಮಾಂಡ ಸಹಸ್ರದಳ ಕಮಲ।
ಹೊಳೆಯುತಿಹ ಭಾಸ್ಕರ ಪ್ರಭೆಯು ಕೂಡಿ।
ಮೂಲಸ್ಥಾನದ ನಿಜ ನೆಲೆ ನಿಭವ ನೋಡು।
ಬಾಲಕನೊಡೆಯ ಮಹಿಪತಿ ಸ್ವಾಮಿಯು।' (ಕೀ-೩೮೫)

ಹೀಗೆ ಮೂಲಾಧಾರದಿಂದ ಸಹಸ್ರಾರದವರೆಗೆ, ಷಡಚಕ್ರಗಳನ್ನು ಭೇದಿಸಿ ಸಹಸ್ರದಳದಲ್ಲಿ ಮಹಿಪತಿರಾಯರ ಪ್ರಜ್ಞೆಯು ಸ್ಥಿರವಾಗಿ ನಿಂತಿತು. 'ಬಾಲಕನೊಡೆಯ ಮಹಿಪತಿ'ಯ ದರ್ಶನವಾಯಿತು. ಆಗ ಅವರಿಗೆ ಧನ್ಯತೆಯ ಭಾವ ಉಂಟಾಯಿತು. ಮತ್ತು ಈ ರೀತಿ ಸಿದ್ಧಿಯನ್ನು ಪಡೆಯದ ಜನ್ಮ ವ್ಯರ್ಥವೆನಿಸಿತು.

'ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ।
ಕರ್ತುಸದ್ಗುರು ಪಾದ ಅರ್ತು ಬೆರೆಯದವನ ಜನ್ಮ।
ಇಡಾಪಿಂಗಳೆರಡು ಥಡಿಯ ಮಧ್ಯ ಸುಷುಮ್ನದಲಿ।
ಗುಪ್ತವಾಹಿನಿಯ ಸುಸ್ನಾನ ಮಾಡದವನ।
ಪಿಂಡ ಬ್ರಹ್ಮಾಂಡ ಭ್ರೂಮಧ್ಯ ತ್ರಿವೇಣಿ ಕ್ಷೇತ್ರ।
ಪುಣ್ಯಸಂಗಮದ ತೀರ್ಥಯಾತ್ರೆ ಮಾಡದವನ ಜನ್ಮ।
ಆರು ಸೋಪಾನವೇರಿ ಮೂರು ಗೋಪುರವ ದಾಟಿ।
ಮೇಲಗಿರಿಯಲಿಹ್ಯ ಮಹಿಪತಿಯ ಮೂರ್ತಿನೋಡದ ಜನ್ಮ।।'

(ಮ. ಕೀ. ೪೯೨)

'ಮೇಲಗಿರಿಯಲಿಹ್ಯ ಮಹಿಪತಿಯ' ಮೂರ್ತಿಯನ್ನು ನೋಡದವನ ಜನ್ಮ ವ್ಯರ್ಥವೆಂದು ಹೇಳುತ್ತ, ಮೇಲಗಿರಿಯನ್ನು ಹತ್ತುವ ದಾರಿಯನ್ನು ಅವರೇ ಹೇಳಿದ್ದಾರೆ. ಆ ದಾರಿಯಲ್ಲಿ ನಡೆದು ಅವರು ಮಹಿಪತಿಯನ್ನು ನೋಡಿದ್ದಾರೆ. ಹಾಗೆ ಮೇಲಗಿರಿಯ ಮಹಿಪತಿಯ ಮೂರ್ತಿಯನ್ನು ಕಾಣುವ ಸಾಧನೆಯಲ್ಲಿ ನಿರತರಾದಾಗ

ಅವರಿಗೆ ಇನ್ನೂ ಹಲವಾರು ದಿವ್ಯ ಅನುಭವಗಳಾಗಿವೆ. ವಿವಿಧ ನಾದಗಳನ್ನು ಕೇಳಿದ್ದಾರೆ. ಹೊಳೆ-ಹೊಳೆವ ಬೆಳಕನ್ನು ಕಂಡಿದ್ದಾರೆ.

ಯೋಗಾನು-ಭವದಲ್ಲಿ ನಾದ, ಕಳೆ ಮತ್ತು ಬಿಂದು ಎಂಬ ಮೂರು ಶಬ್ದಗಳು ಪರಿಚಿತವಾದವುಗಳು ಸಾಧಕನಿಗೆ ವಿವಿಧ ನಾದಗಳು ಕೇಳಿಸುತ್ತವೆ. ಪ್ರಕಾಶಮಯವಾದ ಬಿಂದುವಿನ ದರ್ಶನವಾಗುತ್ತದೆ. ಅದು ಕೋಟಿ ಸೂರ್ಯರ ಪ್ರಕಾಶದಷ್ಟಿರುತ್ತದೆ. ಆಗ ಸಾಧಕನು ಆನಂದ ಸಾಗರದಲ್ಲಿ ಮುಳುಗಿ ಏಳುತ್ತಾನೆ. ಅವನ ಇಂದ್ರಿಯಗಳು ಶಾಂತವಾಗುತ್ತವೆ. 'ಘನಸುಖ'ದ ನಿರಂತರ ಅನುಭವವು ಒದಗಿ ಬರುತ್ತದೆ. ಕರ್ಮಬಂಧನವು ಕಳಚಿ ಜನ್ಮವು ಸಾರ್ಥಕವಾಗುತ್ತದೆ. ಅದರ ಪರಿಯನ್ನು ರಾಯರ ಬಾಯಿಯಿಂದಲೇ ಕೇಳಬೇಕು.

'ಓಂಕಾರ ಮೊದಲಾದ ಶ್ರುತಿ ವೇದ ಘೋಷಗಳು।
ಧಿಮಿಧಿಮಿಸುವ ಮಹಾಶಬ್ದಗಳು ವಾದ್ಯಗಳು।
ಘೇಳೆನಿಸುವ ಶ್ರುತಿನಾದಗಳು ಭೇದಗಳು ಕೇಳುವದು ನಿತ್ಯದಲಿ।।
ಗರ್ಜಿಸುವ ಭೃಂಗಿ ಶಂಖನಾದ ಧ್ವನಿಗಳು।
ಘೋರಿಡುವ ಭೇರಿ ಮೃದಂಗ ವೇಣೆಯುಗಳು।
ಚಿಣ-ಚಿಣ ತಂತ್ರ ಮೊದಲಾದ ಸಂಕಾರಗಳು ಕೇಳಿ ಪಾವನನಾದೆನು।। (೩೯-೭೫)
'ಓಂಕಾರ ಮೊದಲಾದ ದ್ವಾದಶನಾದದಾ।
ಧಂದದ ಘೋಷವ ಕೇಳಿ ಬಧಿರತ್ವಕಳೆದಿನ್ನು।' (೩೯-೪೮)
'ಕೇಳ ಬರುತದೆ ಹೇಳಗುಡುತದೆ।
ತಾಳ ಮೃದಂಗವು ಘೋರಿಡುತದೆ'

ಹೀಗೆ ವಿವಿಧ ನಾದಗಳು

'ಒಂದೊಂದು ಪರಿ ಕೇಳಿಸುವ ಹ।
ನ್ನೊಂದರ ಮೇಲಿನ್ನೊಂದರ ಘೋಷ।
ಧೀಂ ಧೀಂ ಧೀಂ ಧೀಂ ಧೀಂ ಧೀಂ।
ಧೀಂ ಧೀಂ ಮಿಡಗುತಿಹ್ಯ ಆನಂದಸುಖ।। (೩೯-೬೬)

ಈ ಧಿಮಿಗುಡುವ ಆನಂದಸುಖವು,

'ಜುಮ್ಮು ಜುಮ್ಮುಗುಡುತಿದೆ ರೋಮಾಂಚಗಳು।
ಧಿಮಿ ಧಿಮಿಗುಡತದೆ ನಾದಧ್ವನಿಗಳು।' (೩೯-೧೯)

'ಘಮ ಘಮಗುಡುತ ನಾದಸುಹಾತವು।
ಧಿಮಿಗುಡುತದೆ ಬಲುಹಾಸವೋ।।
ಜುಮ್ಮ ಜುಮುಗುಡುತದೆ ಝೇಂಕಾರವು।
ಸುಮ್ಮನೆ ಓಂಕಾರವೋ।।
ಝುಮ್ಮನೆ ಒಮ್ಮೆ ತಿಗ್ಗೇಳೆನಿಸುತಿರೆ।
ಬ್ರಹ್ಮಾನಂದದ ಘೋಷವೊ।।

ಉಮ್ಮೆಸ ಬಲು ತುಂಬ್ಯೇದೆಮ್ಮೊಳು ಬರುತದೆ।
ಒಮ್ಮನದಲಿ ನಿಮ್ಮದೆಷ್ಟೋ।।' (೬೬-೧೬)

ಹೀಗೆ ಅನುಭವಿಸಿದ ಸುಖದ ಕುರಿತು ಮತ್ತೆ-ಮತ್ತೆ ಹೇಳುತ್ತಾರೆ.

'ಕೇಳದಾ ಕೇಳಿದೆವು ಥೇಳಸುವದೆನ್ನೊಳಗೆ।
ಹೇಳೇನೆಂದರೆ ಬಾರದು ಸುಳುವು ಇನ್ನೊಬ್ಬರಿಗೆ।
ತಾಳಮೃದಂಗ ಭೇರಿ ಭೋರಿಡುತ ಒಳ ಹೊರಗೆ।
ತಿಳಿದೇನೆಂದರದೇ ನೋಡಿ ಉಲುವುತಾ ತನ್ನೊಳಗೆ।।' (೬೬-೮೬)

ಅದನ್ನು ಹೇಳಬೇಕೆಂದರೂ ಹೇಳಲು ಬಾರದಂಥ ಸುಖ, ಕೇಳದ್ದನ್ನು ಕೇಳಿದರಂತೆ. ಇಂಥದ್ದನ್ನು ಕೇಳಬೇಕಾದರೆ,

'ಧಿಮಿ ಧಿಮಿಗುಡುತಿಹುದು ಬಲು ತಾಳ ಭೇರಿ ಮೃದಂಗ।
ಬ್ರಹ್ಮಾನಂದದ ಸುಖದೋರುವದು ಮೇದಿನಿಯೊಳು ಸತ್ಸಂಗ।
ಒಮ್ಮನವಾದರೆ ಸಾಧಿಸಬಹುದು ಸುಮ್ಮನೆ ಪ್ರಾಣಲಿಂಗ।
ಘುಮ ಘುಮಗುಡುತಿಹುದು ಘನಮಹಿಮೆಯು ಕೇಳುವದಂತರಂಗ।।'' (೬೬-೩೪೨)

ಹೀಗೆ ಒಮ್ಮನವಾದರೆ ಸುಮ್ಮನೆ ಪ್ರಾಣಲಿಂಗನನ್ನು ಸಾಧಿಸಬಹುದು. ಆಗ

'ಝೇಂ ಝೇಂ, ಝೇಂ ಝೇಂಕರಿಸುತದ।
ಕಂಜನಾಭನ ಕರುಣಾನಂದ ನೋಡಿರ್‍ಯೋ।
ಥೇಳನಿಸುತದ ತಾಳ ಮೃದಂಗವು।
ಒಳಹೊರಗಿದು ಧಿಮಿಗುಡುತದ।
ಅನಾಹತ ಧ್ವನಿ ಅನುಭವ ನೋಡಿರೋ।
ಅನುದಿನ ಸಾಧಿಸಿ ಘನ ಪರಿದಾಡಿರೋ।। (೬೬-೧೯೩)

ಹೀಗೆ ಅನುದಿನವೂ ಇದನ್ನು ಸಾಧಿಸಬಹುದು. ಆದರೆ ಇಷ್ಟಕ್ಕೆಯೇ ಮುಗಿಯಲಿಲ್ಲ.

'ನಿದ್ರಸ್ಯಕರ್ಣದ ಸಾದ್ರಶ್ಯ ನೋಡೆಂದು ಹೊ।
ದ್ವಾದಶನಾದವು ಸಾಧಿಸಿ ಕೇಳುದು ಹೊ।
ಗಾದೆಯ ಮಾತಲ್ಲ ಭೇದಿಸಿ ತಿಳಿಯುದು ಹೊ।
ಓದುವ ಓಂಕಾರನಾದವು ತಿಳಿವದು ಹೊ। (೬೬-೨೦೪)

ಹೀಗೆ ಅನಾಹತನಾದಗಳನ್ನು ಕೇಳಿದ ಅನಂತರ ಹೊಳೆಹೊಳೆವ ಪ್ರಕಾಶ ಗೋಚರಿಸಹತ್ತುತ್ತದೆ. ಅದರ ಅನುಭವವೂ ಅಪರೂಪದ್ದಾಗಿದೆ.

'ಥಳಥಳಗುಡುತ ಕಳೆಮಳೆಗಳು।
ಒಳಗೆ ಹೊರಗೆ ನಿಮ್ಮದೆ ಹೊಳಹೊ।
ಭಳಭಳ ಭಾಸುವ ಬೆಳಗಿನ ಬೆಳಗು।
ಝಳ ಝಳಿಸುವ ನಿಮ್ಮದೆ ಸುಳಿವು।
ಸುಳಿ ಸುಳಿದಾಡುವ ನೆಲೆ ನಿಭ ನಿಜವಿದು।
ಒಳತಾಗ್ಯದೆ ನಿಮ್ಮದೆ ಬಲವೊ।
ಸಳ ಸಳ ಸುರಿವುತ ತುಳುಕುತ ತುಂಬೇದ।
ಒಲಿವುತ ನಿಮ್ಮ ದಯದೊಲವೊ।।' (೬೬-೧೬)

'ಹೊಳೆಯುತ ಸುಳಿಯುತ ಉಲವುತಲ್ಯದ
ತಾ ಸದಮಲ ಸುಖಕಲ್ಲೋಳ।
ಥಳಥಳಗುಡುತ ಮೊಳೆ ಮಿಂಚಿನ ಕಳೆ
ಬೆಳಗು ದೋರುತಲ್ಯದ ಬಹಳ।
ಹೇಳಲಳವಲ್ಲದು ಬಲು ಸೂಕ್ಷ್ಮ ತಿಳಿದವ
ತಾ ವಿರಳ।
ಇಳಿಯೊಳು ನಿಜ ಆನಂದವನು ದೋರಿತು।
ಸ್ವಾನುಭವದ ಸುಕಾಲ।।' (ಕೀ-೭೮)

ಅಪರೂಪವಾದಂಥ ಆ ಬೆಳಕು ಹೇಳಲು ಅಸಾಧ್ಯವಾದದ್ದು ಬಲು ಸೂಕ್ಷ್ಮವಾದದ್ದು ಆದರೆ ಈ ಭೂಮಿಯ ಮೇಲಿನ ನಿಜವಾದ ಆನಂದವೆಂದು ಅವರು ಹೇಳುತ್ತಾರೆ. ಮತ್ತು

'ಉದಯಾಸ್ತಿಲ್ಲದ ಬೆಳಗಿನ ಪ್ರಭೆಯು।
ತುದಿಮೊದಲಿಲ್ಲದೆ ತುಂಬಿತು ಪೂರ್ಣ।
ಬುಧಜನರನುದಿನ ಸೇವಿಸುತಿಹ್ಯ।
ಸದಮಲವಾದ ಸದಾ ಸವಿಸುಖ।।' (ಕೀ-೬೬)

'ಭಾನುಕೋಟ ತೇಜವಾಗಿ ರೂಪದೋರಿತು।
ತಾನೆ ತನ್ನಿಂದೊಲಿದು ದಯವ ಬೀರಿತು।
ಜ್ಞಾನ ಭಕ್ತಿ ವೈರಾಗ್ಯವನ್ನು ಅರುಹಿತು।
ನಾನು ನೀನೆಂಬ ಅಹಂಭಾವ ಹರಿಯಿತು।
ಧನ್ಯಗೈಸಿತು ಮಹಿಪತಿ ಪ್ರಾಣ ಜೀವನ। (ಕೀ-೬೨)

ಹೀಗೆ ಧನ್ಯಗೈಸಿದ ಆ ಮಹಿಪತಿಯ ಪ್ರಾಣಜೀವನವು,

'ಮಿರಿ ಮಿರಿ ಮಿಂಚುವ ಪರಿ ಪರಿ ಭಾಸುವ।
ವರ್ಣದೋರುವದನೇಕ।
ಥರಥರದಲಿ ತುಂಬಿ ಸಾಂದ್ರವಾಗಿದೋರುವ।
ವರಮುನಿಗಳಿಗೆ ಕೌತುಕ।
ಸುರಿಸುರಿದು ಸುರಿವ ಸೂರ್ಯಕೋಟ ಕಿರಣ।
ಪರಿಪೂರ್ಣವಾಗಿತ್ಯ ಮೂರುಲೋಕ।
ತರುತರುವಾಯದಲಿತನುಮನದೊಳಗೆ।
ದೋರುತಿಹುದು ಬ್ರಹ್ಮಸುಖ।
ಧನ್ಯಗೈಸಿತು ಮೂಢಮಹಿಪತಿ ಪ್ರಾಣಜೀವ।
ಕೈವಲ್ಯ ನಿಧಿ ಗುರುನಾಥ।। (ಕೀ-೩೯)

'ಅರ್ಕ ಮಂಡಲಗಳು ರವಿಶಶಿಕಿರಣವು।
ಝಳಝಳಿಸುವ ಪ್ರಭೆನೋಡಿ ಅನಿಮಿಷ ದೃಷ್ಟಿಲಿನ್ನ। (ಕೀ-೮೮)

'ಬೆರೆದು ನೋಡಲು ಅಂತರಾತ್ಮದೊಳು ಪ್ರಭೆಯಗಳು।
ಥಳಥಳಿಸುವಾ ಮಹಾತೇಜಗಳು ಪುಂಜಗಳು।
ಹೇಳಲಿನ್ನೇನದ ಹೊಳವಗಳು ಸುಳಿವಗಳು ನೋಡುವದು ಅನಿಮಿಷದಲಿ
ರವಿಶಶಿತಾರೆಗಳು ಸೂಸುತಿಹ್ಯ ಕಿರಣಗಳು
ಭಾಸಿಸುವ ನಾನಾ ವರ್ಣಗಳು ಛಾಯಗಳು
ತುಂಬಿಹ ಬೆಳಗಿನ ಕಳೆಯಗಳು ಕಾಂತಿಗಳು ಕಂಡು ಬೆರಗಾದೆನು (ಕೀ-೭೫)

'ಇಕ್ಕೊ ಘನಪರಬ್ರಹ್ಮದ ಬೆಳಗಿದು।
ಶುಕಾದಿ ಮುನಿಗಳು ಸೇವಿಸುವದು।
ಉದಯಾಸ್ತಮಾನಗಳಿಲ್ಲದ ಬೆಳಗಿದು ಸದೋದಿತವಾದ ಸುಬೋಧವಿದು।
ಲೇಸಾಗಿ ಮಹಿಪತಿ ಸಾಧಿಸಿದು ಭಾಸ್ಕರಕೋಟ ಪ್ರಕಾಶವಿದು।। (ಕೀ-೨೮)

ಹೀಗೆ ಹೊಳೆಹೊಳೆವ ಪ್ರಕಾಶವನ್ನು ಕಂಡಾಗ ಅದುವೇ ಪರಮಾತ್ಮವೆಂಬ ಅರಿವು ಸಾಧಕನಿಗೆ ಆಗುತ್ತದೆ. ಮಹಿಪತಿರಾಯರಿಗೂ ಅದೇ ಅನುಭವವಾಯಿತು.

'ಸುಳಿ ಸುಳಿದಾಡುತ ಹೊಳೆವುತ ಎನ್ನೊಳಗೆ।
ಥಳಥಳಿಸುವ ತೇಜ: ಪುಂಜವಿದು।
ಮಳೆ ಮಿಂಚಿನ ಪರಿ ಕಳೆದೋರುತಲ್ಯದೆ।
ಝುಳಝುಳಿಸುತ ಎನ್ನ ಮನದೊಳಗೆ।
ಕಣ್ಣಾರೆ ಕಂಡೆ ಭಾನುಕೋಟ ಪ್ರಕಾಶ।
ನಿಮ್ಮ ಧನ್ಯಧನ್ಯವಾದ ಮಹಿಪತಿಯು।।' (ಕೀ-೧೯೨)

'ನೀಲ ವರ್ಣದೊಳಗೆ ಥಳಥಳ ಗುಡುತದೆ।
ಮ್ಯಾಲೆ ಮಂದಿರದೊಳಗೆ ಲೋಲ್ಯಾಡುತಿದೆ।
ದಾಸ ಮಹಿಪತಿಯೊಳದೆ ವಾಸವಾಗ್ಯದೆ।। (ಕೀ-೩೭೫)

'ಭಾನುಕೋಟ ತೇಜ ತಾನೆ ತಾನಾದನು ಎನ್ನ ಮನದೊಳು ಈಗ।
ದೀನ ಮಹಿಪತಿಗೆ ಸನಾಥ ಮಾಡುವ ಸ್ವಾನುಭವ ಬ್ರಹ್ಮಭೋಗ। (ಕೀ-೪೦)
'ಬೆಳಗು ಬೆಳಗು ಬೆರೆದವನೆ ತಾ ಕುಲಕೋಟಗಳು ಧನ್ಯ।
ಮಳೆ ಮಿಂಚಿನ ಕಳೆಕಾಂತಿಗಳಿಡುತ ದೋರಿದ ಸದ್ಗುರು ಪೂರ್ಣ।

ಬೆಳಗೇ ಬೆಳಗಾಯಿತು ಘನಗುರುದಯ ಮನದೊಳು ನಿಜ ಒಡಮೂಡಿ।
ಬೀಳುವ ತಿಮಿರಾಂಧದ ಭವ ಪಾಶವ ಕಳೆದನು ಸದ್ಗುರು ಪಾದವ ಕೂಡಿ।।'
(ಕೀ-೪೨೪)

'ಬಣ್ಣ ಬಣ್ಣದಿ ಕಂಡೆ ಗುರುಸ್ವರೂಪನ
ಕಣ್ಣಾರೆ ಕಂಡೆ ಸದ್ಗುರುಚರಣ
ಧನ್ಯಧನ್ಯವಾಯಿತು ಮಹಿಪತಿ ಜೀವನ' (ಕೀ-೧೧೬)

ಹೀಗೆ ಮಹಿಪತಿರಾಯರು ತಮ್ಮ ಸಾಧನೆಯಲ್ಲಿ ಕಂಡ ಅನುಭವಗಳನ್ನು ಪ್ರತಿಸಲವೂ ಬೇರೆ ಬೇರೆ ರೀತಿಯಲ್ಲಿ ಬಗೆಯಲ್ಲಿ, ಹೇಳುತ್ತಾರೆ. ಇಂಥ ನಾದ-ಪ್ರಕಾಶಗಳ ಅನುಭವಗಳಲ್ಲಿಯೂ ರಾಯರ ಅನುಭವ, ಅಭಿವ್ಯಕ್ತಿಗಳು ವಿಶಿಷ್ಟರೀತಿಯದಾಗಿವೆ. ಆಂತರಿಕ ಅನುಭವಗಳನ್ನು, ಉಳಿದವರ ಅನುಭವಕ್ಕೂ ಬರುವಂತೆ, ಅಥವಾ ಅನುಭವದ ತುಸುವುಟ್ಟನ ಅರಿವನ್ನು ಮೂಡಿಸುವಂತೆ ಅವರು ವಿವರಿಸುವ ರೀತಿಯು ಅನನ್ಯವಾಗಿದೆ. ನಾದ-ಪ್ರಕಾಶಗಳನ್ನು ಕಂಡ ಬಗೆಯನ್ನು ಹಲವು ರೀತಿಯಲ್ಲಿ ಕಿವಿಗೆ ಕೇಳಿಸುವಂತೆ, ಕಣ್ಣಿಗೆ ಕಾಣುವಂತೆ ವಿವರಿಸಿದ್ದರೂ ಒಂದೊಂದು ಸಲ ಹೀಗೂ ಹೇಳುತ್ತಾರೆ.

'ಏನೋ ಎಂತೋ ತಿಳಿಯದು ತಿಳಿಯದು
ಒಳಗೋ ಹೊರಗೊ ಬೈಗೊ ಬೆಳಗೊ
ಕಾಳೋ ಬೆಳದಿಂಗಳವೊ
ಮಳಿಯೋ ಮಿಂಚೊ ಹೊಳವೊ ಸಳವೊ
ತಿಳಿಯದ ಕಳೆ ಕಾಂತಿಗಳು''
ಉದಿಯೊ ಅಸ್ತೊ ಆದ್ಯೊ ಅಂತ್ಯೊ
ಮಧ್ಯೊ ತಾ ತಿಳಿಯದು
ತುದಿ ಮೊದಲಿಲ್ಲದೆ ಸದಮಲಬ್ರಹ್ಮವು
ಉದಿಯವಾಗಿಹ್ಯದು ನೋಡಿ
ಜೀವೊ ಭಾವೋ ಶಿವೊ ಶಕ್ತ್ಯೊ
ಅವದು ತಾ ತಿಳಿಯದು
ಘವಘವಿಸುವ ಅವಿನಾಶನ ಪ್ರಭೆಯಿದು
ಮಹಿಪತಿ ವಸ್ತು ಮಯವೊ। (೩೯-೧೧೯)

ಎಂದು ಹೇಳುವಲ್ಲಿ ಕೂಡ ಆ ಪರಾತ್ಪರ ವಸ್ತುವಿನ ಪರಿಚಯವನ್ನು ತಮ್ಮದೇ ಆದ ರೀತಿಯಲ್ಲಿ ಮಾಡಿಕೊಡುತ್ತಾರೆ. ಈ ಕುರಿತು ಇನ್ನು ಅನೇಕ ಅವರ ಕೃತಿಗಳನ್ನು ಉದಾಹರಿಸಬಹುದು. ಹೀಗೆ ನಾದ ಪ್ರಕಾಶಗಳ ಅನುಭವದಲ್ಲಿ ಸಾಧಕನಿಗೆ 'ನಿಜ ಸುಖ'ದ ಅರಿವು ಬರುವದನ್ನು ಅವರು ಹೇಳಿದ್ದಾರೆ. ಈ ಸುಖವು ಸ್ವಯಂಭೂ ಆದದ್ದು. ಪರಮಾತ್ಮನು ಆನಂದಮಯನಾಗಿರುವನು. ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ ಸಾಧಕನು ಕೂಡ ಸದಾಕಾಲ ಈ ಆನಂದವನ್ನು ಅನುಭವಿಸುತ್ತಿರುತ್ತಾನೆ. ರಾಯರ 'ನಿಜಸುಖ'ವನ್ನು ನೋಡಬೇಕು.

'ಆನಂದ ವಾಗ್ಯೇದ ಸ್ವಾನಂದ ಯೋಗ
ಏನೆಂದ್ಹೇಳಲಿ ಸ್ವಾನುಭವದ ಸುಭೋಗ
ಸುಖಗಮತದ ಶಿಖಾಮಧ್ಯ ಸಂತಾಧಾರಿ
ಬೇಕಾದರ ನೋಡಿ ಪತಚಕ್ರವೇರಿ' (೩೯-೧೯)

'ಆನಂದವಾಯಿತು ಸ್ವಾನಂದ ಘನಸುಖ
ತನುಮನದೊಳಗೆ ತನ್ನಿಂದ ತಾನೊಲಿದು' (ಕೀ-೨೦)

'ಸುಖನೋಡಿ ನಮ್ಮ ಸ್ವಾನುಭವದ
ಸಖರಿಂದ ಮೀರಿ ಬಲು ಸುಸ್ವಾದ
ಆಖರಿಂದ ಕೇಳಿ ನಿಜ ಬೋಧ
ಶುಕಮುನಿ ಸೇವಿಸುದಾ
ಬೆರೆದು ನೋಡಿ ಆರು ಚಕ್ರವೇರಿ
ಸುರಿಯುತಿದೆ ಸುಖ ಸಂತ್ರಾಧಾರಿ
ಭೋರ್ಗರೆಯುತಿದೆ ಅನಂತ ಪರಿ (ಕೀ-೧)

'ಸಾರಿ ಬೆಲ್ಲೀದ ಪೂರ್ಣ ಹರಿಯಸುಖನಿಧಾನ
ಸುರಮುನಿಗಳ ಪ್ರಾಣಶರಣ ಜನರಾಭರಣ' (ಕೀ-೧೨)

'ತರುತರುವಾಯದಲಿ ತನುಮನದೊಳಗೆ ದೋರುತಿಹುದು ಬ್ರಹ್ಮಸುಖ।
ಕಣ್ಣಿಗೆ ಕಾಣಿಸಿ ಪುಣ್ಯಗೈಸುತಿಹುದು ಎನ್ನೊಳಾನಂದ ಭರಿತ।
ಏನೆಂದ್ಹೇಳಲಿ ಅನುಭವಾನಂದ ಸುಖ ಜನಮನದೊಳು ತಾ ಸಾಕ್ಷಾತ।'' (ಕೀ-೩೯)

'ಆನಂದಮಯ ಘನ ತುಂಬಿ ತುಳುಕುತಿಹುದು।
ಜ್ಞಾನ ಸಮುದ್ರದ ಲೋಟಗಳು।
ಏನೆಂದ್ಹೇಳಲಿ ಸ್ವಾನಂದ ಸುಖ ಆನಂದೋ।
ಬ್ರಹ್ಮದ ಆಟಗಳು।।' (ಕೀ-೫೨)

'ಸುರಿಮಳೆ ಗರೆವುತಲಿದೆ ಸ್ವಸುಖಿದಾನಂದೋಬ್ರಹ್ಮ।
ತರಳ ಮಹಿಪತಿಗೆ ನಿತ್ಯಭಿನವ ನೋಡಿ ಸಂಭ್ರಮ। (ಕೀ-೫೬)

ಹೀಗೆ ಒಮ್ಮೆ ಸ್ವಾನಂದ ಸುಖದ ಸುರಿಮಳೆಯು ಸಂತ್ರಾಧಾರೆಯಾಗಿ ಬೀಳುತ್ತಿರಲು ಸಾಧಕನ ಜೀವನವು ಧನ್ಯವೂ ಸಾರ್ಥಕವೂ ಆಗುವುದು. ಎಲ್ಲ ಬಂಧನಗಳನ್ನು ಕಳಚಿಕೊಂಡು ಅವನ ಮನಸ್ಸು ಪರಮಾತ್ಮನಲ್ಲಿ ಸಂಪೂರ್ಣವಾಗಿ ಲೀನವಾಗುತ್ತದೆ. ಅದೇ ಪರಮ ಸಾಕ್ಷಾತ್ಕಾರದ ಅವಸ್ಥೆ. ಮಹಿಪತಿರಾಯರ ಈ ಅವಸ್ಥೆಯ ಪರಿಯೂ ಅಪರೂಪದ್ದಾಗಿದೆ.

'ಒದಗಿ ಬಂದಿದರಿಟ್ಟು ಸದಮಲ ಬ್ರಹ್ಮಸುಖ।
ಮೊದಲಿನ ಪುಣ್ಯ ಪೂರ್ವಾರ್ಜಿತವೋ।
ಧನ್ಯವಾಯಿತು ಮೂಢ ಮಹಿಪತಿ ಪ್ರಾಣಜೀವ।
ಮನವು ಆಯಿತು ಉನ್ಮನವೋ।' (ಕೀ-೧೪)

'ನೆನಿಯಲಿಕ್ಕೆ ಮನ ಘನ ಬೆರದಾಡುವ।
ಖೂನವಾಗುವದಿದೆ ರಾಜಯೋಗ।
ಅನುಭವಿಗಳಿಗೆ ಅನುಕೂಲವಾಗಿಸ್ಸು।
ಅನುವಾಗಿ ದೋರುದು ಬ್ಯಾಗ।
ಭಾನುಕೋಟಿ ತೇಜ ತಾನೆ ತಾನಾದನು।
ಎನ್ನ ಮನದೊಳು ಈಗ।
ದೀನ ಮಹಿಪತಿಗೆ ಸನಾಥ ಮಾಡುವ।
ಸ್ವಾನುಭವದ ಬ್ರಹ್ಮಭೋಗ।। (ಕೀ-೪೦)

'ಭಿನ್ನವಿಲ್ಲದೆ ಸಹಸ್ರದಳದಲ್ಯಾಡುವ ಹಂಸನ।
ಕಣ್ಣು ಕಂಡು ಪಾವನವಾಯಿತು ವಾಸುದೇವನ। (ಕೀ-೬೮)

'ತಾನೆಂಬುದರೊಳು ತಾನೆ ತಾನಾಗೇದ ಭಾನುಕೋಟಿ ಉದಿತ।
ದೀನ ಮಹಿಪತಿ ಸ್ವಾಮಿಯ ಸಾಕ್ಷಾತಾನಂದ ಘನಭರಿತಾ। (ಕೀ-೪೪)

'ತತ್ವಸಾರದೊಂದೆ ತುತ್ತು ಅತಿ ಹರುಷಗೊಂಡಿತು
ನಿತ್ಯತೃಪ್ತಹೊಂದಿತು ಹಿತ ಮಹಿಪತಿಗಾಯಿತು' (ಕೀ-೪೫)

'ಲೇಸು ಲೇಸಾಯಿತು ಎನಗೆ ಭಾಸ್ಕರ ಕರುಣವು
ಭಾಸುತಿಹುದು ವಾಸುದೇವನ ಪುಣ್ಯಚರಣವು
ಮೋಸವಿಲ್ಲದೆ ನೀಗಿತು ಜೀವನ ಜನ್ಮ ಮರಣವು
ದಾಸ ಮಹಿಪತಿಗಾಯಿತು ಘನಸ್ಫುರಣವು' (ಕೀ-೬೦)

'ಸುದಿಯು ಕೇಳದಂಥ ಸುದಿ ಕೇಳದೆವಿಂದು
ಕದಿಗಾಯಿತು ನೋದಿ ಹುಟ್ಟಿ ಬಾಹ ಜನ್ಮಸಂದು
ಎದಿದು ಗುರುಪಾದ ಜನ್ಮಸಾರ್ಥಕವಾಯಿತೆಂದು
ಪಡೆದ ಮಹಿಪತಿ ನಿಜಾನಂದ ವಸ್ತು ಒಂದು' (ಕೀ-೮೬)

ಎಂದು ಮಹಿಪತಿರಾಯರು ಬಗೆಬಗೆಯಾಗಿ ಆ ಚಿನ್ಮಯ ಚಿದ್ರೂಪನನ್ನು ನಿಗಮಗೋಚರ - ನಿಜವಸ್ತುವನ್ನು, ಅಗಣಿತ ಗುಣಪರಿಪೂರ್ಣನನ್ನು ಸಗುಣ-ನಿರ್ಗುಣನನ್ನು, ಸುಗಮ ಸುಪಥ ಸಜ್ಜನರಾನಂದ, ಯೋಗಿ ಜನರನುಕೂಲನನ್ನು, ಪರಮಾತ್ಮನನ್ನು ನಿತ್ಯವೂ ಕಂಡು ಹಾಯ್ತೆಂಬ ಬಣ್ಣಿಸಿದ್ದಾರೆ.

'ಮನೋಹರವಾಗುವ ಅನುಭವದೋರುತದೆ
ದೀನಮಹಿಪತಿಗೆ ಪಾವನ ಗೈಸುತದೆ' (ಕೀ-೨೪)

ದೀನ ಮಹಿಪತಿಯನ್ನು ಪಾವನ ಗೈಸುವ ಅದು ವಸ್ತುವೂ ಅಹುದು. ಪರಬ್ರಹ್ಮ ಸ್ವರೂಪವೂ ಹೌದು. ಅದನ್ನು ಏನೆಲ್ಲ ಹೆಸರಿನಿಂದ ಕರೆಯಬೇಕು?

'ನಿಗಮಗೋಚರ ನಿಜವಸ್ತು ನೀನೆ ಭಗತರಿಗೆ ಸಹಕಾರವೊ
ಅಗಣಿತಗುಣಪರಿಪೂರ್ಣ ನೀನೆ ಸುಗುಣ ನಿರ್ಗುಣ ನೀನೆವೋ
ಸುಗಮ ಸುಪಥ ಸಜ್ಜನರಾನಂದ ಯೋಗಿ ಜನರನುಕೂಲವೋ
ಬಗೆ ಬಗೆ ಸದ್ವ್ಯಸಿತ ಮಹಿಪತಿಗುರು ಝಗಝಗಿಸುವ ಘನ ನೀನೆವೊ''

(ಕೀ-೧೫)

'ಇದೇ ಇದೇ ವಸ್ತು ಸನಾತನ ಒಂದೆ
ಆದಿ ಅನಾದಿಯಾಧಾರದಿಂದ
ದೇವಾದಿಗಳು ಮಾಡುವರಿದೇ ಧ್ಯಾನಾ
ಭವಹರಗುರು ಮೂರುತಿ ನಿಧಾನಾ
ಇಹಪರ ಸುಖ ದೋರುದಿದೆ ನೀಟ
ಮಹಿಪತಿಸ್ವಾಮಿ ಶ್ರೀಗುರು ಮಣಿಮುಗುಟ' (ಕೀ-೩೭)

'ಇದೇ ಇದೇ ಸದ್ವಸ್ತು ನಮ್ಮ ಇದೇ ಇದೇ
ಲೇಸಾಗಿ ಪಾಲಿಸುತಿಹ್ಯ ದಾಸ ಮಹಿಪತಿಗಿದೆ
ಭಾಸ್ಕರ ಕೋಟಿ ಪ್ರಕಾಶ ವಸ್ತುವಿದೆ' (ಕೀ-೩೮)
'ವಸ್ತು ಕಂಡೆನು ಒಂದ ಕರ್ತೃ ಸದ್ಗುರುವಿನ ಕೃಪೆಯಿಂದ' (ಕೀ-೪೯೦)

ಹೀಗೆ ಆ ಪರಮಾತ್ಮನು ಒಮ್ಮೆ ವಸ್ತುವಾಗಿ ಕಂಡರೆ ಇನ್ನೊಮ್ಮೆ

'ಬಯಲಿಗೆ ನಿರ್ಬಯಲಾಗೆದ ಗುಹ್ಯಗೂಢಕೆ ಮೀರ್‍ಯದ
ಸೋಹ್ಯ ಸೂನ್ನಿದತ್ತಲದೆ ಕೈಯೊಳು ಸಿಲುಕದ' (ಕೀ-೩೩)

'ಬೈಲಿಗೆ ನಿರ್ಬೈಲ ಭಾವಿಕ ಬಲ್ಲನು ಇದರ್‍ಹೊಯಿಲ
ಮಹಿಪತಿಗನುಕೂಲ ಜೀವನ್ಮುಕ್ತಿಗೆ ಇದು ಮೂಲ' (ಕೀ-೪೯೦)

ಹೀಗೆ ಬಯಲು -ನಿರ್ಬಯಲಾಗಿಯೂ ಕಂಡಿದೆ. ಅದೇ ವಸ್ತು, ಅದೇ ಬಯಲು ಅದೇ ನಿರ್ಬಯಲು,

'ಕಣ್ಣಾರೆ ಕಂಡ ಕೈವಲ್ಯ ಮನದ ವೈಶಾಲ್ಯ
ಕೈವಲ್ಯನಿಧಿ ನಿಶ್ಚಯ ದೇವಾಧಿದೇವ
ಅವಿನಾಶ ಪದ ಅಕ್ಷಯ ಶ್ರೀ ವಾಸುದೇವ
ಭಾವಾತ್ಮ ಭಜಕ ಹೃದಯ ಸರ್ವೋತ್ತಮ
ಬಾಹ್ಯಾಂತ್ರ ಭಾಸುತಿಹ್ಯ ಮಹಿಪತಿ ಮನದೈವ' (ಕೀ-೧೩೨)

'ಘನಸುಖ ದೋರುತದೆ ಎನಗಿಂದು
ಭಾನುಕೋಟಿ ಉದಯವಾದನೆಂದು
ದೀನ ಮಹಿಪತಿ ಸ್ವಾಮಿ ಕೃಪಾಸಿಂಧು
ಮನೋಹರ ಮಾಡಿದ ತಾನೆ ಬಂದು' (ಕೀ-೬೯)

ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದಂತೆ 'ಆತ್ಮಾ ವಾ ಅರೇ ದೃಷ್ಟವ್ಯ: ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತ:' ಎಂಬಂತೆ ರಾಯರು ನಿತ್ಯದಲ್ಲೂ ಆ ಪರಮಾತ್ಮನನ್ನು ಕಾಣುತ್ತಿದ್ದರು. ಅವನ ವಿಷಯವನ್ನು ಕೇಳುತ್ತಿದ್ದರು. ಅವನ ಕುರಿತು ತಿಳಿದುಕೊಳ್ಳುತ್ತಿದ್ದರು ಮತ್ತು ಪುನಃ ಪುನಃ ಅವನ ಧ್ಯಾನವನ್ನು ಮಾಡುತ್ತಿದ್ದರು.

ಹೀಗೆ ಪ್ರತಿನಿತ್ಯ ಪರಮಾತ್ಮನನ್ನು ಬಗೆ ಬಗೆಯಾಗಿ ಕಾಣುವ ರಾಯರು ಅವನ ಪೂಜೆಯನ್ನೂ ಮಾಡುತ್ತಿದ್ದರು. ಅದರ ಸೊಗಸನ್ನು ಅವರ ಬಾಯಿಯಿಂದಲೇ ಅನುಭವಿಸಬೇಕು. ವಿರಾಟ್ ಸ್ವರೂಪದ ಪರಮಾತ್ಮನ ಪೂಜೆ ವಿಶಾಲ ಸ್ವರೂಪದ್ದಾಗಿರಬೇಕು. ಅವರ ಪೂಜೆಯ ಪರಿ, ಅವರ ಪರಮಾತ್ಮನ ಮಂಟಪ ತಳಿರು ತೋರಣಗಳು ಗಂಧ, ಅಕ್ಷತೆ, ಧೂಪ, ದೀಪ ನೈವೇದ್ಯ ತಾಂಬೂಲಗಳು ಆಸ್ವಾದ್ಯಕರವಾಗಿವೆ.

'ಮನವೆಂಬ ಮನಮಂಟಪವ ನಾಟುವ
ನೆನವು ನವರತ್ನದ ಸಿಂಹಾಸ(ನವ) ನಿಡುವ
ಜ್ಞಾನ ಧ್ಯಾನದೆಡಬಲದಿ ಹಿಡಿವ
ಅನುವಾಗಿ ಅನಿಮಿಷದಲ್ಲಿ ನೋಡುವ
ತನುವೆಂಬ ತಾರತಮ್ಯಭಾವ ಮಾಡುವ
ಅನುಭವದಿಂದನುಪಮನ ನೋಡುವ
ಆನಂದವೆಂಬ ಅಭಿಷೇಕವ ಮಾಡುವ
ಮನೋ ಅಭಿಷ್ಟೆಯ ಸುವಸ್ತ್ರ ನೀಡುವ
ಬುದ್ಧಿ ಭಾವನೆಯ ಗಂಧಾಕ್ಷತಿಡುವ
ಶುದ್ಧ ಸುವಾಸನೆ ಪರಿಮಳ ಮಾಡುವ
ಶಬ್ದ ಸುವಾಕ್ಯದ ಪುಷ್ಪವ ನಿಡುವ
ಸಿದ್ಧಾಂತವೆಂಬ ಸುಸೇವೆ ಮಾಡುವ
ಪೂರ್ವಕರ್ಮವೆಂಬ ಧೂಪಾರ್ತಿ ಮಾಡುವ
ಅರುವೆಂಬ ದೀಪದ ಪ್ರಕಾರ್ತಿ ಮಾಡುವ
ಜೀವಭಾವವೆಂಬ ನೈವೇದ್ಯವಿಡುವ
ವಿವೇಕದ ಉದಕ ಸಮರ್ಪಣೆ
ತ್ರಿವಿಧ ಗುಣವೆಂಬ ತಾಂಬೂಲನಿಡುವ' (೩೮-೮೨)

ಹೀಗೆ ಮಹಿಪತಿರಾಯರು ತಮ್ಮ ಆತ್ಮದಲ್ಲಿ ಕಂಡುಕೊಂಡ ಪರಮಾತ್ಮನನ್ನು ಪೂಜಿಸುತ್ತಿದ್ದರು. ಅನಂತರ ಅವರು ಆ ಪರಮಾತ್ಮನನ್ನು ಎಲ್ಲಕಡೆಗೂ ಕಾಣಹತ್ತಿದರು. ಸಾಧಕನ ಎರಡನೆಯ ಸಿದ್ಧಿಯಿದು. ಇದೀ ವಿಶ್ವವೇ ಪರಮಾತ್ಮ ಚೇತನದಿಂದ ತುಂಬಿಕೊಂಡಿರುವುದನ್ನು ಕಂಡರು. ಆತ್ಮದಲ್ಲಿ ಕಂಡ ಪರಮಾತ್ಮನ

ರೂಪವನ್ನು ವಿಶ್ವಾತ್ಮಕವಾಗಿ ಕಂಡು ಅನುಭವಿಸಿ ಬಣ್ಣಿಸಿದರು.

'ಎಲ್ಲಿ ನೋಡಿದರೆ ತಾ ಅಲ್ಲಿಗಿಹ್ಯ
ಎಲ್ಲಕಡೆಯಲ್ಲೇಕೋಮಯವ್ಹೋ
ಸುಲ್ಲಭವಾಗಿವ ಬಲ್ಲ ಜ್ಞಾನಿಗೆ ಭಾಸುತಿಹ್ಯ
ಫುಲ್ಲಲೋಚನ ಪ್ರಾಣದೊಲ್ಲಭನು
ಎತ್ತ ನೋಡಿದರತ್ತ ಸುತ ಸುತ್ತಲಿಹ್ಯ
ನಿತ್ಯವಾಗಿಹ್ಯ ಹೃತ್ಕಮಲದಲ್ಲಿ
ಸಾರಿ ಚೆಲ್ಲೀದ ಪರಬ್ರಹ್ಮ ಸ್ವರೂಪವಿದು
ಸೂರ್ಯಾಡಬಹುದು ಸುಜ್ಞಾನಿಗಳು' (೬೯-೧೨)

'ಎಡಕ ಬಲಕ ತಾಂ ತುಂಬೇದ
ದೃಢ ಮನಕ ತಾಂ ಸಿದ್ಧದ' (೬೯-೨೮)

ಇಂತಹ ಪರಬ್ರಹ್ಮ ಪರಮಾತ್ಮನು ಎಲ್ಲಕ್ಕೂ, ಎಲ್ಲರಿಗೂ ಆಧಾರವಾಗಿದ್ದಾನೆ ಮತ್ತು ಎಲ್ಲಕಡೆಗೂ ತುಂಬಿದ್ದಾನೆ.

'ಸರ್ವಸಾಕ್ಷಿ ಸರ್ವಾಧಾರ ಸರ್ವರೊಳು ಸರ್ವೇಶ್ವರ
ಸರ್ವಮಿದಂ ಖಲು ಬ್ರಹ್ಮವೆಂದು ಶ್ರುತಿಸಾರುತಿದೆ
ಇಹಪರ ಪರಿಪೂರ್ಣ ಮಹಾಗುರು ನಿರಂಜನ
ಮಹಿಪತಿ ಬಾಹ್ಯಾಂತ್ರದೊಳು ಸಹಕಾರ ಸಾಕ್ಷಾತ್ಕವಿದೆ'

ಸರ್ವಮಿದಂ ಖಲುಬ್ರಹ್ಮವೆಂಬುವಮಾತು ಇದುನೋಡಿ ಖೂನ
ಅರಹು ಇಲ್ಲದೆ ಜನದೊಳು ಬರುದೆ ಹೇಳ್ಯಾಡುದೇನ
ನಿರ್ವಿಕಲ್ಪನ ನಿಜ ನೆಲೆ ನಿಘವರಿತು ನೋಡಿಸ್ಯಾನ
ಸರ್ವಸಾಕ್ಷಿ ಸರ್ವಾರ್ಜಿತವೆಂಬ ವಸ್ತುನೋಡಿ ಪೂರ್ಣ' (೬೯-೫೭)
'ಕಣ್ಣಿನ ಹಿಂದಾಡುತಲಿದೆ ಮನ
ಕಣ್ಣಿಗೆ ಕಣ್ಣು ನೋಡಲುನ್ಮನ
ಕಣ್ಣನೊಳಾಡುತಿದೆ ಚಿದ್ಘನ
ಅಣುರೇಣುಕ ತಾ ಇದೆ ಪರಿಪೂರ್ಣ।' (೬೯-೧೩೬)

'ಅಣುರೇಣುದೊಳು ವ್ಯಾಪಿಸಿ ಜನಮನದೊಳು ತುಂಬಿಹ
ತನುಮನದೊಳು ತಾನೆ ತಾನಮ್ಮ
ಎತ್ತ ನೋಡಿದರತ್ತ ಸುತ್ತ ಸೂಸುವನಮ್ಮ
ನೆತ್ತಿ ಒಳಗೆ ಪೂರ್ಣಮೊತ್ತವಾದ ಪರಬ್ರಹ್ಮ'

'ಭಾಸ್ಕರ ಗುರುಶ್ರೀಪತಿಯು ವಿಶ್ವವ್ಯಾಪಕನೆಂಬ ಕೃತಿಯು
ಸಾರಿ ದೂರುತಲಿದೆ ಶ್ರುತಿಯು ಘನಮಹಿಮಾನಂದ ಸ್ಫೂರ್ತಿಯು'

ಹೀಗೆ ವಿಶ್ವವ್ಯಾಪಕವಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಕಂಡು ಅನಂತರ ಮಹಿಪತಿರಾಯರು ವಿಶ್ವಾತೀತವಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದರು.

'ವಿಶ್ವತೋ ಚಕ್ಷು ನೀ ವಿಶ್ವತೋಮುಖನೀನೆ
ವಿಶ್ವತೋ ಬಾಹು ಸಾಕ್ಷಾತ್ ನೀನೆ
ವಿಶ್ವಾಂತ್ರ ಸೂತ್ರನೆ ವಿಶ್ವಂಭರನು ನೀನೆ
ವಿಶ್ವರಹಿತ ವಿರಾಜಿತನು-ನೀನೆ' (ಕೀ-೪೯೫)

'ನಿರ್ವಿಕಲ್ಪ ನಿರ್ಗುಣನೀತ ನಿರ್ವಿಕಾರ ನಿಷ್ಕೃತೀತ
ನಿರ್ವಿಶೇಷನಾದ ನಿರಾಳನೀತ ನೋಡಿರೋ'
'ಸ್ವಯಂಭು ಸ್ವತಂತ್ರ ಸ್ವಪ್ರಕಾಶ
ಸ್ವಯಂ ಜ್ಯೋತಿ ಸ್ವರೂಪ ಸ್ವವಿಕಾಸ
ದ್ವೈತಾದ್ವೈತಕ ಸಹಿತ ಸ್ವವಿಲಾಸ
ಶ್ರೇಯ ಸುಖದಾಯಕನಹುದೊ ನೀ ಪರೇಶ' (ಕೀ-೨೩೭)

'ತ್ರಿಗುಣಾತೀತ ತಾರಕ ನಿರಂಜನಗೆ
ಝಗಝಗಿಸುವ ಜಗಜ್ಯೋತಿಹನಗೆ
ಜಾಗಿಸುವ ಜಗತ್ರಯ ಜೀವನಿಗೆ
ಯೋಗಿಜನ ಧ್ಯಾನಿಸುವ ನಿರ್ವಾಣಗೆ' (ಕೀ-೨೩೫)

'ಹಿಂಡದೈವದೊಡೆಯನು ಅನಂತಕೋಟಿ ಬ್ರಹ್ಮಾಂಡನಾಯಕನು
ಕಂಡು ಅದ್ಭುತ ಸುಖವು ಉಂಡವನಿಗಿದು
ಪಿಂಡ ಬ್ರಹ್ಮಾಂಡ ದೃಶ್ಯವು ಮಂಡಲದೊಳು
ಬ್ರಹ್ಮಾಂಡದಲಿಹ ಪ್ರಚಂಡ ಶ್ರೀಗುರು ಪಿಂಡಾಂಡದಿ ಕಂಡವೆಗಿಲ್ಲದೆ''

ಹೀಗೆ ಮಹಿಪತಿರಾಯರು ಯೋಗ ಮಾರ್ಗದಲ್ಲಿ ವಿವರಿಸಿದ ಆತ್ಮ-ವಿಶ್ವ ಹಾಗೂ ವಿಶ್ವಾತೀತ ಪರಮಾತ್ಮನನ್ನು ಕಂಡರು. ರಾಯರು ತಮ್ಮ ಅನುಭವಗಳನ್ನು ವಿವರಿಸುವಲ್ಲಿ ಇತರ ಹರಿದಾಸರಿಂದ ಭಿನ್ನರಾಗಿದ್ದಾರೆಂಬುದು ಸ್ಪಷ್ಟವಾಗಿದೆ. ಗೂಢವಾದ ಅನುಭವಗಳನ್ನು ಮನಮುಟ್ಟುವಂತೆ ವಿವರಿಸುವಲ್ಲಿ ಅವರು ಸಿದ್ಧ ಹಸ್ತರು. ಸಾಂಪ್ರದಾಯಕ ಹರಿದಾಸರು ವರ್ಣಿಸಿದ ಆಧ್ಯಾತ್ಮಿಕ ಅನುಭವಗಳಿಗೆ ವ್ಯತಿರಿಕ್ತವಾದ ರೀತಿಯಲ್ಲಿ ಅವರು ಅಭಿವ್ಯಕ್ತಗೊಳಿಸಿದ್ದಾರೆ. ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದಾಗ ಅವರು ಸವಿದ ಆನಂದವನ್ನು, ಸುಖ, ಸ್ವಾನುಭವ, ಉಲ್ಹಾಸ ಎಂದು ಮುಂತಾಗಿ ಅನೇಕ ರೀತಿಯಿಂದ ವರ್ಣಿಸಿದ್ದಾರೆ. ಅವರು ಪರಮಾತ್ಮನನ್ನು ವಸ್ತು, ಘನವಸ್ತು ಮುಂತಾಗಿ ನಪುಂಸಕ ಲಿಂಗದಲ್ಲಿಯೂ ಬಣ್ಣಿಸಿದ್ದಾರೆ. ಬಯಲು, ನಿರ್ಬಯಲು, ಶೂನ್ಯ ಮೊದಲಾದ ವೀರಶೈವ ಶರಣರ

## ೬.೪ ಸಾಕ್ಷಾತ್ಕಾರ (ತೌಲನಿಕ)

ಭಾರತೀಯ ಆಧ್ಯಾತ್ಮಿಕ ಪರಂಪರೆಯಲ್ಲಿ ಪ್ರತಿಯೊಬ್ಬ ಸಾಧಕನಿಗೂ ತನ್ನದೇ ಆದ ರೀತಿಯಲ್ಲಿ ಸಾಧನೆ ಮಾಡಿ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುವ ಸ್ವಾತಂತ್ರ್ಯವಿದೆ. ವೇದಕಾಲದಿಂದಲೂ ಈ ಪರಂಪರೆಯು ನಡೆದು ಬಂದಿದ್ದು ಅವ್ಯಾಹತವಾಗಿ ಮುಂದೆ ಸಾಗಿದೆ. ವೇದ ಮಂತ್ರಗಳಿಗೆ ಪ್ರತಿಯೊಂದು ಮಂತ್ರಕ್ಕೂ ಒಬ್ಬ ಋಷಿಯ ಮತ್ತು ದೇವತೆಯ ಹೆಸರನ್ನು ಹೇಳಲಾಗುತ್ತದೆ. ಉಪನಿಷತ್ತುಗಳ ಕಾಲದಲ್ಲಿಯೂ ಇದೇ ಪರಂಪರೆಯು ಮುಂದುವರೆದದ್ದನ್ನು ಕಾಣುತ್ತೇವೆ. ಅರ್ವಾಚೀನ ಕಾಲದಲ್ಲಿ ಕೂಡ ಇಂಥ ಉದಾಹರಣೆಗಳು ಬೇಕಾದಷ್ಟು ದೊರೆಯುತ್ತವೆ.

ಪರಮ ಸತ್ಯದ ಶೋಧನೆಯಲ್ಲಿ ಒಂದೇ ಮಾರ್ಗ ಮತ್ತು ಒಂದು ದೇವತೆ ಎನ್ನುವ ಕಟ್ಟು ನಿಟ್ಟನ್ನು ಹಾಕದೇ ಇರುವುದರಿಂದ ಪ್ರತಿಯೊಬ್ಬ ಸಾಧಕನೂ ತನ್ನ ಶ್ರದ್ಧೆಗೆ ಅನುಗುಣವಾಗಿ ತನ್ನ ಸಾಧನ ಮಾರ್ಗವನ್ನು ಅನುಸರಿಸಿ ತನಗೆ ಇಷ್ಟವಾದ ದೇವತೆಯನ್ನು ಸಾಕ್ಷಾತ್ಕರಿಸಿಕೊಳ್ಳುವುದು ಭಾರತೀಯ ಆಧ್ಯಾತ್ಮಿಕ ಪರಂಪರೆಯ ವಿಶಿಷ್ಟ ಲಕ್ಷಣವಾಗಿದೆ. ಆದ್ದರಿಂದಲೇ ನಮ್ಮಲ್ಲಿ ಅನೇಕ ಆಧ್ಯಾತ್ಮಿಕ ಪರಂಪರೆಗಳು ಅಸ್ತಿತ್ವದಲ್ಲಿವೆ. ಮತ್ತು ಅವು ಒಂದೊಂದೂ ಸತ್ಯದ ಮುಖವನ್ನೇ ತೋರಿಸುತ್ತವೆ. ಇವೆಲ್ಲವುಗಳೂ ಪರಮಸತ್ಯದ ಸ್ವರೂಪಗಳೇ ಆದದ್ದರಿಂದ ವಿವಿಧ ಆಕಾರಗಳಲ್ಲಿ ಬೆಳಗುವ ದೀಪಗಳಂತೆ ಹೊಳೆಯುತ್ತವೆ.

ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ, ಮಂತ್ರಯೋಗ, ಹಠಯೋಗ, ರಾಜಯೋಗ, ಜಪ, ನಾಮಸಾಧನೆ, ತಂತ್ರ ಇವೇ ಮೊದಲಾದ ಅನೇಕ ಪ್ರಕಾರದ ಸಾಧನ ಮಾರ್ಗಗಳಿಂದ ಸಾಧಕನು ತನ್ನ ಆಧ್ಯಾತ್ಮಿಕ ಗುರಿಯನ್ನು ಮುಟ್ಟಬಹುದು. ಪ್ರತಿಯೊಂದು ಮಾರ್ಗಕ್ಕೂ ಅದರದೇ ಆದ ಉಪಾಸನಾ ಪದ್ಧತಿಯಿದ್ದು ಆಯಾ ಮಾರ್ಗಗಳಲ್ಲಿ ಪಡೆಯುವ ಅಂತಿಮ ಸಿದ್ಧಿಯೂ ವೈಶಿಷ್ಟ್ಯ ಪೂರ್ಣವಾಗಿರುತ್ತವೆ. ಪಡೆಯುವ ಆಧ್ಯಾತ್ಮಿಕ ಅನುಭವಗಳೂ ವಿಶಿಷ್ಟ ರೀತಿಯದಾಗಿರುತ್ತವೆ. ಇದರ ಅರ್ಥ ಒಬ್ಬ ಸಾಧಕನು ಒಂದೇ ಮಾರ್ಗದಿಂದ ನಡೆದು ಒಂದೇ ರೀತಿಯ ಅನುಭವವನ್ನು ಪಡೆಯಬೇಕೆಂಬ ನಿರ್ಬಂಧವೇನೂ ಇಲ್ಲ. ತನ್ನ ಮೂಲ ಸಾಧನೆಯೊಂದಿಗೆ ಇತರ ಮಾರ್ಗಗಳ ಸಾಧನೆಗಳನ್ನೂ ಮುಂದುವರೆಸಿ ಅವುಗಳ ಅನುಭವಗಳನ್ನೂ ಪಡೆಯಬಹುದು. ಶ್ರೀ ರಾಮಕೃಷ್ಣ ಪರಮ ಹಂಸರಂಥವರು ವಿವಿಧ ಧರ್ಮ ಪಂಥಗಳ ಸಾಧನೆಯನ್ನು ಮಾಡಿ ಬೇರೆ - ಬೇರೆ ಆಧ್ಯಾತ್ಮಿಕ ಅನುಭವಗಳನ್ನು ಪಡೆದದ್ದು ಗೊತ್ತಿರುವ ವಿಷಯವಾಗಿದೆ.

ಈ ದೃಷ್ಟಿಯಿಂದ ಹರಿದಾಸರ ಸಾಧನ ಮಾರ್ಗ ಮತ್ತು ಅವರು ಪಡೆದ ಆಧ್ಯಾತ್ಮಿಕ ಅನುಭವಗಳು ಉಳಿದ ಮಾರ್ಗಗಳ ಸಾಧಕರು ಪಡೆದ ಅನುಭವಗಳಿಗಿಂತ ಭಿನ್ನವಾಗಿವೆ. ಹರಿದಾಸರ ಸಾಧನ ಮಾರ್ಗವು ಮುಖ್ಯವಾಗಿ ಭಕ್ತಿ ಮಾರ್ಗದ್ದಾಗಿದೆ. ಪರಮಾತ್ಮನು ಒಡೆಯ ತಾನು ಸೇವಕ ಎಂಬ ಭಾವವೆ ಪ್ರಧಾನವಾದದ್ದು, ಭಕ್ತಿ ಪ್ರಧಾನ ಸಾಧನ ಮಾರ್ಗವಾದದ್ದರಿಂದ ಹೃದಯವೇ ಸಾಧನ ಕೇಂದ್ರವಾಯಿತು. ಭಕ್ತಿ ಭಾವವು ಸಾಧನದ ಪ್ರಮುಖ ಅಂಗವಾಗಿದೆ. ಪರಮಾತ್ಮನಲ್ಲಿ ಶುದ್ಧವಾದ ಭಕ್ತಿಯನ್ನು ತೋರುವುದರಿಂದ ಸಾಧಕನ ಹೃದಯವೂ ಶುದ್ಧವಾಗಿ ಅವನ ಅಂತಃಕರುಣಗಳು ಪವಿತ್ರವಾಗುವವು. ಶುದ್ಧ ಭಕ್ತಿ ಭಾವನೆಯ ಫಲವಾಗಿ ಹೃದಯದಲ್ಲಿ ಪರಮಾತ್ಮನ ದರ್ಶನವಾಗುವದು. ಪರಮಾತ್ಮ ದರ್ಶನದಿಂದ ಜೀವವು ಶುದ್ಧವೂ, ಶಾಂತವೂ, ಆನಂದಮಯವೂ ಆಗುವದಲ್ಲದೆ ಎಲ್ಲಕಡೆಗೂ ಎಲ್ಲದರಲ್ಲಿಯೂ ಪರಮಾತ್ಮನ ಶುದ್ಧ ಪ್ರೇಮವೇ ಅನುಭವಕ್ಕೆ ಬರುವದು. ಅದೇ ಮುಕ್ತಿಯ ಮಾರ್ಗವಾಗುವದು.

ದಾಸ್ಯ ಭಾವವೇ ಮುಖ್ಯವಾಗಿರುವುದರಿಂದ ಮತ್ತು ಹರಿದಾಸರೆಲ್ಲರೂ ಮಾಧ್ವ ಮತಾನುಯಾಯಿಗಳಾದ್ದರಿಂದ ಅವರ ಸಾಧನ ಮಾರ್ಗದಲ್ಲಿ ಅದ್ವೈತಭಾವವು ಬರುವುದಿಲ್ಲ. ನಿರಂತರವೂ ಪರಮಾತ್ಮನು ಒಡೆಯ, ಜೀವರುಗಳು ದಾಸರು-ಎನ್ನುವ ಭಾವನೆ ಇರುವುದರಿಂದ ಪರಮಾತ್ಮನೊಡನೆ ಐಕ್ಯದ ಅನುಭವವು ಹರಿದಾಸಪಂಥದ ಸಾಧಕರಿಗೆ ಬರಲಾರದು. ಪರಮಾತ್ಮನನ್ನು ಸಕಲಗುಣ ಪರಿಪೂರ್ಣನೆಂದು ಅವರು ಉಪಾಸನೆ ಮಾಡುವರು. ಪರಮಾತ್ಮನ ಆನಂದಮಯ ಸುಂದರ ರೂಪವನ್ನೇ ಅವರು ಆರಾಧಿಸುವರು. ಆದ್ದರಿಂದ ಪರಮಾತ್ಮನ ಆನಂದಮಯ ಸುಂದರ ರೂಪವನ್ನೇ ಅವರು ಕಾಣುವರು ಮತ್ತು ತಮ್ಮ ಹೃದಯದಲ್ಲಿ ಕಂಡ ಪರಮಾತ್ಮನ ಸುಂದರ ರೂಪವನ್ನು ಅಡಿಯಿಂದ ಮುಡಿಯವರೆಗೂ ಚಿತ್ರಿಸುವರು. ರಾಮ,ಕೃಷ್ಣ ಇತ್ಯಾದಿ ಅವತಾರ ರೂಪಗಳಲ್ಲಿ ಅವನನ್ನು ಕಂಡು ಆನಂದಿಸುವರು. ಮಹಿಪತಿರಾಯರೂ ಇದಕ್ಕೆ ಹೊರತಾಗಿರಲಿಲ್ಲ ಎಂಬುದನ್ನು ಈ ಮೊದಲಿನ 'ಸಂಪ್ರದಾಯ' ವಿಭಾಗದಲ್ಲಿ ಅವರ ಅನೇಕ ಕೃತಿಗಳ ಮುಖಾಂತರ ನೋಡಿಯಾಗಿದೆ. ಮಹಿಪತಿರಾಯರು ಯೋಗಸಾಧನ ಮಾರ್ಗದಿಂದ ಕಂಡ ಪರಮಾತ್ಮನ ಸಾನಿಧ್ಯವನ್ನು ಇತರ ಹರಿದಾಸರು ವಿಶೇಷತಃ ಪುರಂದರ - ಕನಕದಾಸರು ಕಂಡ ಪರಿಯನ್ನು ಚರ್ಚಿಸುವುದು ಇಲ್ಲಿಯ ಮುಖ್ಯ ಉದ್ದೇಶವಾಗಿದೆ. ಅದು ಹರಿದಾಸರು ನಿರೂಪಿಸಿದ ಸಾಕ್ಷಾತ್ಕಾರಕ್ಕೂ ಮಹಿಪತಿರಾಯರ ನಿರೂಪಣೆಗೂ ಇರುವ ಅಂತರವನ್ನು ಗುರುತಿಸಲು ಸಹಾಯವಾಗಬಹುದು.

ಯೋಗಮಾರ್ಗ ಸಾಧನದ, ಸಾಕ್ಷಾತ್ಕಾರದ ಅನುಭವಗಳು ಪುರಂದರದಾಸರ

ಕೃತಿಗಳಲ್ಲಿ ಕ್ವಚಿತ್ತಾಗಿ ಬರುತ್ತವೆ. ಹಾಗೆ ಬಂದಾಗ ಕೂಡ ಅವರಿಗೆ ಪರಮಾತ್ಮನ ಸಗುಣಮೂರ್ತಿಯೇ ಕಾಣುವುದು ಸ್ವಾಭಾವಿಕವಾಗಿದೆ. ರಾಮಾಯಣ, ಭಾಗವತ, ಮಹಾಭಾರತ ಮೊದಲಾದ ಕಾವ್ಯಗಳಲ್ಲಿ ಬರುವ ಪುರುಷೋತ್ತಮನ ಅವತಾರ ಮೂರ್ತಿಗಳೇ ಅವರ ಕಣ್ಣಿಗೆ ಗೋಚರವಾಗುತ್ತವೆ.

'ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ.//೯//
'ಕಂಡೆ ನಾ ಗೋವಿಂದನ
ಪುಂಡರೀಕಾಕ್ಷ ಪಾಂಡವಪಕ್ಷ ಕೃಷ್ಣನ' //೧೦//
'ಕಂಡೆ ನಾ ಕನಸಿನಲಿ ಗೋವಿಂದನ' //೧೧//

ಮೊದಲಾದ ಕೀರ್ತನೆಗಳಲ್ಲಿ ಮೊದಲಿನ ಸಾಲುಗಳು ಮಾತ್ರ ಪರಮಾತ್ಮನ ದರ್ಶನದ ನಿಶ್ಚಿತ ಅವಸ್ಥೆಯನ್ನು ಸೂಚಿಸುತ್ತವೆ. ಆದರೆ ಅನಂತರದ ವಿವರಣೆಗಳು ಅವನ ನಾಮ ಮಹಿಮೆ ಇಲ್ಲವೆ ಸಗುಣರೂಪದ ವರ್ಣನೆಗಳಾದ 'ಅಂದುಗೆ ಕಿರುಗೆಜ್ಜೆ' 'ಉಟ್ಟಪೀತಾಂಬರ' 'ತೊಟ್ಟಮುತ್ತಿನ ಹಾರ' 'ಕೈಯಲ್ಲಿ ಕೊಳಲು' 'ಉಡುದಾರ ಒಡ್ಯಾಣ' ಇತ್ಯಾದಿಗಳಿಗೆ ಸೀಮಿತವಾಗಿ ಬಿಡುತ್ತವೆ. ಬಹುಶ: ತಾವು ಕಾವ್ಯ, ಇತಿಹಾಸ, ಪುರಾಣಗಳನ್ನು ಓದಿ ಕಲ್ಪಿಸಿಕೊಂಡ ಉಪಾಸ್ಯಮೂರ್ತಿಯ ಚಿತ್ರಗಳನ್ನು ಅವರು ಕಾಣುತ್ತಿರಬೇಕು. ತೀರ ಕ್ವಚಿತ್ತಾಗಿ ಅವರುಗಳು ಈ ಮಜಲನ್ನು ದಾಟ ಹೋಗುತ್ತಾರೆ.

'ಕಣ್ಣಿನೊಳಗೆ ನೋಡೋ ಹರಿಯ ಒಳ
ಗಣ್ಣಿನಿಂದಲಿ ನೋಡೋ ಮೂಜಗದೊಡೆಯ' //೧೨//

ಎಂಬ ಪುರಂದರ ದಾಸರ ಕೀರ್ತನೆಯಲ್ಲಿ ಯೋಗದ ಪ್ರಾರಂಭಿಕ ಪರಿಚಯವು ಆಗುತ್ತದೆ.

'ಆಧಾರ ಮೊದಲಾದ ಆರುಚಕ್ರ
ಶೋಧಿಸಿ ಬಿಡಬೇಕು ಈ ಕ್ಷಣ ಮೂರು
ಸಾಧಿಸಿ ಸುಷುಮ್ನ ಏರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನ್ನ ಸೇರು' ।।೧।।

ಎಂದು ಹೇಳುತ್ತಾರೆ. ಮುಂದಿನ ನುಡಿಯಲ್ಲಿ

'ಎವೆ ಹಾಕದೆ ಮೇಲೆ ನೋಡು ಮುಂದೆ
ತವಕದಿಂದಲಿ ವಾಯುಬಂಧನ ಮಾಡು
ಸವಿದು ನಾಮವ ಪಾನಮಾಡು ಅಲ್ಲಿ
ನವ ವಿಧ ಭಕ್ತಿಲಿ ನೀ ನಲಿದಾಡು' ।।೨।।

ಎನ್ನುತ್ತಾರೆ. ಮೊದಲ ನುಡಿಯಲ್ಲಿ ಯೋಗಸಾಧನದ ಹೆಜ್ಜೆಗಳನ್ನು ಗುರುತಿಸಿ ಪರಬ್ರಹ್ಮನನ್ನು ಸೇರು ಎಂದ ಪುರಂದರದಾಸರು ಎರಡನೆಯ ನುಡಿಯಲ್ಲಿ ವಾಸ್ತವವಾಗಿ ಆ ಹೆಜ್ಜೆಗಳಲ್ಲಿ ದೊರೆಯುವ ಅನುಭವಗಳನ್ನು ಹಾಗೂ ಪರಬ್ರಹ್ಮನನ್ನು ಸೇರಿದ ಮೇಲೆ ದೊರೆಯುವ ಬ್ರಹ್ಮಾನಂದದ ಸುಖವನ್ನು ಹೇಳಬೇಕಾಗಿತ್ತು. ಆದರೆ ಧ್ಯಾನದ ರೀತಿಯನ್ನು ಹೇಳುತ್ತ, ಪರಮಾತ್ಮನನ್ನು ಕಂಡ

ಅಥವಾ ಸೇರಿದ ಬ್ರಹ್ಮಾನಂದವನ್ನು ಹೇಳದೆ. ಅವನ 'ನಾಮವ ಪಾನ ಮಾಡು ಅಲ್ಲಿ ನವವಿಧ ಭಕ್ತಿಲಿ ನೀ ನಲಿದಾಡು' ಎಂದು ಬಿಡುತ್ತಾರೆ. ಮತ್ತೆ ಕೊನೆಯ ನುಡಿಯಲ್ಲಿ

'ಅಂಡದೊಳಗೆ ಆಡುತಾನೆ ಭಾನು
ಮಂಡಲ ನಾರಾಯಣ ನೆಂಬುವನೆ
ಕುಂಡಲಿ ತುದಿಯೊಳಿದ್ದಾನೆ
ನಮ್ಮ ಪುರಂದರ ವಿಠಲನು ಪಾಲಿಸುತಾನೆ ।।೩।।

ಎಂದು ಕುಂಡಲಿನಿಯು ಜಾಗ್ರತವಾದ ಹಾಗೂ ಸಹಸ್ರಾರದಲ್ಲಿ ಕಾಣುವ ನಾರಾಯಣನನ್ನು ಗುರುತಿಸಿ, ಆ ಪುರಂದರ ವಿಠಲನು ನಮ್ಮನ್ನು ಪಾಲಿಸುತ್ತಾನೆ ಎಂದು ತಾವು ಹೊರಗೆ ನಿಂತು ಹೇಳಿದಂತೆ ಹೇಳುತ್ತಾರೆ. ಬ್ರಹ್ಮಾನಂದವೆಂದರೆ ಅದ್ವೈತ ಭಾವವೆಂದೇನೂ ಅಲ್ಲ. ಬಿಂಬರೂಪೀ ಪರಮಾತ್ಮನನ್ನು ಕಂಡಾಗ ಆಗುವ ಆನಂದವು ಕೂಡ ಬ್ರಹ್ಮಾನಂದವೆನಿಸುತ್ತದೆ. ಇಂಥ ಒಂದು ಸಂದರ್ಭದಲ್ಲಿ ಮಹಿಪತಿರಾಯರು ತಮ್ಮ ಅನುಭವಗಳನ್ನು ಹೇಳಿದ್ದನ್ನು ಗಮನಿಸಬೇಕು.

'ಲೇಸು ಲೇಸಾಯಿತು ಭಾಸ್ಕರ ಗುರುಕೃಪೆ ಲೇಸ ಲೇಸಾಯಿತುವಮಾ'।। ಎಂಬ ಕೀರ್ತನೆಯಲ್ಲಿ (ಕೀ - ೪೮೬) ಮೊದಲು ಮನ ಸ್ವಸ್ತವಾದುದನ್ನು ಹೇಳಿ 'ವಿಸ್ತಾರವಾದ ವಸ್ತು ಇದೆಯೆಂದು ವಿಸ್ತರಿಸೆನಗಿನ್ನುದೋರಿತು' ಎಂದು ಹೇಳುತ್ತಾರೆ. ಅನಂತರ ಅದು ಕೊಟ್ಟ ಸವಿಸುಖವನ್ನು ಹೇಳಿ ಅದುವೆ 'ಸಕಲೋತ್ತಮನಾದ ಏಕಾಕ್ಷರ ಬ್ರಹ್ಮ ಏಕೋಮಯವಾಗಿದೋರಿತು' ಎಂದು ಹೇಳುತ್ತಾರೆ. ಕೊನೆಯಲ್ಲಿ ಬ್ರಹ್ಮಸಾಕ್ಷಾತ್ಕಾರದ ಅಂತಿಮ ಭಾವ 'ಕೂಡಿತು ಸಮರಸವಾಗಿ ಮಹಿಪತಿ ಜೀವ ಒಡೆಯನ ಚರಣದಂಗುಷ್ಠದಲಿ' ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಇದು ದ್ವೈತಭಾವದ ಬ್ರಹ್ಮಾನಂದದ ಸುಖ ಎಂದು ಬೇರೆ ಹೇಳಬೇಕಾಗಿಲ್ಲ.

ಪುರಂದರದಾಸರ 'ಕಣ್ಣಾರೆ ಕಂಡೆ ಅಚ್ಯುತನ ಕಂಚಿ। ಪುಣ್ಯಕೋಟಿ ಕರಿರಾಜವರದನ।।' ಎಂಬ ಕೀರ್ತನೆಯಲ್ಲಿ, //೧೩// 'ಭಾನುಕೋಟಿ ತೇಜದವನ। ಭವಕಾನನಕೆ ವೀಪ್ತ ಹವ್ಯವಾಹನನ। ದಾನವರೆದೆ ದಲ್ಲಣನ ಮುನಿ। ಮಾನಸ ಹಂಸಯೆಂದೆನಿಸಿ ಮೆರೆವನ' ಎಂಬ ಸಾಲುಗಳಲ್ಲಿ ಹಾಗೂ 'ಲಗ್ಗೆಯೇ ವೈಕುಂಠಕೆ ಲಗ್ಗೆಯೇ' ಎಂಬ ಕೀರ್ತನೆಯಲ್ಲಿ //೧೪// 'ಭ್ರೂಮಧ್ಯದೆಡೆಯೊಳು ನಾಸಿಕಾಗ್ರದೊಳು। ನೇಮದಿಂದ ದೃಷ್ಟಿಯ ನಿಲ್ಲಿಸಿ' ಎಂಬ ಸಾಲುಗಳಲ್ಲಿ ಯೋಗಸಾಧನ ಮಾರ್ಗದ ಪ್ರಕಾಶ, ಏಕಾಗ್ರತೆ ಹಾಗು ಸಾಕ್ಷಾತ್ಕಾರದ ಕಿಂಚಿತ್ ದರ್ಶನವನ್ನು ಕಾಣಬಹುದಾಗಿದೆ. ಆದರೆ ಮಹಿಪತಿರಾಯರ ಇಂಥ ಅನುಭವದ ಪದಗಳು ಸ್ಪಷ್ಟವಾಗಿವೆ. ನಾನಾವಿಧವಾದ ಪ್ರಕಾಶವನ್ನು ಕಂಡ, ನಾದವನ್ನು ಕೇಳಿದ ಅವರ ಅನುಭವದ ಅನೇಕ ಕೃತಿಗಳನ್ನು ಈ ಮೊದಲೇ ಉಲ್ಲೇಖಿಸಲಾಗಿದೆ.

'ಬ್ರಹ್ಮಾನಂದದ ಸಭೆಯೊಳಗಲ್ಲಿ
ಸುಮ್ಮನೆ ಇರುತಿಹದೇನಯ್ಯ'

ಎಂಬ ಕೀರ್ತನೆಯಲ್ಲಿ //೧೫// ಪುರಂದರದಾಸರು ಗೂಢ ಆಧ್ಯಾತ್ಮಿಕ ಅನುಭವದ ವರ್ಣನೆಯನ್ನು ತುಸು ಮಾಡಿದ್ದಾರೆ. ಪರಮಾತ್ಮನ ಸನ್ನಿಧಿಯ ಬ್ರಹ್ಮಾನಂದದಲ್ಲಿ ಶಾಂತವಾಗಿರುವ ಆತ್ಮನ ವರ್ಣನೆ 'ಮಾಡದು ಕೂಡದು ಉಣ್ಣದು ಮಾಣದು। ಕಾಡದು ಬೇಡದು ಕಂಗೆಡದು' ಎಂದು ಊಹಿಸಿಕೊಂಡರೂ, ಇಂಥ ಸಂಕೀರ್ಣ ಅನುಭವಗಳನ್ನು ಹೇಳುವಾಗಲೂ ಕೊನೆಗೆ ಅವರು 'ಬಲ್ಲಿದ ನಮ್ಮ ಪುರಂದರ ವಿಠಲ। ಗಲ್ಲದೆ ತಿಳಿಯದು ಜಗದೊಳಗೆ' ಎಂದು ಬಿಡುತ್ತಾರೆ. ಪರಮಾತ್ಮನ ಅನುಭವವು ನಮ್ಮ ತಿಳುವಳಿಕೆಗೆ ಅತೀತವಾದದ್ದು ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಆದರೆ ಮಹಿಪತಿರಾಯರು

'ಕಣ್ಣಾರೆ ಕಂಡೆವು ಚಿನ್ಮಯದ ರೂಪ ಕಣ್ಣಾರೆ ಕಂಡೆವು ಮಾ।
ಕಣ್ಣೊಳಗಿಹುದು ಕಾಣಿಸಿಕೊಳ್ಳದು ಕಣ್ಣಿಗೆ ಕಣ್ಣಾಗಿ ದೋರುದು ಮಾ।
ಕಣ್ಣಿನೊಳಗಿನ್ನು ಕಣ್ಣಾರೆ ಕಾಣುವ ಜಾಣರಿಗೆ ಪೂರ್ಣಗೈಸುವದು ಮಾ।
ಆಡುತ ಮಾಡುತ ಅಡಗುತಲಿಹುದು ಗೂಢಗುಹ್ಯವಾಗಿ ದೋರದು ಮಾ।
ನೋಡೇನೆಂದರ ತನ್ನ ಗೂಡಿನೊಳಗದೆ ಹಿಡದೇನೆಂದರೆ ಕೈಗೂಡದು ಮಾ।
ಉತ್ತಮರೊಳಗೆ ಅತ್ಯಂತವಾಗಿನ್ನು ಅತ್ತಿತ್ತಲಾಗದೆ ಇಹುದು ಮಾ।
ನಿತ್ಯನಿಜವಾದ ವಸ್ತುಮಹಿಪತಿ ಹೃತ್ಕಮಲದೊಳು ಕಂಡೆನು ಮಾ।

(ಕೀ- ೧೩೪)

ಹೀಗೆ ಕಣ್ಣಿಗೆ ಕಂಡದ್ದನ್ನು ನಮ್ಮ ಮುಂದೆ ಇರಿಸುತ್ತಾರೆ. ಗೂಢಗುಹ್ಯವಾಗಿರುವ ವಸ್ತು ಯಾವುದು? ಅದು ಹೇಗೆ ಕಾಣುತ್ತದೆ. ಅದರ ಪರಿಯನ್ನು ಇಷ್ಟು ಸ್ಪಷ್ಟವಾಗಿ ಉಲ್ಲೇಖಿಸಿದ್ದನ್ನು ಬೇರೆಡೆ ಕಾಣುವುದು ಅಪರೂಪ ಎನಬಹುದು. ಇಲ್ಲಿ ರಾಯರು ತಮ್ಮ ಹೃತ್ಕಮಲದಲ್ಲಿ ಕಂಡ ನಿತ್ಯ ನಿಜವಾದ ವಸ್ತು ಮಹಿಪತಿಯು ಬಿಂಬರೂಪಿ ಪರಮಾತ್ಮನೆಂದು ಬೇರೆ ಹೇಳಬೇಕಾಗಿಲ್ಲ.

ಕನಕದಾಸರು ಕೂಡ ಈ ಯೋಗ ಸಾಧನ ಮಾರ್ಗವು ಅತಿ ಗಹನವಾದದ್ದೆಂದೂ, ಇದನ್ನು ಎಲ್ಲರೂ ಅರಿಯರು ಎಂಬುದನ್ನು ಹೇಳುತ್ತಾರೆ. 'ಬಲ್ಲವರಿನಿಬರು ಎಲ್ಲಾರು ಅರಿಯರು ಫುಲ್ಲಲೋಚನನೆಂಬುದನು' ಎಂದು ಹೇಳುತ್ತ ಇದನ್ನು ಬಲ್ಲ ವೇದ-ಪುರಾಣಕಾಲಗಳ ವ್ಯಕ್ತಿಗಳ ಪಟ್ಟಿಯನ್ನು ಕೊಡುತ್ತಾರೆ. //೧೬// ಪುರಂದರ ದಾಸರಂತೆ ಅವರು ಕೂಡ ಅಲ್ಲಲ್ಲಿ ತಮ್ಮ ಕೃತಿಗಳಲ್ಲಿ ಯೋಗಸಾಧನ ಮಾರ್ಗದ ಪರಿಚಯವನ್ನು ಮಾಡಿಕೊಡುತ್ತಾರೆ.

'ದಾಸನಾಗಬೇಕು ಸದಾಶಿವನ ದಾಸನಾಗಬೇಕು
ದಾಸನಾಗಬೇಕು ಕ್ಲೇಶಪಂಚಕವಳಿದು
ಆಸೆಯಲ್ಲಿ ಮನ ಸೂಸದೆ ಸರ್ವದಾ'

ಎಂಬ ಕೀರ್ತನೆಯಲಿ

'ಆರು ಚಕ್ರದಿ ಮೆರೆವ - ಅಖಂಡನ
ಮೂರು ಗುಣವ ತಿಳಿದು'

ಎಂಬುದಾಗಿ ಆರು ಚಕ್ರಗಳ ವಿಷಯವನ್ನು ಹೇಳುತ್ತಾರೆ. ಆದರೆ ಅಲ್ಲಿಯೂ 'ಆರು ಮೂರು ಹದಿನಾರು ತತ್ವವ ಮೀರಿ। ತೋರುವ ಕಾಗಿನೆಲೆಯಾದಿಕೇಶವನಡಿ' ಎಂದು, ಪರಮಾತ್ಮನು ಅದೆಲ್ಲವನ್ನೂ ಮೀರಿ ಇರುವನೆಂಬುದಾಗಿ ಹೇಳುತ್ತಾರೆ. //೧೭//

'ಇಷ್ಟು ದಿನ ವೈಕುಂಠ। ಎಷ್ಟು ದೂರವೋ ಎನುತಲಿದ್ದೆ। ದೃಷ್ಟಿಯಿಂದಲೀ ನಾನು ಕಂಡೆ। ಸೃಷ್ಟಿಗೀಶನೇ ಶ್ರೀರಂಗಶಾಯಿ' ಎಂಬ ಕೀರ್ತನೆಯಲ್ಲಿ ಅವರು ಪಡೆದ ದೃಷ್ಟಾಂತದ ಚಿತ್ರಗಳನ್ನು ಕೊಡುತ್ತಾರೆ. ಅಲ್ಲಿ 'ವನ ಗೋಪುರಗಳು, ಘನ ಸರೋವರಗಳು, ಕನಕ ಗೋಪುರಗಳು' ಅವರಿಗೆ ಕಾಣಸುತ್ತವೆ. ಮುನಿಗಳು, ತುಂಬುರರು, ನಾರದರು ಎಲ್ಲರೂ ಅಲ್ಲಿರುತ್ತಾರೆ. ಈ ಎಲ್ಲ ಪರಿವಾರ ದೇವತೆಗಳ ಮಧ್ಯ ಅವರು 'ರಂಗಶಾಯೀ ಕಾಗಿನೆಲೆಯಾದಿ ಕೇಶವನನ್ನು' ಕಾಣುತ್ತಾರೆ.//೧೮// ಇಲ್ಲಿ ಅನುಭವದ ವೈಶಿಷ್ಟ್ಯ ಕಂಡರೂ 'ತಾರತಮ್ಯ'ದ ಕಲ್ಪನೆಯೇ ಮೂಲವಾಗಿದೆ ಎನಿಸದಿರದು.

'ಅಂಗಳವಲ್ಲಾತ್ಮ ಯೋಗ ಸಿದ್ಧಿ
ಸೇರಿ ಸುಜ್ಞಾನದಲಿ ಸವಿದುಂಬಗಲ್ಲದೆ'

ಎಂಬ ಇನ್ನೊಂದು ಕೀರ್ತನೆಯಲ್ಲಿ ಕನಕದಾಸರು ಆತ್ಮಯೋಗದ ಉಲ್ಲೇಖವನ್ನು ಮಾಡುತ್ತಾರೆ. ಆದರೆ ವಿವರಗಳಿಲ್ಲ. ಕೊನೆಯ ನುಡಿಯಲ್ಲಿ

'ಅಕಾರ ಉಕಾರ ಮಕಾರ ಎಂತೆಂಬ। ಓಂಕಾರಕೆ ಕೂಡಿ ಎರಡಿಲ್ಲದ।
ಸಾಕಾರ ಕಾಗಿನೆಲೆಯಾದಿಕೇಶವನ। ಆಕಾರದೊಡನಾಡುವರಿಗಲ್ಲದೆ।

ಎಂದು ಹೇಳುತ್ತಾರೆ. //೧೯// 'ಕೂಡಿ ಎರಡಿಲ್ಲದ' ಎಂಬ ಮಾತನ್ನು ಹೇಳಿದರೂ ಸಾಕಾರ ಕಾಗಿನೆಲೆಯಾದಿಕೇಶವನ ಆಕಾರ ದೊಡನಾಡುವುದನ್ನು ಒತ್ತಿ ಹೇಳುತ್ತಾರೆ. ಯೋಗಾನುಭವಗಳನ್ನು ನಿರೂಪಿಸುವಾಗ ಅವರು ಬ್ರಹ್ಮಾನಂದವನ್ನು ಹೇಳದೆ ಆಕಾರದೊಡನೆ ಆಡುವುದನ್ನು ಮಾತ್ರ ಹೇಳುತ್ತಾರೆ.

'ಎಲ್ಲಿ ನೋಡಿದರಲ್ಲಿ ರಾಮ ಇದ
ಬಲ್ಲ ಜಾಣರು ದೇಹದಲ್ಲಿ ನೋಡಣ್ಣ

ಎಂಬ ಕೀರ್ತನೆಯಲ್ಲಿ

'ಕಣ್ಣೇ ಕಾಮನ ಬೀಜ ಈ
ಕಣ್ಣಿಂದಲೇ ನೋಡು ಮೋಕ್ಷಸಾಮ್ರಾಜ್ಯ
ಕಣ್ಣಿನ ಮೂರುತಿ ಬಗಿದು
ಒಳಗಣ್ಣಿಂದಲೆ ದೇವನ ನೋಡಣ್ಣ

ಎಂದು ಒಳಗಣ್ಣಿನಿಂದ ಅಂದರೆ ಧ್ಯಾನದಿಂದ ಅಂತರಂಗದಲ್ಲಿ ಪರಮಾತ್ಮನನ್ನು ಕಾಣಲು ಹೇಳುತ್ತಾರೆ. //೨೦// ಮುಂದೆ ಶ್ವಾಸಬಂಧನದಿಂದ, ಕುಂಭಕದ ಅನುಭವ ಪಡೆದು, ನಾಸಾಗ್ರದಲ್ಲಿ ಪರಮಾತ್ಮನ ಶಕ್ತಿಯ ಲೀಲಾವಿಲಾಸದ ಅನುಭವವನ್ನು

ಪಡೆಯುವುದು ಮತ್ತು ಒಳಗಿವಿಯಲ್ಲಿ ನಾದವನ್ನು ಕೇಳುವ ರೀತಿಯನ್ನು ಸರಳ ಸುಂದರವಾಗಿ ನಿರೂಪಿಸುತ್ತಾರೆ.

'ಕಿವಿಯೇ ಕರ್ಮಕೆ ದ್ವಾರ ಈ
ಕಿವಿಯಿಂದಲೇ ಕೇಳೋ ಮೋಕ್ಷಸಾರ
ಕಿವಿಯೇ ಕರ್ಮಕುಠಾರ ಒಳ
ಗಿವಿಯಲ್ಲಿ ಕಾಣೋ ನಾದದ ಬೇರ'

ಎಂದು ಹೇಳುತ್ತ ಯೋಗಾನುಭವವನ್ನು ಪಡೆಯುವ ರೀತಿಯನ್ನು ಸೂಚ್ಯವಾಗಿ ಆದರೂ ನಿರ್ದಿಷ್ಟವಾಗಿ ಹೇಳಿ ಕೊನೆಗೆ 'ನಾದಾದಿ ದೈವಗಳೆಲ್ಲ ನಮ್ಮ ಬಡದಾದಿ ಕೇಶವನೊಬ್ಬನೆ ಬಲ್ಲ' ಎಂದು ಹೇಳಿ ಮುಗಿಸಿಬಿಡುತ್ತಾರೆ.

ಇಂಥ ಸಂದರ್ಭಗಳಲ್ಲಿ ಮಹಿಪತಿರಾಯರ ಅನುಭವಗಳು ನೇರವಾಗಿವೆ ಮತ್ತು ಸ್ಪಷ್ಟವಾಗಿವೆ ಅವರು ತಮ್ಮ ಗುರುಗಳಾದ ಭಾಸ್ಕರ ಸ್ವಾಮಿಗಳ ಸ್ಪರ್ಶ ಮಾತ್ರದಿಂದಲೇ ಪಡೆದ ಅನುಭವವನ್ನು ನೋಡಬಹುದು.

'ಅರ್ಕಮಂಡಲಗಳು ರವಿಶಶಿಕಿರಣವು
ಓಂಕಾರ ಮೊದಲಾದ ದ್ವಾದಶನಾದದಾ ಭೇದದ ಘೋಷ
ಚಿನ್ಮಯ ಚಿದ್ರೂಪಕಂಡು ಬೆರಗಾಗಿ ಮನ ಭ್ರಾಂತಿ ಅಜ್ಞಾನವಸು
ಜರಿಯಲೆನ್ನ। ಏಕೋದೇವ ಈತ... ..... (ಕೀ-೮೮)

ಅನುಭವಗಳು ಇಲ್ಲಿ ಸ್ಪಷ್ಟವಾಗಿವೆ. ಸಚಿತ್ರವಾಗಿವೆ. ಪ್ರಕಾಶ, ನಾದ ಚಿನ್ಮಯ ಚಿದ್ರೂಪಮಯವಾದ ಪರಮಾತ್ಮನ ಸಾಕ್ಷಾತ್ಕಾರವು ಸುಸ್ಪಷ್ಟವಾಗಿ ನಿರೂಪಿತವಾಗಿದೆ. ಅದರಂತೆ,

'ಮನಸಿಗೆ ಮನ ಹಚ್ಚಿ ಮನೋನ್ಮನ ಮಾಡಿ
ಘನಸುಖದೊಳು ಬೆರದಾಡಿ ಅನುಭವಿಸಿ ನೋಡಿ' (ಕೀ-೨)

'ದೂರಿಲ್ಲ ದೂರಿಲ್ಲ ತಿಳಕೊಳ್ಳಿ ಪೂರ್ಣ ಅರಿತು ಬ್ಯಾಗ
ತಿರುಗಿ ನೋಡಲು ತನ್ನೊಳು ದೋರುತಿದೆ ಬ್ರಹ್ಮಭೋಗ
ಸಾರವೇ ಸುಖಗರುವತದೆ ನೋಡಿರೋ ರಾಜಯೋಗ
ಪರದೆ ಇಲ್ಲದೆ ಗುರುತುದೋರುವಾ ನೋಡಿ ಕಣ್ಣಾರೆ ಈಗ' (ಕೀ-೨೬)

ಎಂಬ ಪದಗಳಲ್ಲಿ ಅನುಭವಗಳು ಸ್ಪಷ್ಟವಾಗಿವೆ. 'ಘನ ಸುಖದೊಳು ಬೆರೆದಾಡುವುದು' 'ಬ್ರಹ್ಮಭೋಗ' 'ಸಾರಸುಖ' ಹಾಗೂ ಪರದೆ ಇಲ್ಲದೆ ಗುರುತು ತೋರುವ' ಅನುಭವಗಳು ಸ್ಪಷ್ಟವಾಗಿವೆ ಮತ್ತು ವಿಶಿಷ್ಟವಾಗಿವೆ.

ಇದೇ ಇದೇ ಬ್ರಹ್ಮಮಯ ಸದಮಲಾನಂದೋದಯ
ಉದಿಯಾಸ್ತಮಾನವಿಲ್ಲದೆ ಸದೋದಿತ ಭಾಸುತಿದೆ' (ಕೀ-೩೫)

ಎಂಬಂಥ ಸಾಲುಗಳಿಗೆ ವಿವರಣೆಯ ಅಗತ್ಯವೂ ಕಂಡು ಬರುವದಿಲ್ಲ.

ಆಧ್ಯಾತ್ಮದ ಅನುಭವಗಳು ಎಲ್ಲರಿಗೂ ಒಂದೇ ರೀತಿಯಾಗಿ ಬರಬೇಕೆಂಬ ನಿಯಮವೇನೂ ಇಲ್ಲ. ಅದು ಸಾಧಕನು ಅನುಸರಿಸಿದ ಸಾಧನ ಮಾರ್ಗವನ್ನು ಅವಲಂಬಿಸಿರುತ್ತದೆ. ಬೇರೆ ಬೇರೆ ಸಾಧನ ಮಾರ್ಗಗಳನ್ನು ಅನುಸರಿಸಿ ಆಯಾ ಮಾರ್ಗದಲ್ಲಿಯೇ ಅನುಭವಗಳನ್ನು ಪಡೆಯಬಹುದು. ಒಬ್ಬನೇ ಸಾಧಕನು ಅನೇಕ ಪ್ರಕಾರದ ಅನುಭವಗಳನ್ನು ಪಡೆಯುವ ಸಾಧ್ಯತೆಗಳೂ ಇವೆ. ಸಾಧಕನಿಗೆ ಬರಬಹುದಾದ ವಿವಿಧ ಅನುಭವಗಳನ್ನು ಸ್ವಾಮಿ ಮುಕ್ತಾನಂದರು ತಮ್ಮ 'ಚಿತ್‌ಶಕ್ತಿವಿಲಾಸ' ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ.

"ದೀಕ್ಷೆಯ ಫಲವು ಬೇರೆ ಬೇರೆ ಜನರಲ್ಲಿ ಬೇರೆ ಬೇರೆ ರೀತಿಯಿಂದ ಪ್ರಕಟವಾಗುತ್ತಿರುವುದರಿಂದ ಶಾಸ್ತ್ರಗಳಲ್ಲಿ ಅವುಗಳಿಗೆ, ಕ್ರಿಯಾವತಿ, ಕಲಾವತಿ, ವರ್ಣಮಯಿ ಮತ್ತು ವೇಧಮಯಿ ಅಥವಾ ಜ್ಞಾನಮಯಿ ದೀಕ್ಷೆಗಳೆಂಬ ಹೆಸರು ಕೊಡಲಾಗಿದೆ. ಕ್ರಿಯಾವತಿ ದೀಕ್ಷೆಯಾದೊಡನೆ ಸಾಧಕನಿಗೆ ಯೋಗಾಸನ ಪ್ರಾಣಾಯಾಮ. ಬಂಧಮುದ್ರೆ, ಕುಂಭಕ ಇತ್ಯಾದಿ ಯೌಗಿಕ ಪ್ರಕ್ರಿಯೆಗಳು ತಾವಾಗಿಯೇ ಸಂಭವಿಸುವವು. ಕಲಾವತೀ ದೀಕ್ಷೆಯಲ್ಲಿ ಅವನಿಗೆ ಜ್ಯೋತಿದರ್ಶನ, ನಾದಶ್ರವಣ ದಿವ್ಯಗಂಧವಾಸನೆ ರಸಶಬ್ದ ಸ್ಪರ್ಶ ರೂಪಗಳ ಅನುಭವಗಳು ಆಗುತ್ತವೆ. ಒಮ್ಮೊಮ್ಮೆ ಅವನಿಗೆ ದೇವ ದೇವತೆಗಳ ದರ್ಶನಲಾಭವೂ ಆಗುವದು. ವರ್ಣಮಯೀ ದೀಕ್ಷೆಯಲ್ಲಿ ಕಾವ್ಯಗಳು, ಮಂತ್ರಗಳು ಸ್ಫುರಿಸ ಹತ್ತುವವು. ವೇಧಮಯಿಯಲ್ಲಿ ಸುಷುಮ್ನಾ ನಾಡಿಯಲ್ಲಿ ಚಕ್ರವೇಧದ ಅನುಭವವಾಗುವುದು ಜ್ಞಾನಮಯಿ ದೀಕ್ಷೆಯಲ್ಲಿ ಅವನ ಅಂತರಂಗದಲ್ಲಿ ಜ್ಞಾನೋದಯವಾಗುವದು. ಕೆಲವು ಸಾಧಕರಿಗೆ ಈ ಎಲ್ಲವುಗಳ ಸಮ್ಮಿಶ್ರ ಅನುಭವವಾಗುವದು" //೨೦//

ಮಹಿಪತಿರಾಯರಿಗೆ ಇಂಥ ಸಮ್ಮಿಶ್ರ ಅನುಭವಗಳು ಉಂಟಾಗಿರಬಹುದೆಂದು ಅವರ ಕೃತಿಗಳಿಂದ ಊಹಿಸಬಹುದಾಗಿದೆ. ಅಂತೆಯೇ ಅವರ ಆಧ್ಯಾತ್ಮಿಕ ಅನುಭವಗಳು ವಿಶಿಷ್ಟವಾಗಿವೆ ಮತ್ತು ವೈವಿಧ್ಯಮಯವಾಗಿವೆ.

### ೬.೫ ಸುಪಥ ದರ್ಶನ

'ಉದ್ಧಾರೇದಾತ್ಮನಾತ್ಮನಂ' ಎಂಬಂತೆ ಪ್ರತಿಯೊಬ್ಬನು ಮೊದಲು 'ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕು'. ತನ್ನನ್ನು ತಾನು ತಿಳಿದುಕೊಂಡಮೇಲೆ ಅದರಿಂದಾಗುವ ಸ್ವಾಭಾವಿಕ ಪರಿಣಾಮಗಳೇ ಲೋಕೋದ್ಧಾರ, ಲೋಕ ಸಂಗ್ರಹ, ಲೋಕ ನೀತಿ ಹಾಗೂ ಸರ್ವಭೂತಹಿತ. ಸುಂದರವಾಗಿ ಅರಳಿದ ಹೂವಿಗೆ ಸುವಾಸನೆಯನ್ನು ಬೀರಲು ಯಾರೂ ಹೇಳುವುದಿಲ್ಲ. ಅದರಂತೆ ಬೆಳಗುವ ಜ್ಯೋತಿಗೆ ಸುತ್ತಲಿನ ಕತ್ತಲನ್ನು ಕಳೆಯಲು ಅಥವಾ ಸುತ್ತಲೂ ಬೆಳಕು ಬೀರಲು ಯಾರೂ ಬಿನ್ನವಿಸಬೇಕಾಗುವುದಿಲ್ಲ. ಅದು ಅವುಗಳ ಗುಣಧರ್ಮ. ಹೂವು ವಿತರಿಸುವ

ಸುವಾಸನೆಗೆ, ಜ್ಯೋತಿ ಬೀರುವ ಬೆಳಕಿಗೆ ವಿಧಿ ನಿಷೇಧಗಳಾಗಲಿ, ಕಟ್ಟು ಪಾಡುಗಳಾಗಲಿ ಇರುವುದಿಲ್ಲ. ಬೇಕಾದರೆ ಪಡೆಯಬಹುದು. ಇಲ್ಲವಾದರೆ ಬಿಡಬಹುದು. ಆದರೆ ಅವುಗಳು ತಮ್ಮ ಕೆಲಸವನ್ನು ಮಾಡುತ್ತಲೇ ಇರುತ್ತವೆ. ಅದರಂತೆ ಮಹಾನುಭಾವರ, ಸತ್ಪುರುಷರ, ಸಂತರ ಹಾಗೂ ಹರಿದಾಸರ ಕೆಲಸ. ತಾವು ಕಂಡು ಉಂಡ ನಿತ್ಯ ಸತ್ಯವನ್ನು ಬಿತ್ತರಿಸುತ್ತಾರೆ. ಕೆಟ್ಟ ಮಾರ್ಗವನ್ನು ತೊರೆದು ಸನ್ಮಾರ್ಗದಿಂದ ಸದ್ಗತಿ ಪಡೆಯಿರಿ. ಎಂದು ಅವರು ಹೇಳುತ್ತಾರೆ. ಅದಕ್ಕೆ ಜಾತಿ, ಮತ, ಪಂಥಗಳ ಕಟ್ಟುಪಾಡುಗಳನ್ನು ವಿಧಿಸುವುದಿಲ್ಲ. ಮಾನವ ಕುಲ ಒಂದೇ, ಎಲ್ಲ ಮಾನವರೂ ಉದ್ಧಾರವಾಗಬೇಕೆಂಬುದೇ ಅವರ ಹಂಬಲಲಾಗಿರುತ್ತದೆ. ಅಂತೆಯೇ "ಮತವನ್ನು ಮೀರಿದ ನೀತಿ, ಧರ್ಮ ಮಾನವ ಮೌಲ್ಯಗಳು ಇವನ್ನು ದಾಸರು ಅರಿತವರಾಗಿದ್ದರು. ಇದಕ್ಕೆ ಹೆಚ್ಚಿನ ಬೆಲೆ ಕೊಡುವವರಾಗಿದ್ದರು. ಇವಿಲ್ಲದ ತಮ್ಮ ಮತವೇ ಇರಲಿ ಅದನ್ನು ಅವರು ಒಪ್ಪಿಕೊಳ್ಳುತ್ತಿರಲಿಲ್ಲ ಆದ್ದರಿಂದಲೇ ದಾಸಸಾಹಿತ್ಯಕ್ಕೆ ಸರ್ವ ಮಾನ್ಯತೆ ದೊರೆಯಿತು.' ಎಂದು ಡಾ. ರಂ. ಶ್ರೀ. ಮುಗಳಿ ಅವರು ಹೇಳಿದರು. //೨೨//

ಹರಿದಾಸರು ಒಂದು ಸ್ಥಳದಲ್ಲಿ ನಿಲ್ಲುವವರಲ್ಲ. ತಾವು ಕಂಡ ನಿತ್ಯ ಸತ್ಯವನ್ನು, ಹರಿಗುಣಗಾನ ಮಾಡುತ್ತ ತೀರ್ಥ ಕ್ಷೇತ್ರಗಳನ್ನು ಸುತ್ತುತ್ತಿದ್ದರು. ಅದರಿಂದಾಗಿ ಜನಸಾಮಾನ್ಯರ ಸಂಪರ್ಕ ಅವರಿಗೆ ಬರುತ್ತಿತ್ತು. ಆಗ ಲೋಕದಲ್ಲಿ ಕಂಡುಬರುವ ಡೊಂಕುಗಳ ಕುರಿತು ತಿಳಿಸಿ ಹೇಳುತ್ತಿದ್ದರು. ಕಣ್ಣಿಗೆ ಕಂಡ ವಿಷಯಗಳನ್ನೇ, ಹರಿಸ್ತುತಿಗೆ, ಜೀವನ ಸಾರ್ಥಕತೆಗೆ ಬಳಸಿಕೊಂಡು ಕೀರ್ತನೆಗಳನ್ನು ಹಾಡಿದ ಅನೇಕ ಸಂದರ್ಭಗಳುಂಟು. ಪುರಂದರದಾಸರಂತೂ ದಿನನಿತ್ಯದ ಅನೇಕ ಘಟನೆಗಳಿಗೆ ಪಾರಮಾರ್ಥಿಕ ತಿರುವನ್ನು ಕೊಟ್ಟು ಭಕ್ತಿಯ ಪಥವನ್ನು ತೋರಿದ್ದಾರೆ. ಕಾಗದ ಹಂಚುವದನ್ನು ಕಂಡಾಗ 'ಕಾಗದ ಬಂದಿದೆ ... ... ನಮ್ಮ ಪದುಮನಾಭ ತಾನೆ ಬರೆದ' ಎಂದೋ, ಡಂಗುರ ಸಾರುವುದನ್ನು ಕೇಳಿದಾಗ 'ಡಂಗುರವ ಸಾರಿ ಹರಿಯ ಡಿಂಗರಿಗರೆಲ್ಲ' ಎಂದೋ, ಕಾಗೆ-ಕೋಳಿಗಳ ಕೂಗು ಕೇಳಿದಾಗ, ತಾಸು ಬಾರಿಸಿದಾಗ, ಡೊಂಕುಬಾಲದ ನಾಯಿಯನ್ನು ಕಂಡಾಗ ಅವರ ಭಕ್ತ ಚೇತನ ಜಾಗ್ರತವಾದುದನ್ನು ಕಾಣುತ್ತೇವೆ. ಇದು ಅವರವರು ನಡೆದು ಬಂದ ದಾರಿಯನ್ನು ಅವಲಂಬಿಸಿದೆ. ಪುರಂದರದಾಸರಂತೆ ಅಥವಾ ಉಳಿದ ಹರಿದಾಸರಂತೆ ಮಹಿಪತಿರಾಯರು ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿದವರಲ್ಲ. ವಿವಿಧ ದೇಶ ಕಾಲ ಜನರ ಸಂಪರ್ಕ ಕಡಿಮೆ ಎಂದೇ ಹೇಳಬೇಕು. ಅವರು ತಾವು ನೆಲೆಸಿದ್ದ ಕಾಖಂಡಿಕೆಯನ್ನು ಬಿಟ್ಟು ಕದಲಿದವರಲ್ಲ. ತಾವಾಯಿತು ತಮ್ಮ ಸಾಧನವಾಯಿತು. ಅದಕ್ಕೆ ಕಾರಣವೂ ಇದೆ. ಉಳಿದ ಹರಿದಾಸರುಗಳಂತೆ ಅಂದಿನ ವಾತಾವರಣದಲ್ಲಿ ಸ್ವತಂತ್ರವಾಗಿ ತಿರುಗಾಡುವ ಸಾಧ್ಯತೆಗಳು ಇರಲಿಲ್ಲ. ರಕ್ಕಸಗಿ - ತಂಗಡಗಿ ಕಾಳಗದ ಅನಂತರ ಇಡೀ ಪ್ರದೇಶವೆಲ್ಲ ಮುಸ್ಲಿಮರ ಆಧಿಪತ್ಯಕ್ಕೆ ಒಳಗಾಗಿತ್ತು. ಯುದ್ಧದ ಆಘಾತದ ಗಾಯ

ಇನ್ನೂ ಆರಿರಲಿಲ್ಲ. ಆದ್ದರಿಂದ ಅವರಾಗಲೀ, ಅವರ ಸಮಕಾಲೀನರಾಗಲೀ, ತಾಳ ತಂಬೂರಿಗಳನ್ನು ಹಿಡಿದು ಊರಿಂದ ಊರಿಗೆ ಅಲೆದ ನಿದರ್ಶನಗಳು ದೊರೆಯುವುದಿಲ್ಲ. ಜೊತೆಗೆ ಮಹಿಪತಿರಾಯರು ಹಿಡಿದ ಮಾರ್ಗವು ಯೋಗಪ್ರಧಾನವಾದದ್ದು. ಅದು ಕೂಡ ಇದ್ದಲ್ಲಿಯೇ ಇರಲು ಪ್ರಚೋದಿಸಿರಬೇಕು. ಆದ್ದರಿಂದ ಉಳಿದ ಹರಿದಾಸರ ಕೃತಿಗಳಲ್ಲಿ ದೊರೆಯುವ ತೀರ್ಥಕ್ಷೇತ್ರ ಮಹಿಮೆಗಳು ರಾಯರ ಕೃತಿಗಳಲ್ಲಿ ದೊರೆಯುವುದಿಲ್ಲ. ಅದರಂತೆ ತತ್ತ್ವೋಪದೇಶ, ಲೋಕ ನೀತಿಯ ಕೃತಿಗಳೂ ಕಡಿಮೆ ಎಂದೇ ಹೇಳಬಹುದು.

ಇಂಥ ಒಂದು ಸಂದರ್ಭ ಜಯತೀರ್ಥರ ಕಾಲದಲ್ಲಿ ಬಂದುದನ್ನು ನೆನೆಸಬಹುದು. ಮಠಾಧಿಪತಿಗಳಾಗಿದ್ದ ಅವರು ತಮ್ಮ ಶಿಷ್ಯರನ್ನು ಕಾಣಲು ಕೂಡ ಹೊರಬೀಳದಂಥ ವಾತಾವರಣ ಆದಾಗಿತ್ತು. ಮಲಿಕ-ಕಾಫಿರನ ದಾಳಿಗಳು ಜಯತೀರ್ಥರನ್ನು ಯರಗೋಳದ ಗುಹೆಯಲ್ಲಿಯೇ ಕುಳ್ಳಿರುವಂತೆ ಮಾಡಿದುವು. ಅದರಿಂದ ಮಾಧ್ವರಿಗೆ ಮಹೋಪಕಾರವೇ ಆಯಿತು. ಅದು ಕಾರಣವೇ ಶ್ರೀಮಧ್ವರ ಮೂಲ ಮೂವತ್ತೇಳು ಗ್ರಂಥಗಳಿಗೆ ಜಯತೀರ್ಥರು ಟಿಪ್ಪಣಿಗಳನ್ನು ಬರೆದು ಟೀಕಾರಾಯರೆಂದು ಖ್ಯಾತರಾದರು. ಅದರಂತೆ ಮಹಿಪತಿರಾಯರು ತಾಳ-ತಂಬೂರಿ ಹಿಡಿದು ಊರೂರು ಅಲೆಯಲಿಲ್ಲ. ಅದರಿಂದ ಹಾನಿಯೂ ಆಗಲಿಲ್ಲ. ಒಂದು ಯೋಗಮಾರ್ಗದ ಸ್ವಾನುಭವ ದರ್ಶನ ಕನ್ನಡಿಗರಿಗೆ ಆಯಿತು. ಇಷ್ಟಾಗಿಯೂ ಮಹಿಪತಿರಾಯರು ಸಿದ್ಧಿಯನ್ನು ಪಡೆದ ಮೇಲೆ ಸಹಜಗುಣವಾಗಿ ಬಂದ ಅವರ ಅನೇಕ ಕೃತಿಗಳು ಅಂದಿನ ಕಾಲದ ಜನರ ನಡೆ ನುಡಿಗಳನ್ನು ಅವರನ್ನು ಎಚ್ಚರಿಸಿದ ಬಗೆಯನ್ನು, ನೀತಿ ಬೋಧೆಯನ್ನು ಹೇಳುತ್ತವೆ.

ಹರಿದಾಸರ ದೃಷ್ಟಿ ಪಾರಮಾರ್ಥದ್ದು, ಆದರೆ 'ಪರ'ಕ್ಕಾಗಿ ಇಹವನ್ನು ಅವರು ಒದೆಯಲಿಲ್ಲ. ಇಹದಲ್ಲಿದ್ದು ಪರವನ್ನು ಮರೆತರೆ ಅವರನ್ನು ಎಚ್ಚರಿಸುತ್ತಾರೆ. ಅದರಂತೆ ಕೇವಲ ಪಾರಮಾರ್ಥವನ್ನೇ ಚಿಂತಿಸುತ್ತ, ಇಹಲೋಕವನ್ನು ಕಡೆಗಣಿಸಿದರೆ ಅವರನ್ನೂ ಬಿಡುವುದಿಲ್ಲ. 'ಇಹ ಹಾಗೂ ಪರ' ಎರಡರ ಸಮನ್ವಯವನ್ನು ತಮ್ಮ ಬದುಕಿನ ಸಂದೇಶವೆಂದು ಸಾರಿದ್ದಾರೆ. ನಿತ್ಯದ ಬದುಕನ್ನೇ ಅರ್ಥ ಮಾಡಿಕೊಂಡು ಬಾಳು ಎಂದಿದ್ದಾರೆ. ಹಾಗೆ ಬದುಕಿಗೆ ಅರ್ಥ ಬರುವುದು ಭಗವಂತನ ಪ್ರಸಾದದಿಂದ. ಅವನನ್ನು ಮರೆತರೆ ಜೀವನದಲ್ಲಿ ಅರ್ಥವಿಲ್ಲ. ಆದ್ದರಿಂದ ಮಹಿಪತಿರಾಯರು ಹೇಳುತ್ತಾರೆ.

> 'ಅರಿತುಕೊಳ್ಳಿರೋ ಬ್ಯಾಗ ಹರಿಯ ನಾಮಾಮೃತ
> ದೊರಕುವುದಲ್ಲಿದು ನೋಡಿ ಸರ್ಕನೆ ಸರ್ವರಿಗೆಲ್ಲಾ' (ಕೀ-೮)

ಇದು ರಾಯರ ಸಂದೇಶದ ಧ್ರುವಪದ. ಹರಿಯ ನಾಮಾಮೃತದಿಂದ ದೊರಕುವ

ಆನಂದ, ಮೋಕ್ಷಪ್ರಾಪ್ತಿ, ಮನುಷ್ಯ ಜೀವನದ ಧ್ಯೇಯ, ನಿರರ್ಥಕವಾದ ಬದುಕಿಗೆ ಇದರಿಂದ ಬೆಲೆ ಬರುತ್ತದೆ. ಆದ್ದರಿಂದಲೇ ಈ ಮಾನವ ಜನ್ಮ ಸುಲಭವಾಗಿ ಬಂದದ್ದಲ್ಲವೆಂದೂ ಎಚ್ಚರಿಸುತ್ತಾರೆ.

'ಎಂದಿಗೆ ಬಾಹುದು ನೋಡಿ ಸಂದಿಸಿ ಮಾನವ ಜನ್ಮ
ಚಂದ ಮಾಡಿಕೊಳ್ಳಿರೋ ಬಂದ ಕೈಯಲಿ ಬ್ಯಾಗ'

ಎಂದು ಹೇಳುತ್ತಾರೆ. 'ಇರಳ್ಹಗಲ ಪೂರ್ಣ ಸುರಿವುತಿಹ ಅಮೃತ। ತರಳ ಮಹಿಪತಿ ಪ್ರಾಣ ಹೊರೆವ ಸಂಜೀವನ' ಈ ಸಂಜೀವನ ನಾಮಾಮೃತವನ್ನು ಅರಿತುಕೊಂಡು 'ಸುರಿ-ಸುರಿದು ಚಪ್ಪರಿಸಿ ಸೂರ್‍ಯಾಡಿ ಅನುದಿನ ಸೇವಿಸಬೇಕು ಆಲಸ್ಯ ಮಾಡಬ್ಯಾಡಿ' ಎಂದು ಹೇಳುತ್ತಾರೆ.

'ಹೌದು ನಾವು ಎಚ್ಚತ್ತಿದ್ದೇವೆ. ಗುರು ಕರುಣ ಕೃಪೆಯಿಂದ ಪರಮ ದಿವ್ಯಾಮೃತ ಪಾನದಿಂದ ಎಚ್ಚತ್ತಿದ್ದೇವೆ' ಆದರೆ

'ಎದ್ದಿರ್‍ಯಾ ನಿವಿನ್ನೆದ್ದಿರ್‍ಯಾ
ಶುದ್ಧಿ ಮರೆದು ಭವ ನಿದ್ರಿಯ ಗಳದಿನ್ನೆದ್ದಿರ್‍ಯಾ
ಕಾಯ ಮಂದಿರದೊಳು ಮಾಯಮುಸುಕು ತೆಗೆದು' (ಕೀ-೧೦೦)

ಹಾಗೆ ಏಳಬೇಕು. ಚನ್ನಾಗಿ ಮಲಗಿದ್ದ 'ಜನ್ಮ' ಹಾಸಿಗೆಯನ್ನು ಬಿಟ್ಟು ತನ್ನನ್ನು ತಾನು ತಿಳಿಯುವ ಹಾಗೆ ಕಣ್ಣು ತೆರೆದು ಎದ್ದಿದ್ದರೆ, ನೀವಿನ್ನು ಶುದ್ಧ ಬದ್ಧರಾಗಿ ಮನದಲ್ಲಿ 'ಇನಕೋಟಿ ತೇಜ' ನ ಕಾಣುವ ಹಾಗೆ ಕಣ್ಣು ತೆರೆದರೆ 'ದೀನ ಮಹಿಪತಿ ಸ್ವಾಮಿ'ಯು ಮನೋಹರ ಮಾಡುತಾನೆ.

ಸರಿ ಎದ್ದಿರಿ. ಎದ್ದ ಮೇಲೆ ಅಗಸನಿಗೆ ಬಟ್ಟೆಹಾಕಿ ಸ್ನಾನ ಮಾಡಬೇಕು. ಆ ಮಡಿವಾಳ ಎಂಥವನಿರಬೇಕು?

'ಜ್ಞಾನಗುರು ಶುದ್ಧ ಮಡಿವಾಳ
ಮನಮೈಲಿ ತೊಳೆವ ನಿರ್ಮಳ' (ಕೀ-೨೫೩)

ಈ ಜ್ಞಾನಗುರುವೆಂಬ ಶುದ್ಧಮಡಿವಾಳ, 'ದೃಢ ಮನದ' ಬಂಡೆಗಲ್ಲಿನ ಮೇಲೆ 'ಸುಬೋಧ' ಸಬಕಾರವನ್ನು ಹಚ್ಚಿ, 'ವಿವೇಕ' ಉದಕದಲ್ಲಿ ಸೆಳೆದು ವೇಳೆ-ವೇಳೆಗೆ ಒಗೆಯುತ್ತಾನೆ. ಉದ್ದಿ, ಒರೆಸಿ ಅಹಂಭಾವದ ಕಲೆಯನ್ನು ತೊಳೆದು ಮನ ಮೈಲಿಗೆಯನ್ನು ಹಿಡಿದು ಹಿಂಡುತ್ತಾನೆ. 'ವೈರಾಗ್ಯದ' ಬಿಸಿಲಲ್ಲಿ 'ಆಶೆ' ಎಂಬುದನ್ನು ಹಾಸಿ, ಒಣಗಿಸಿ ಹಸನಾಗಿ ಘಳಿಗಿ ಕೂಡಿಸಿ 'ಭಾಷೆ' ಕೊಡುವನು ತಾ ಘಟ್ಟಿಸಿ.

'ಶುದ್ಧ ಮಾಡಿದ ಮನ ನಿಶ್ಚಯ
ಸಿದ್ಧ ಸಾಕ್ಷಾತ್ಕಾರ ನಮ್ಮಯ್ಯ
ಸುದ್ಬೋದಿಸಿದ ಜ್ಞಾನೋದಯ
ಸದ್ಗೈಸಿದ ಮಹಿಪತಿಯ'

ಹೀಗೆ ಜ್ಞಾನಗುರು ಶುದ್ಧ ಮಡಿವಾಳನಿಂದ ಬಟ್ಟೆಗಳನ್ನು ಪಡೆದು ಸ್ನಾನಮಾಡಬೇಕು.

'ಇದೇ ನೋಡಿರೋ ಸುಸ್ನಾನ
ಸದ್ಭೋಧಲಿಹುದು ಮನಾ' (ಕೀ-೪೯)

ಜ್ಞಾನವೆಂಬ ಭಾಗೀರಥಿಯಲ್ಲಿ ಮನ ಮೈಲಿಗೆಯನ್ನು ನಾವಿ, ನಾನ್ಯ: ಮನವೆಂಬುದನ್ನು ಓದಿ ಅನುದಿನ ಅದರಲ್ಲಿ ಮುಳುಗಹಾಕಬೇಕು.

'ನಿತ್ಯ ಮಹಿಪತಿಗಿದೆ ಸುಸ್ನಾನ, ನಿತ್ಯ ಸದ್ಗುರು ನಿಜಧ್ಯಾನ
ಉತ್ತಮೋತ್ತಮವಿದೆ ಸಾಧನ ಹಿತದೋರುತಿದೆ ನಿಧಾನ'

ಇಂಥ ಸ್ನಾನ ಮಾಡಿದ ಮೇಲೆ ಇದಕ್ಕೆ ಸರಿಮಿಗಿಲಾದ 'ಮಡಿ'ಯನ್ನು ಮಾಡಬೇಕು.

'ಅರಹು ಎಂಬುದೆ ಮಡಿ ಉಡಿ
ಮರಹು ಮೈಲಿಗೆ ಮುಟ್ಟಬ್ಯಾಡಿ
ಕಾಮ ಕ್ರೋಧದ ಸ್ಪರ್ಶವ ಬ್ಯಾಡಿ
ನೇಮ ನಿತ್ಯ ಇದನೆ ಮಾಡಿ' (ಕೀ-೫೦)

ಈ ಮಡಿಯಲ್ಲಿ ಚಂಚಲೆಂಬ ಆಚಮನಮಾಡಿ, ಸಂಚಿತ ಪ್ರಾಲಬ್ಧ ಕ್ರಿಯೆಯ ಅರ್ಘ್ಯದಾನ ಕೊಟ್ಟು ಸಂಧ್ಯಾವಂದನ ಮಾಡಬೇಕು (ಕೀ- ೪೭) ಸಂಧ್ಯಾವಂದನೆಯ ಅನಂತರ ದೇವರ ಪೂಜೆಯನ್ನು 'ವ್ಯೋಮಾಕಾರಾದ ಮನೆಯಲ್ಲಿ' ಮೂರ್ತಿ ಎಂಬ ಅಮೂರ್ತಿ (ಆತ್ಮ)ಯನ್ನು ತತ್ವಜ್ಞಾನದ ಮಂಟಪದಲ್ಲಿಟ್ಟು ನಿತ್ಯ, ನಿತ್ಯ ನಿತ್ಯಾರ್ಘ್ಯದ ಗುರುದೀಪವನ್ನು ಹಚ್ಚಿ 'ಸ್ವಾನುಭವದ ಸ್ವಾದೋದಕ, ಜ್ಞಾನ ಭಾಗೀರಥಿ ಅಭಿಷೇಕ, ಮೌನ, ಮೌನ್ಯವಸ್ತ್ರಾಮೋಲಿಕಾ ಧ್ಯಾನವೆಂಬುದೇ ಸೇವೆ ಅನಕಾ'. ಬುದ್ಧಿ ಮನಗಳ ಗಂಧಾಕ್ಷತೆಯನ್ನು ಹಚ್ಚಿ ಸ್ವರೂಪ ವಾಸನೆಗಳ ಧೂಪ ದೀಪಗಳನ್ನು ಬೆಳಗಿ ಸದ್ಭಾವನೆಯ ನೈವೇದ್ಯವನ್ನು ಇಡಬೇಕು. ಅನಂತರ ಫಲತಾಂಬೂಲವೇ ಸದ್ಭಕ್ತಿ, ಮೂಲಭಿಭಾವನೆ ಮಂಗಳಾರ್ತಿ ಇದು ಬಾಲಕ ಮಹಿಪತಿಯ ನಿಜ ಪೂಜೆಯ ಸ್ಥಿತಿ, ಇದುವೆ ಕುಲಕೋಟಿಗಳನ್ನು ಉದ್ಧರಿಸುವ ಗತಿ' (ಕೀ- ೫೫)

ಇಂಥ ಪೂಜೆಯ ಅನಂತರ ದೈವಕ್ಕೆ 'ಮನವನೆ ಬತ್ತಿ ತನುವೆ ಆರತಿ ನೆನವು ತುಪ್ಪ ಮಾಡಿ ಜ್ಞಾನದೀಪ'ದ ಆರತಿಯನ್ನು ಬೆಳಗಬೇಕು (ಕೀ- ೨೩೨) ಅನಂತರದ ನಮಸ್ಕಾರ ಪ್ರದಕ್ಷಿಣೆಗಳು,

'ಬಿಡದಿಹುದೆ ಸತ್ಸಂಗಾ। ನೋಡಿ ಇದವೇ ಶಿರಸಾಷ್ಟಾಂಗಾ।
ಕಡದ್ಹೋಯಿತು ಭವ ದುಸ್ಸಂಗಾ। ದೃಢ ಮಾಡಿ ಅಂತರಂಗಾ।
ನಮ್ರತಲಿಹುದೆ ನಮನಾ। ಪ್ರೇಮಭಾವೆಂಬುದು ಪ್ರದಕ್ಷಿಣಾ।' (ಕೀ-೪೩)

'ಭಕ್ತಿ ವೈರಾಗ್ಯಗಳ ಒಲೆಹೂಡಿ ನಿತ್ಯ ಜ್ಞಾನಾಗ್ನಿಯ ಒಡಗೂಡಿ, ತತ್ವ ಪಂಚಪಾತ್ರೆಯಲ್ಲಿ ಸತ್ಯ ಸಂಕಲ್ಪದ ಅಡುಗೆಯನ್ನು ಮಾಡಿದಾಗ ಸಕಲ ಸಾಮಗ್ರಿಯು 'ಸಂಚಿತ' ಪಕ್ವ ಆಯಿತು.(ಕೀ-೪೮) ಅದನ್ನು

'ಪ್ರೇಮ ತಟ್ಟೆ ಬಟ್ಟಲು ತಳಗಿ ಕಾಮ ಕ್ರೋಧ ಸುಟ್ಟು ಬೆಳಗಿ।
ಸಾಮಸಾರ ಘೃತದೊಳು ಮುಳುಗಿ ನೇಮದಿಂದ ಬಡಸುವಾದಡಗಿ।
ಪಂಚಭಕ್ಷ ಪರಮನ್ನಾ ಮುಂಚೆ ಬಡಸುವದು ಗುರುವಚನ।
ಮುಂಚಿದೋರಿತು ಮಿಷ್ಟಾನ್ನ ಸಂಚಿತ ಪುಣ್ಯ ಸಾಧನೆ।
ತತ್ವಸಾರದೊಂದೇ ತುತ್ತು ಅತಿ ಹರುಷಗೊಂಡಿತು।
ನಿತ್ಯತೃಪ್ತ ಹೊಂದಿತು ಹಿತ ಮಹಿಪತಿಗಾಯಿತು। (ಕೀ-೪೫)

ಹೀಗೆ ಊಟಮಾಡಿದ ಮೇಲೆ 'ವಿವೇಕ ಎಂಬ ಉದಕದಿಂದ ಕೈ -ಬಾಯಿ ತೊಳೆದು 'ಭವದ' ಎಂಜಲನ್ನು ಕಳೆದರು'. ಇದು ಮಹಿಪತಿರಾಯರ ದಿನಚರಿಯಾಗಿತ್ತು. ಇದನ್ನು ಇತರರೂ ಅನುಕರಿಸುವ ಅಪೇಕ್ಷೆ ಅವರದಾಗಿತ್ತು ಆದಕ್ಕೆಂದೇ ಅವರು ಹೇಳುತ್ತಿದ್ದರು.

'ಒಳ್ಳೊಳ್ಳೆವರು ಬಂದು ಕೇಳಿರೋ ನೀವಿನ್ನು।
ತಿಳಿದುಕೊಳ್ಳಿ ಇದಕೆ ಬೀಳುವದಿಲ್ಲ ಹಣಹೊನ್ನು।
ಉಳ್ಳಬುದ್ಧಿಯಿಂದ ನೀವು ತಿಳಿದು ನೋಡಿ ಕಣ್ಣು।
ಕೊಳ್ಳಲರಿಯದವನ ಬಾಯಾಗಬೀಳೂದು ಮಣ್ಣು। (ಕೀ-೧೦)

ತಾನು ಯಾರು? ಏನು? ಎಂದು ತಿಳಿದುಕೊಳ್ಳಬೇಕು. ಆದರೆ ತಿಳಿದುಕೊಂಡಮೇಲೆ ತಿಳಿಯದ ಹಾಗೆ ಇರಬೇಕು ಎನ್ನುತ್ತಾರೆ ರಾಯರು.

'ಅರ್ತರಿಯದ್ಹಾಂಗೆ ಇರಬೇಕು ಮರ್ತದೊಳಗೆ।
ಬಲ್ಲೆನೆಂಬ ಬಡಿವಾರ ಸಲ್ಲದು ತಾ ಅಹಂಕಾರ।
ಬಲು ಸೂಕ್ಷ್ಮ ಗುರುಪಾದಾನಾರ ತಿಳಿಯಲು ವಿಚಾರ।
ನೆಲೆಯುಗೊಳಬೇಕು ತಿಳುವಂತ ಎಲಿಮರಿ ಕಾಯಂತೆ। (ಕೀ-೯)

ಪಾರಮಾರ್ಥಿಕ ವಿಚಾರವು ಬಲು ಸೂಕ್ಷ್ಮವಾಗಿದ್ದರಿಂದ ಸುಜ್ಞಾನಿಯು ಅರಿತು ಅರಿಯದ ಹಾಗೆ ಈ ಮರ್ತದಲ್ಲಿ ಇರಬೇಕು. ಎಲಿಮರೆಯ ಕಾಯಿಯಂತೆ ತನ್ನ ಗುರುತನ್ನು ತಿಳಿಯಗೊಡದೆ ಹಲವು ಮಾತಾಡದೆ, ಭಾವದೋರದೆ ಸದ್ದು ಹೇಳದೆ ನಿಜದಲ್ಲಿ ಬೆರೆತಿರಬೇಕು. ಡಂಭದ ಗುರುಗಳ ಕುರಿತು ಕೂಡ ಎಚ್ಚರಿಕೆ ವಹಿಸಲು ಹೇಳುತ್ತಾರೆ.

'ಗುರುಗಳುಂಟು ಮನೆ ಮನೆ ಬಹಳ
ಬ್ಯಾರೆ ಬ್ಯಾರೆ ಮಾಡುತ ತಮ್ಮ ಮ್ಯಾಳ।
ದೋರುತಿಹರು ಮೋಹಿಸುವ ವಾಗ್ಜಾಲ।
ಸರಿ ತಮಗಾರಿಲ್ಲೆಂದೆನುತಲಾ ತೋಳ। (ಕೀ-೨೧)

ಇದು ಇಂದಿನ ಪರಿಸ್ಥಿತಿಯೂ ಹೌದು. ಮನೆಮನೆ, ಊರೂರುಗಳಿಗಿರುವ

ಗುರುಗಳು ಸವಿಮಾತುಗಳಿಂದ ತಮ್ಮತ್ತ ಎಳೆದು ಗುಂಪುಗುಳಿ ಮಾಡುವುದನ್ನು ಕಣ್ಣೆದುರಿಗೆ ಕಾಣುತ್ತೇವೆ!

'ತಾನು ಯಾರು ತನವು ಯಾರು ತಿಳಿದು ನೋಡಿ' ಎಂಬ ಒಂಭತ್ತು ನುಡಿಗಳ ಕೀರ್ತನೆಯಲ್ಲಿ

'ಜಾತಿಯ ಕುಲಗಳ ಭೇದವ ತಿಳಿದು।
ಯಾತನೆ ದೇಹದ ಸಂಗವನಳಿದು।
ಮಾತಿನ ಮೂಲವ ತಿಳಿದಾತ ಶರಣನು। (ಕೀ-೨೭೨)

ಎಂದು ಹೇಳುತ್ತಾರೆ. 'ಕಾಯದೊಳಿಹ ಕಳವಳಗಳೆದು, ಮಾಯ ಮೋಹದ ಮಲಗಳ ತೊಳೆದು, ದೇಹ ವಿದೇಹವಾಗಬೇಕು. ಭ್ರಾಂತಿಯ ಅಭಾವ ಕಡಿದು ನೀತಿ ಸುಪಥದ ಮಾರ್ಗ ಹಿಡಿದು ಜ್ಯೋತಿ ಸ್ವರೂಪವನ್ನು ಕಾಣಬೇಕು. ಭಾವಭಕ್ತಿಯ ಕೀಲವನ್ನು ತಿಳಿದು ಹ್ಯಾವ ಹೆಮ್ಮೆಯ ಮೂಲವನ್ನು ಅಳಿದು, ಜೀವ ಶಿವನನ್ನು ತಿಳಿಯಬೇಕು. ಸೋಹ್ಯ ಸೊನ್ನೆಯ ಸೂತ್ರವನ್ನು ಹಿಡಿದು ಲಯಲಕ್ಷ್ಯದ ಮುದ್ರೆಯ ಜಡಿದು ಧ್ಯೇಯ ಧ್ಯಾನವನ್ನು ತಿಳಿಯಬೇಕು. ನಾದ ಬಿಂದು ಕಳೆಯನ್ನು ಮುಟ್ಟಿ ಸಾಧಿಸಿ ಉನ್ಮನ ಮುದ್ರೆಯ ಮುಟ್ಟಿ ಆದಿ ತತ್ವದ ಗತಿಯನ್ನು ತಿಳಿಯಬೇಕು. ಆಧಾರ ದೃಢದಿಂದ ಅರಹುತನಾಗಿ ಮಧ್ಯ ಮುಪ್ಪುರದಲ್ಲಿ ಸ್ಥಿರನಾಗಿ ಉರ್ಧ್ವಮಂಡಲ ಗತಿಯನ್ನು ಬೆರೆಯಬೇಕು. ಹೊರ ಒಳಗೆಲ್ಲ ಮಹಿಪತಿಯನ್ನು ಕಂಡು ಸಾಯೋಜ್ಯ ಸದ್ಗತಿಯನ್ನು ಪಡೆದರೆ ಆತ ಶರಣನೆನ್ನಿಸುತ್ತಾನೆ. ಇದನ್ನು ಅರ್ಥ ಮಾಡಿಕೊಳ್ಳಲಾರದೆ 'ಬರಿದೆ ಭ್ರಮೆಯ ಗೊಂಡ್ಯೋ ಮರುಳ ಮನುಜ ನೀನು' ಎಂದು ಎಚ್ಚರಿಸುತ್ತಾರೆ. ಈ ಅನಿತ್ಯ, ಅಸ್ಥಿರ ಬದುಕಿನ ಕುರಿತು ತಿಳಿಯಾಗಿ ಹೇಳಿದ್ದಾರೆ. 'ಎರವಿನ ಮನೆಯಲ್ಲಿ ಮರೆವಿನ ಮರೆಯಲ್ಲಿ ಗರವು ಹಿಡಿದು ಕುರುಹನ್ನೇ ತಿಳಿಯಲಿಲ್ಲ. ಭ್ರಾಂತಿ ಹರಿಯಲಿಲ್ಲ ಬಿದ್ದು ಸೊರಗಿ ದಣಿದ, ಹೀನ ಯೋನಿಮುಖಕೆ ಮರಳುಗೊಂಡು ಕಾನನದಲ್ಲಿ ಹೊಕ್ಕು ಜ್ಞಾನ ಶೂನ್ಯದಲ್ಲಿ ಹಲವಾರು ಜನ್ಮ ತಳೆದ

'ನಾನು ನನ್ನದು ಎಂದು ಏನು ಗಳಿಸಿಕೊಂಡ್ಯೋ।
ಸ್ವಾನುಭವದ ಸುಖ ಅನುಭವಿಸದೆ ಹೋಗಿ।
ಸ್ವಾನ ಸೂಕರ ಯೋನಿ ಮುಖ ಸೋಸಿದೆಲ್ಲ।
ಹೊನ್ನು ಹೆಣ್ಣಿನ ಸವಿಯ ಬಣ್ಣಿಸಿ ನೀ ಬಯಸಿದೆಲ್ಲ।
ಮಣ್ಣೇ ಮಾಣಿಕವೆಂದು ದಣ್ಣನೆ ದಣುವರೆ।
ಕಣ್ಣಗೆಟ್ಟರಬ್ಯಾಡೋ ತನ್ನೊಳರಿಯದೆ। (ಕೀ-೪೦೨)

ಮುತ್ತಿನಂಥ ಜನ್ಮವನ್ನು ವ್ಯರ್ಥಕಳೆಯಲಿ ಬ್ಯಾಡ ತಿಳಿದು ನೋಡಿ ಸದ್ಗುರು ಪಾದವನ್ನು ಕೂಡಿ ಮಹಿಪತಿಯನ್ನು ಪೂರ್ಣ ಸಾರ್ಥಕವನ್ನಾಗಿ ಮಾಡಿಕೊ ಎಂದು ಹೇಳುತ್ತಾರೆ.

'ಏನು ಗಳಿಸಿದ್ಯೋ ಪ್ರಾಣಿ। ಜ್ಞಾನಕ ಮಾಡಿ ನೀ ಹಾನಿ' ಎಂಬ ಕೀರ್ತನೆಯಲ್ಲಿ

ತತ್ವಜ್ಞಾನಿಯನ್ನೇ ಕೇಳುತ್ತಾರೆ.

'ಶಬ್ದಜ್ಞಾನದ ಅಂಗಡಿ ನೀಹಾಕಿ। ಉಬ್ಬಿಸಿದೊ ಬಲು ಹಾಕಿ।
ಲಬ್ಧಾಲಬ್ಧಿಯು ತಿಳಿಯದೆ ಡೊಂಕಿ। ಸ್ತಬ್ಧನಾದ್ಯೋ ವಿಷಸೋಂಕಿ।
ವಿದ್ಯಾವ್ಯುತ್ಪತ್ತಿ ತೋರಿ ನೀ ಬಹಳ। ಸದ್ದ ಮಾಡಿದ್ಯೋ ತಾಳಮೇಳ।
ಸಿದ್ಧಾಂತನುಭವ ನೀ -ಮಾಡಿ ಹಾಳ। ಬಿದ್ದ್ಯೋ ಬಲ್ಲತನದ ಕೋಳ। (ಕೀ-೧೧೨)

ಗಳಿಸುವುದು ಏನೆಂದು ತಿಳಿಯದೆ ಬರಿ ಜ್ಞಾನದ ಹಿಂದೆ ಓಡಿದರೆ, ಬಾಳಿ, ಬದುಕಿ ಪಡೆವುದಾದರೂ ಏನು? ಮಹಿಪತಿ ಗುರುವಿನ ಜ್ಞಾನ ಬೆಳಕು ಬೀರುತ್ತದೆ. ಅದನ್ನು ತಿಳಿದುಕೊಳ್ಳಬೇಕು ಎಂದು ಹೇಳುತ್ತಾರೆ.

ಮಾನವನ ನಡೆ ನುಡಿಗಳಿಗೆ ಹರಿದಾಸರು ತುಂಬ ಮಹತ್ವವನ್ನು ಕೊಡುತ್ತಾರೆ. ಅದು ಸರಿಯಾಗಿರಲು ಸತ್ಸಂಗದ ಅವಶ್ಯಕತೆಯಿದೆ ಎಂದು ಒತ್ತಿ ಹೇಳುತ್ತಾರೆ. ಕೇಡಿಗರ ಸಂಗದಿಂದ ದೂರವಿದ್ದು ಒಳ್ಳೆವರ ಸಹವಾಸದಲ್ಲಿ ಇರಬೇಕೆಂಬುದು ರಾಯರ ಮತವಾಗಿದೆ. 'ಮಾಡಬಾರದು ನೋಡಿ ಕೇಡಿಗರ ಸಂಗ। ಬೇಡಿ ಕಾಡದೆ ಬಾಹುದಭಿಮಾನ ಭಂಗ।' ಎಂಬ ಒಂದು ಕೃತಿಯಲ್ಲಿ (ಕೀ-೪೬೩) ಕೇಡಿಗರ ಸಂಗವನ್ನು ಮಾಡುವುದರಿಂದ ತನ್ನ ಮರ್ಯಾದೆಗೆ ಭಂಗ ಬರುತ್ತದೆ. ದುಷ್ಟಜನರು ಅಂತರಂಗವನ್ನು ಹೊಕ್ಕು ಕಲಹವನ್ನು ಬೆಳೆಸುತ್ತಾರೆ. ಗುಟ್ಟಿನ ಮಾತನ್ನು ತುಟಿಗೆ ತಂದು ಬಯಲು ಮಾಡಿ, ದೃಢವಾದ ಸ್ನೇಹ ಸಂಬಂಧವನ್ನು ಕಡಿದೊಗೆವರು. ಬೆಲ್ಲದ ಮಾತಿನಿಂದ ಎಲ್ಲರನ್ನು ಮೋಹಿಸಿ 'ಅಲ್ಲಹುದು' ಮಾಡಿ, ಸಲ್ಲದವರ ಕೈ ಹಿಡಿದು ಇಲ್ಲದ್ದನ್ನು ಸ್ಥಾಪಿಸಿ ಅವರು ಬಲ್ಲಿದರನ್ನು ಬಲೆಯಲ್ಲಿ ಸೆವರು ಆದ್ದರಿಂದ, 'ಏನಾದರೆ ಕೊಟ್ಟು ಹೀನ ಮನುಜರ ಸಂಗ। ಮನ್ನಣೆಯಲ್ಲಿದ್ದು ತಾಂ ತ್ಯಜಿಸಿ ಬ್ಯಾಗ।। ದೀನ ಮಹಿಪತಿ ಪ್ರಾಣದೊಡೆಯ ಶ್ರೀನಿಧಿ ಚರಣ। ನೆನೆವರ ನೆರೆಲಿದ್ದು ಸುಖಿಸುವುದು ಲೇಸು' ಎಂದು ಹೇಳುತಾರೆ.

ಕೇಡಿಗರ ಸಂಗದಿಂದ ಹೊರಬರುವ ಮನಸ್ಸು ಮಾಡಬೇಕು ಅದಕ್ಕೆ ಮನ ಬಲಿಯಬೇಕು. ಮನ ದೃಢವಾಗದಿದ್ದರೆ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಹರಿದಾಸರೆಲ್ಲ ಈ ಚಂಚಲ ಮನಸ್ಸಿನ ಕುರಿತು ಅನೇಕ ಬಗೆಯಾಗಿ ಹೇಳಿ ಎಚ್ಚರಿಸಿದ್ದಾರೆ.

'ಮನ ಬಲಿಯದನಕ ಅನುಕೂಲವಾಗದನುಭವ' ಎನ್ನುತ್ತಾರೆ. ಆಧ್ಯಾತ್ಮದ ಅನುಭವ ಪಡೆಯಲು ಅಡ್ಡಬರುವ ವಿಷಯಗಳು ಹಲವಾರು.

'ಹೆಣ್ಣು ಹೊನ್ನದಾಶೆ ಹುಚ್ಚ್ಯಾದೆ ಘನತನಗರಸದೆ।
ಹುಚ್ಚಮಾಡಿ ಬಿಟ್ಟದೆ ಎಚ್ಚರ ಎಡಿಯ ಗೊಡದೆ।
ಕಚ್ಚಿ ವಿಷಯಕೆ ಬಿದ್ದದೆ ಬೆಚ್ಚಿ ಬೆದರದೆ।। (ಕೀ-೪೩೧)

ಇಂಥ ಆಮಿಷಗಳನ್ನು ದೂರಮಾಡಿ ಮನಸ್ಸನ್ನು ಸ್ಥಿರಗೊಳಿಸಬೇಕು. ಜೊತೆಗೆ 'ಆತ್ಮದ ಖೂನ'ವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ವ್ಯರ್ಥ, ಏನು ಓದಿ ಏನು ಫಲ ಎಂದು ಕೇಳುತ್ತಾರೆ.

> 'ನಿಗಮ ಓದಿದರೇನು ಆಗಮ ಹೇಳಿದರೇನು।
> ಬಗೆ ಬಗೆ ವೇಷ ಜಗದೊಳು ದೋರಿದರೇನು।
> ಮಠವು ಮಾಡಿದರೇನು ಅಡವಿ ಸಾರಿದರೇನು।
> ಗುಹ್ಯ ಸೇರಿದರೇನು ಬಾಹ್ಯ ಮೆರೆದರೇನು।
> ದೇಹ ದಂಡಿಸಿ ಆಹಾರವ ತೊರೆದರೇನು।
> ಮನಕೆ ಮೀರಿಹ ಸ್ಥಾನ ಘನಸುಖದಧಿಷ್ಠಾನ।
> ದೀನ ಮಹಿಪತಿ ನೀ ಸಾಧಿಸೋ ಗುರುಜ್ಞಾನ।। (ಕೀ-೪೫೨)

ಆದ್ದರಿಂದ ಸತ್ಸಂಗ ಇರಬೇಕು. ಸತ್ಯದ ನುಡಿ ಹಿಡಿಯಬೇಕು ಎಂದರು. ಇಂಥ ಇನ್ನೂ ಹಲವಾರು ಕೃತಿಗಳಲ್ಲಿ ರಾಯರು ಆತ್ಮೋನ್ನತಿಯ ಮಾರ್ಗವನ್ನು ತೋರಿಸಿದ್ದಾರೆ. ಶುದ್ಧ ಸನ್ಮಾರ್ಗವನ್ನು ಹಿಡಿದು ಮನುಷ್ಯ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಲು ಕಳ-ಕಳಿಯಿಂದ ಹೇಳಿದ್ದಾರೆ. 'ಒಂದು ಪಥವ ಹೊಂದಲರಿಯರು ಈ ಮನುಜರು' (ಕೀ- ೧೨೭) ಎಂದು ಕನಿಕರಪಟ್ಟಿದ್ದಾರೆ. 'ದ್ವೈತ-ಅದ್ವೈತ ಎಂದು ಹೊಡದಾಡದಿರು' (ಕೀ-೬೨೨) ಎಂದು ಕಿವಿ ಮಾತು ಹೇಳಿದ್ದಾರೆ. ದ್ವೈತ ಎಂಬವನು ಆತ ಪರಮ ವೈಷ್ಣವನಲ್ಲ ಅದರಂತೆ ಅದ್ವೈತನೆಂದು ಹೇಳಿಕೊಳ್ಳುವವನು ಸ್ಮಾರ್ತನೂ ಅಲ್ಲ. ಸ್ಮಾರ್ತ ವೈಷ್ಣವ ಮತಗಳನ್ನು ಗುರುಗಳು ಬಲ್ಲರು ಅದನ್ನು ತಿಳಿಯಡೆ ಸ್ಥಾಪಿಸಿ ಹೊರಡುವುದು ಸಾಮಾನ್ಯ ಮನುಷ್ಯರಿಗಲ್ಲ. ಮೂರುವರೆ ಮೊಳದ ದೇಹದ ಶುದ್ಧಿ ಇಲ್ಲದೆ ಯಾಕೆ ತರ್ಕಸ್ವಾಡಿಸುವುದು, ದ್ವೈತ-ಅದ್ವೈತದ ಗುಟ್ಟು ಬೇರೆಯೇ ಇದೆ. ಅದರ 'ಭಾನಗಡಿ'ಗೆ ಬೀಳದೆ. ಚಿತ್ತಶುದ್ಧನಾಗಿ ಮಹಿಪತಿಯನ್ನು ಮುಟ್ಟುವದು ಲೇಸು ಎಂದು ಹೇಳುವಲ್ಲಿ ಶುಷ್ಕ ಚರ್ಚೆಗಳಿಗೆ ಮಂಗಳ ಹಾಡಿದ್ದಾರೆ.

★ ★ ★

## ೬.೬ ಸಾಹಿತ್ಯ ಸೌಂದರ್ಯ

ಸಾಹಿತ್ಯದ ದೃಷ್ಟಿಯಿಂದ ಕೀರ್ತನೆಗಳ -ಅನುಭಾವ ಸಾಹಿತ್ಯದ ಪರಿಶೀಲನೆ ಪ್ರಾರಂಭವಾದದ್ದು ತೀರ ಇತ್ತೀಚಿನ ದಿನಗಳಲ್ಲಿ. ಯಾಕೆಂದರೆ 'ಹಿಂದೆ ಇವುಗಳನ್ನು ಸಾಹಿತ್ಯವೆಂದು ಎಣಿಸುತ್ತಿರಲಿಲ್ಲವೆಂದು ತೋರುತ್ತದೆ. .... ದಾಸರು, ಕವಿಗಳ ಜೊತೆಗೆ ತಾವೂ ಕವಿಗಳೆಂದು ಹೇಳಿಕೊಳ್ಳದೇ ಇದ್ದುದು ಇದರ ಮುಖ್ಯ ಕಾರಣವಾಗಿ ರಬೇಕು.'' ಎಂದು ಡಾ. ಮಾಸ್ತಿ ಅವರು ಹೇಳಿದ್ದನ್ನು ಯಾರೂ ಒಪ್ಪಿಕೊಳ್ಳುವಂಥ ಅಭಿಪ್ರಾಯವಾಗಿದೆ.//೨೬// ದಾಸರ, ಅನುಭಾವಿಗಳ ಕಾವ್ಯವು ಬಹುಶ: ಮತದ ಇಲ್ಲವೆ ತತ್ವದ ಆಳಾಗಿ ದುಡಿದದ್ದರಿಂದ ಅವರ ಕೃತಿಗಳನ್ನು ಸಾಹಿತ್ಯವೆಂದು ಆ ಕಾಲದಲ್ಲಿ ಗಣಿಸಿರಲಿಕ್ಕಿಲ್ಲ. ''ಭಾವನೆಯ ಉತ್ಕಟತೆಯಿಂದ ಜೀವಂತವಾದ ಭಾಷೆಯೇ ಕಾವ್ಯ'' ಎಂಬುದು ಇಂದಿನವರ ಅಭಿಪ್ರಾಯ.//೨೭// ಈ ಮಾನದಿಂದ ಹರಿದಾಸರ ಕೃತಿಗಳಲ್ಲಿ ಕಾವ್ಯ ಗುಣ ಕಂಡು ಬರುತ್ತದೆ. ಮಹಿಪತಿರಾಯರ ಕೃತಿಗಳಲ್ಲಿ ಕೂಡ ಈ ಗುಣ ಎದ್ದು ಕಾಣುತ್ತದೆ. ಆದರೂ ಈ ಬಗೆಯ ಕೃತಿಗಳನ್ನು ಪ್ರತ್ಯೇಕವಾಗಿ ಅಭ್ಯಸಿಸುವ, ವಿಮರ್ಶಿಸುವ ಪರಂಪರೆ ನಿರ್ಮಾಣವಾಗಿಲ್ಲವೆಂದೇ ಹೇಳಬಹುದು. ಅನುಭಾವಿಗಳ ಜೀವನ ಚರಿತ್ರೆ ಹಾಗು ಅವರ ಸಾಹಿತ್ಯದ ಕುರಿತು ಅಭ್ಯಾಸ ಮಾಡುವಾಗ ಅದನ್ನು ಪ್ರಚಲಿತ ಮಾನದಂಡದಿಂದಲೇ ಪರಾಮರ್ಶಿಸಲಾಗುತ್ತಿದೆ. ಕನ್ನಡದಲ್ಲಿ ಸಮಗ್ರ ಆಧ್ಯಾತ್ಮ ಸಾಹಿತ್ಯವನ್ನು ಒಟ್ಟಿಗೆಯೇ - ವಿಮರ್ಶಿಸುವ ಪ್ರಯತ್ನ ಈ ವರೆಗೆ ನಡೆದಿಲ್ಲ. ಅಲ್ಲಿ -ಇಲ್ಲಿ ಶರಣರ, ದಾಸರ, ತತ್ವಜ್ಞಾನಿಗಳ ಕುರಿತು ಚಿಂತನಗಳಾಗಿವೆಯೇ ಹೊರತು ಒಟ್ಟಂದದ ರೂಪ ಇನ್ನೂ ಕಾಣಬೇಕಾಗಿದೆ. ಗುರುದೇವ ರಾನಡೆ ಅವರು ಕನ್ನಡ, ಮರಾಠಿ, ಹಾಗೂ ಹಿಂದಿ ಭಾಷೆಗಳಲ್ಲಿಯ ಅನುಭಾವ ಸಾಹಿತ್ಯವನ್ನು ಕುರಿತು ಅಭ್ಯಾಸ ಮಾಡಿ ಗ್ರಂಥ ರೂಪದಲ್ಲಿ ಪ್ರಕಟಿಸಿದ್ದು ಈ ದಿಶೆಯಲ್ಲಿ ನಡೆದ ಒಂದು ಮಹತ್ವದ ಪ್ರಯತ್ನವಾಗಿದೆ.

ಎಲ್ಲ ಅನುಭಾವಿಗಳು ಅಥವಾ ಆಧ್ಯಾತ್ಮ ಸಾಧಕರು ಕವಿಗಳಾಗಿರುವುದಿಲ್ಲ. ಕಾವ್ಯ ನಿರ್ಮಾಣ ಶಕ್ತಿ ಅನುಭಾವಿಗಳಲ್ಲಿ ಇರಬಹುದು ಅಥವಾ ಇರಲಿಕ್ಕಿಲ್ಲ. ಗುರು ಗೋವಿಂದ ಭಟ್ಟರು ಏನನ್ನೂ ಬರೆಯಲಿಲ್ಲ. ಆದರೆ ಅವರ ಶಿಷ್ಯರಾದ ಶರೀಫ ಸಾಹೇಬರು ಸುಂದರವಾದ, ಆಳವಾದ, ಆಧ್ಯಾತ್ಮ ಜ್ಞಾನವನ್ನೊಳಗೊಂಡ ಕಾವ್ಯ ವನ್ನು ರಚಿಸಿದರು. ಅದರಂತೆಯೇ ಭಾಸ್ಕರ ಸ್ವಾಮಿಗಳು ಯಾವುದೇ ಕೃತಿಗಳನ್ನು ರಚಿಸಿದ್ದು ಕಂಡು ಬರುವದಿಲ್ಲ. ಅವರು ಯೋಗಿಗಳಾಗಿದ್ದರು. ಸಿದ್ಧ ಪುರುಷರಾಗಿ ದ್ದರು. ಅವರ ಮಾರ್ಗದರ್ಶನದಲ್ಲಿ ಸಿದ್ಧಿಯನ್ನು ಪಡೆದ ಮಹಿಪತಿರಾಯರು ಮಾತ್ರ ಕನ್ನಡ ಆಧ್ಯಾತ್ಮ ಅನುಭಾವ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು.

ಮಹಿಪತಿರಾಯರಿಗೆ ಕಾವ್ಯ ಸ್ಫೂರ್ತಿಯನ್ನು ಕೊಟ್ಟದ್ದು ಯಾವುದು? ಅವರು

ಹಿರಿಯ ಅನುಭಾವಿಗಳು, ಸಾಧಕರು, ಸಿದ್ಧರು, ಯೋಗಿಗಳು ತಮ್ಮ ಬದುಕಿನಲ್ಲಿ ಸಾರ್ಥಕತೆಯನ್ನು ಪಡೆದವರು. ಅವರು ಕವಿಗಳಾಗಬೇಕೆಂಬ ಆಶೆಯಿಂದ ಕೃತಿಗಳನ್ನು ರಚಿಸಿದವರಲ್ಲ. ಸಾಹಿತಿಗೆ ಆವಶ್ಯಕವಾದ ರೀತಿಯಲ್ಲಿ ಅವರು ಅಧ್ಯಯನವನ್ನು ಮಾಡಿದವರಲ್ಲವೆಂದೇ ಹೇಳಬಹುದು. ಕಣ್ಣೆದುರು ಲೌಕಿಕ ಕಾವ್ಯಗಳನ್ನು ಮಾದರಿಯನ್ನಾಗಿ ಇಟ್ಟುಕೊಂಡವರೂ ಅಲ್ಲ. ಕಾವ್ಯ ಲಕ್ಷಣಗಳನ್ನೂ ಗಮನಿಸಿದವರಲ್ಲ. ಆದನ್ನವರು ತಮ್ಮ ಒಂದು ಕೃತಿಯಲ್ಲಿ ಸ್ಪಷ್ಟವಾಗಿಯೇ ಹೇಳಿದ್ದಾರೆ.

''ಸರ್ವೋತ್ತಮನ ಸ್ತುತಿಗೆ ಸಂಚಿಸದಕ್ಷರದೆಣಿಕ್ಯಾಕೆ
ಯತಿ ಛಲ//೨೫// ಗಣ ಪ್ರಾಸವ್ಯಾಕೆ ಸ್ತುತಿ ಸ್ತವನ ಕೊಂಡಾಡಲಿಕ್ಕೆ
ಹಿತದೋರದು ಮಿತಿ ಮಾಡಲಿಕ್ಕೆ ಅತಿ ಶೋಧಿಸಲಿಕ್ಕೆ
ಮುಕ್ತಿಗೆ ಬದ್ಧವೆಂದೆಂದೂ//೨೬// ಉತ್ತಮರುಪೇಕ್ಷಿಸರೆಂದು
ನೆತ್ತಿಲಿಟ್ಟುಕೊಂಬರು ಬಂದು ಅತಿ ಪ್ರೀತಿಲೆ ನಿಂದು''

(ಹಸ್ತ ಪ್ರತಿ ಠ ೪೨೮)

ಎಂದು ಹೇಳುತ್ತಾರೆ. ಇಲ್ಲಿ ಬಸವಣ್ಣನವರ 'ತಾಳಮಾನ ಸರಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ। ಅಮೃತ ಗಣ ದೇವಗಣವನರಿಯೆ ಕೂಡಲ ಸಂಗಮ ದೇವಾ। ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ವಚನ ನೆನಪಾಗದೆ ಇರದು. ಅನುಭಾವಿಗಳ ದಾರಿಯಲ್ಲಿಯ ವನಶ್ರೀಯಂತೆ ಅವರ ಕಾವ್ಯಸಂಪತ್ತು. ಮಹಿಪತಿರಾಯರ ಕೃತಿಗಳನ್ನು ಅವಲೋಕಿಸಿದಾಗ ಅವುಗಳಿಗೆ ಮೂಲ ಪ್ರೇರಣೆ ಅವರ ಅನುಭವ ಹಾಗು ಸಾಧನೆಯೇ ಆಗಿವೆ. ಒಂದೊಂದು ಸಾಧನೆ-ಸಿದ್ಧಿಯ ಅನಂತರ ಪಡೆದ ಅಮೃತ ಶಾಂತಿಯನ್ನು ಅವರು ತಮ್ಮ ಕೃತಿಗಳಲ್ಲಿ ಪ್ರಕಟಿಸಿದ್ದಾರೆ. 'ಗಿಡಬಳ್ಳಿಗಳಿಗೆ ಚಿಗುರು, ಹೂವು, ಕಾಯಿ, ಹಣ್ಣುಗಳಾಗುವಷ್ಟು ಸ್ವಾಭಾವಿಕವಾಗಿ ಈ ಕೃತಿಗಳ ಸೃಷ್ಟಿಯಿದೆ.' ಹೇಳಬೇಕೆಂಬ ಉತ್ಕಟ ಆಕಾಂಕ್ಷೆಯಲ್ಲಿ ಕಾವ್ಯ ಹೊರಹೊಮ್ಮುತ್ತದೆ. ಅಲ್ಲಿ ಯತಿ, ಗಣ ಪ್ರಾಸಗಳ ಅಭ್ಯಾಸ ಇಲ್ಲದೆಯೇ ಕೆಲವೊಮ್ಮೆ ಅವುಗಳು ಬಂದಿರುತ್ತವೆ. ಹೆಚ್ಚು ಕಡಿಮೆ ಎಲ್ಲ ಹರಿದಾಸರ, ಅನುಭಾವಿಗಳ ಸಾಹಿತ್ಯವೂ ಹೀಗೆಯೇ ರಚಿತವಾದದ್ದೆಂದು ಹೇಳಬಹುದು.

'ಕಾವ್ಯ ಪ್ರೇಮಿಗಳಲ್ಲಿ ಬಹು ಸಂಖ್ಯಾತರ ದೃಷ್ಟಿಯಲ್ಲಿ ಭಕ್ತ ಕಾವ್ಯ ಗೌಣಕಾವ್ಯವೆನಿಸಿಕೊಳ್ಳುತ್ತದೆ. ಇದಕ್ಕೆ ಕಾರಣವಿಲ್ಲದಿಲ್ಲ ಭಕ್ತ ಕವಿಗಳು ಮತದ ವಿಶೇಷ ಪ್ರಜ್ಞೆಯನ್ನು ಸಾಮಾನ್ಯ ಪ್ರಜ್ಞೆಯಲ್ಲಿ ಸೇರಿಸುತ್ತಾರೆ. ಆಗ ಕಾವ್ಯ ಕ್ಷೇತ್ರ ಸಂಕುಚಿತವಾಗುತ್ತದೆ. ಸಾಮಾನ್ಯ ಪ್ರಜ್ಞೆ ಮಹಾಕವಿಯ ವಿಶೇಷ ಲಕ್ಷಣ. ಒಂದೊಂದು ವೇಳೆ ಕವಿ ತನ್ನ ಸಾಮಾನ್ಯ ಪ್ರಜ್ಞೆಯನ್ನು ಹತ್ತಿಕ್ಕುತ್ತಾನೆ. ಭಕ್ತ ಕವಿಗಳ ಕಾವ್ಯಗಳಲ್ಲಿ ಎರಡು ವರ್ಗಗಳಿವೆ. ಮತ ಕಾವ್ಯ - ಅನುಭವ ಕಾವ್ಯ ಎಂದು ಅವುಗಳನ್ನು ಹೇಳಬಹುದು. ಮತ ಕಾವ್ಯದಲ್ಲಿ, ಕವಿ ಮತ ಪ್ರಚಾರಕನಾಗುತ್ತಾನೆ. ಇಂತಹ ಕಾವ್ಯದಲ್ಲಿ ಅಭಿನಿವೇಶ ಇರುತ್ತದೆ. ಆದರೆ ಸತ್ವವಿರುವದಿಲ್ಲ. ಅನುಭವ ಕಾವ್ಯವಾದರೋ ವ್ಯಕ್ತಿ ನಿರಪೇಕ್ಷ,

ಮತ ನಿರಪೇಕ್ಷ ಆಗಿರುವುದರಿಂದ ಅದು ಉತ್ತಮ ಕಾವ್ಯವಾಗುತ್ತದೆ. ಈ ಅಂಶ ಗಣನೀಯವಾಗಿದ್ದರೆ ಭಕ್ತ ಕವಿ ಶಕ್ತ ಕವಿಯಾಗುತ್ತಾನೆ.' ಎಂದು ಡಾ. ದಿವಾಣಜಿಯವರು ಹೇಳಿದ್ದನ್ನು ಗಮನಿಸಬೇಕು.//೨೭// ಮಹಿಪತಿರಾಯರ ಕಾವ್ಯದಲ್ಲಿ ಮತ ಕಾವ್ಯ ಇಲ್ಲವೇ ಇಲ್ಲ ಎಂದು ಹೇಳಲಾಗದು. ಆದರೆ ಅನುಭಾವ ಕಾವ್ಯಕ್ಕೆ ಹೆಚ್ಚು ಒತ್ತು. ಇಂಥ ಸಾಹಿತ್ಯ ನಿರ್ಮಾಣದ ಕುರಿತು ಮಹಾಯೋಗಿ ಶ್ರೀ ಅರವಿಂದರು ಒಂದೆಡೆ ಹೇಳುತ್ತ, 'ಆಧ್ಯಾತ್ಮ ಸಾಹಿತ್ಯವು ೧)ಸಂಕ್ಷಿಪ್ತವಾಗಿರುತ್ತದೆ. (Precise) ೨) ಅದು ನೇರವಾದ ಅನುಭವವಾಗಿರುತ್ತದೆ. ೩) ಅದು ಸುಲಭವಾಗಿ ಮುಖೋದ್ಗತವಾಗಿರುತ್ತದೆ. ೪) ಅನುಭವಗಳು ಸಂಕೀರ್ಣವಾಗುತ್ತ ಹೋದಂತೆ ಅಭಿವ್ಯಕ್ತಿಯೂ ಸಂಕೀರ್ಣವಾಗುತ್ತದೆ. ಅಭಿವ್ಯಕ್ತಿಯ ಗುಣಮಟ್ಟದ ಮೇಲಿಂದ ಕವಿಯ ಪ್ರಜ್ಞೆಯ ಅವಸ್ಥೆಯನ್ನು ಊಹಿಸಬಹುದು' ಎಂದು ಹೇಳುತ್ತಾರೆ.//೨೮// ಈ ದೃಷ್ಟಿಯಿಂದ ಕೆಲವು ಉದಾಹರಣೆಗಳನ್ನು ನೋಡಬಹುದು.

'ಮೂಡುವನು ರವಿ ಮೂಡುವನು
ಕತ್ತಲೊಡನೆ ಜಗಳಾಡುವನು'

ಇದು ಒಂದು ಸಾಮಾನ್ಯ ಅನುಭವದ ಅಭಿವ್ಯಕ್ತಿ

ಶಾಂತಿ ರಸವೆ ಪ್ರೀತಿಯಿಂದ
ಮೈದೋರಿತಣ್ಣ, ಇದು ಬರಿಬೆಳಗಲ್ಲೋ ಅಣ್ಣ'

ಇಲ್ಲಿ ಮೊದಲಿನ ಅನುಭವಕ್ಕಿಂತ ಎತ್ತರವಾದ ಅನುಭವದ ಅಭಿವ್ಯಕ್ತಿಯನ್ನು ಕಾಣಬಹುದು. ಇನ್ನೂ ಎತ್ತರದ ಅನುಭವದ ಉದಾಹರಣೆಗೆ

'ಬಂಗಾರ ನೀರ ಕಡಲಾಚೆಗೀಚೆಗಿದೆ, ನೀಲ ನೀಲ ತೀರ
ಅದು ನಮ್ಮ ಊರು ಅದು ನಿಮ್ಮ ಊರು ತಂತಮ್ಮ ಊರೋಧೀರ'

ಮತ್ತು

'ದೇವಲೀಲೆಯೋ ಕಾಣೆ ಕರ್ಮಜಾಲವೋ ಕಾಣೆ।
ಅದು ನಮ್ಮ ಬುದ್ಧಿಯಾಚೆಗಿನ ಮಾತು।
ಯಾವುದೇನೆ ಇರಲಿ ಪ್ರೀತಿಯಂಥ ಮಾತು।
ಭವದಲ್ಲಿ ಕಾಣೆ ಮನಗಂಡ ಮಾತು।'

ಇಲ್ಲಿಯ ಪ್ರತಿಯೊಂದು ಪದ್ಯಗಳಲ್ಲಿಯ ಕವಿದೃಷ್ಟಿಯ ಅವಸ್ಥೆಗಳು ಬೇರೆ ಬೇರೆಯಾಗಿ ಇರುವುದನ್ನು ಗುರುತಿಸಬಹುದು.//೨೯//

ಕಾವ್ಯ ಸ್ಫೂರ್ತಿ ಹೃದಯ ಮನಸ್ಸುಗಳಿಗೆ ಸಂಬಂಧಿಸಿದ್ದು. ಆಧ್ಯಾತ್ಮಿಕ ಅನುಭವಗಳು ಮನಸ್ಸಿನ, ಮೇಲಿನ ಹಂತದಿಂದ ಬರತಕ್ಕವುಗಳು. ಆದ್ದರಿಂದ ಅದನ್ನು ಶ್ರೀ ಅರವಿಂದರು 'Over head poetry' ಎಂದು ಕರೆದಿದ್ದಾರೆ.//೩೦// ಈ ರೀತಿಯ ಉನ್ನತ ಮಟ್ಟದ ಪ್ರಜ್ಞೆಯಿಂದ ಮೂಡಿದ ಕಾವ್ಯವು ಬೇರೆ ರೀತಿಯಲ್ಲಿ ಮಂತ್ರವೂ ಎನಿಸುತ್ತದೆ.

ಸೂರ್ಯನಿಲ್ಲದ ಸುಪ್ರಕಾಶ ತುಂಬೇದ ಹೇಳಲೇನ।

ಚಂದ್ರನಿಲ್ಲದ ಬೆಳದಿಂಗಳು ಬಿದ್ದದ ಬಲು ಬಹಳ

ಮನದ ಕೊನೆಯಲ್ಲಿದ್ದ ಘನ ಸುಖವ ನೋಡಿರೋ'

ಇವುಗಳು, ಮಹಿಪತಿರಾಯರ ಸುಪ್ರಸಿದ್ಧ 'ಅರ್ತಿಯಾಗಿದೆ ಬನ್ನಿ' ಎಂಬ ಕೃತಿಯ ಮೂರು ನುಡಿಗಳ ಮೊದಲ ಸಾಲುಗಳು. ಇಲ್ಲಿಯ ಉಜ್ವಲವಾದ ಪ್ರಕಾಶ, ರಮಣೀಯವಾದ ಬೆಳದಿಂಗಳುಗಳು ಅನುಭವವಿಲ್ಲದ ಓದುಗನಿಗೆ ಅರ್ಥವಾಗದೇ ಹೋದರೂ ಸಾಲುಗಳು ತಮ್ಮ ಅನುರಣದಿಂದ ಒಂದು ವಿಶಿಷ್ಟ ಅನುಭವವಾಗಿ ದಾಟುತ್ತವೆ. 'ಅನುಭವದ ಆಳ ವಿಶಾಲಗಳನ್ನು ಸೂಚಿಸಲು ಜಗದಗಲದ ಹೊರತಾದ ಪ್ರತಿಮೆಗಳನ್ನು ಸೂರೆ ಮಾಡುವ ಕೃತಿ ಎಲ್ಲವನ್ನೂ ಆವರಿಸಿಬಿಡುತ್ತದೆ.' ಆಗ 'ಮನದ ಕೊನೆಯಲ್ಲಿದ್ದ ಘನ ಸುಖದ' ಅರಿವೂ ಆಗುತ್ತದೆ.

'ಎನ್ನ ಮನದ ಕೊನೆಯ ಮೊನೆಯ ಮೇಲೆ

ಅಂಗವಿಲ್ಲದ ರೂಪವ ಕಂಡು ಮರುಳಾದೆನಲ್ಲ.

ಆತನ ಕಂಡು ಬೆರಗಾದೆನವ್ವ'

ಎಂಬ ವಚನದಲ್ಲಿಯ, ರೂಪಕಂಡು ಮರುಳಾದ ಬೆರಗಾದ ಅಲ್ಲಮ ಪ್ರಭುವಿನಂತೆ ಇಲ್ಲಿಯ 'ಮನದ ಕೊನೆಯ ಮೇಲಿನ ಘನ ಸುಖದ ಅರಿವು' ನಿಚ್ಚಳವಾದಂತೆ ಎನಿಸುತ್ತದೆ. ಪ್ರತಿಯೊಂದು ಸಾಲಿಗೂ ಮತ್ತೆ ಮೂರು-ಮೂರು ಸಾಲುಗಳ ವಿವರಣೆ ಅನುಭವವನ್ನು ಇನ್ನಷ್ಟು ಗಟ್ಟಿ ಮಾಡುತ್ತದೆ.

'ಸೂರ್ಯನಿಲ್ಲದ ಸುಪ್ರಕಾಶ ತುಂಬೇದ ಹೇಳಲೇನ

ತೂರ್ಯಾವಸ್ಥೆಯೊಳು ಬೆರೆದು ಕೂಡಿದ ಜ್ಞಾನಿ ಬಲ್ಲಮೌನ

ಬರಿಯ ಮಾತನಾಡಿ ಹೊರಿಯ ಹೇಳುವುದಲ್ಲ ಅರವು ಸ್ಥಾನ

ಪರಿಯಾಯದಿಂದ ಪರಿಣಮಿಸಿ ನೋಡಿ ಪರಮ ಪ್ರಾಣ ॥೧॥

ಚಂದ್ರನಿಲ್ಲದ ಬೆಳದಿಂಗಳು ಬಿದ್ದದ ಬಲು ಬಹಳ

ಇಂದ್ರಾದಿಕರೆಲ್ಲ ಹರುಷವಾಗುವದು ನೋಡಿ ಸರ್ವಕಾಲ

ಸುಂದ್ರವಾದ ಸುವಸ್ತುವೊಂದದೆ ಅಚಲ

ಸಾಂದ್ರವಾದ ಸುಖ ತುಂಬಿ ತುಳುಕುತಿದೆ ಥಳಥಳ ॥೨॥

ಮನದ ಕೊನೆಯಲ್ಲಿದ್ದ ಘನಸುಖ ನೋಡಿರೊ ನೆನೆದು ಬ್ಯಾಗ

ಸ್ವಾನುಭವದಲನುಭವಿಸುವದು ಬ್ರಹ್ಮ ಭೋಗ

ನಾ ನೀನೆಂಬುವ ಮಾತು ಏನು ತಾಳುವದಲ್ಲ ರಾಜಯೋಗ

ದೀನ ಮಹಿಪತಿಗೆ ತಾನೆ ತಾನಾದ ಸದ್ಗುರುವೀಗ ॥೩॥

ಅರ್ಥಿಯಾಗಿದೆ ಬನ್ನಿ ಅರ್ತುನೋಡುವ ಗುರುಮೂರ್ತಿಯಿಂದ

ನಿತ್ಯವಾಗಿ ಪೂರ್ಣ ಬೆರ್ತುಕೂಡುವಾ ಬನ್ನಿ ಗುರ್ತದಿಂದ ॥ಧ್ರು॥

(೩೬-೧೧)

ಈ ಚಿಕ್ಕ ಪದ್ಯದಲ್ಲಿ ಮಹಿಪತಿರಾಯರು ಇಡೀ ರಾಜಯೋಗದ ರಹಸ್ಯವನ್ನು

ಹೇಳಿದ್ದಾರೆ. ರಾಜಯೋಗಕ್ಕೆ ಮನಸ್ಸೇ ತಳಹದಿ. ಜ್ಞಾನವೂ ಅವಶ್ಯ ಅದನ್ನು 'ಅರ್ತು ನೋಡುವಾ' ಎಂದಿದ್ದರೆ. ಈ ಜ್ಞಾನವನ್ನು ನೀಡುವವನು ಗುರು. ಬ್ರಹ್ಮನಲ್ಲಿ ನಿತ್ಯವಾಗಿ ಪೂರ್ಣವಾಗಿ ಬೆರೆತು ಆನಂದಿಸುವುದೇ 'ಮನ'ದ ಗುರಿ. ಈ ಅನುಭವ ಬರಲು ಮನಸ್ಸು ಪೂರ್ಣವಾಗಿ ಸ್ವಚ್ಛವಾಗಬೇಕು. ಅದು 'ಮನದ ಕೊನೆಯಲ್ಲಿದ್ದ ಘನ ಸುಖ'ವನ್ನು ಪಡೆಯಬೇಕು. ಆಗ 'ಬ್ರಹ್ಮವಸ್ತು' ಕಾಣುತ್ತದೆ. ಅದು ದೈವೀ ಪ್ರಕಾಶ, ಭೌತಿಕ ಪ್ರಕಾಶವಲ್ಲ. ಆದ್ದರಿಂದ ಅದು ಸೂರ್ಯನಿಲ್ಲದ ಸುಪ್ರಕಾಶ. ಇದನ್ನು ತುರೀಯ ಅವಸ್ಥೆಯಲ್ಲಿದ್ದ ಜ್ಞಾನಿಯೇ ಅರಿಯ ಬಲ್ಲನು. ಇದು ವಿಪುಲವಾದ ಶಬ್ದಗಳಿಂದ ಬಣ್ಣಿಸಲು ಬರುವಂಥದ್ದಲ್ಲ. ಇದೊಂದು ಶುದ್ಧ ಪರಮಜ್ಞಾನದ ಅವಸ್ಥೆಯು. ನಮ್ಮ ಪರಮ ಪ್ರಾಣದಂತಿರುವ ಪರಮಾತ್ಮನ ಸಾಕ್ಷಾತ್, ನಿಕಟ ಅನುಭವದಿಂದಲೇ ತಿಳಿಯುವಂತಹ ಮಾತಿದು. ಚಂದ್ರನಿಲ್ಲದ ವಿಪುಲವಾದ, ನಿರ್ಮಲವಾದ ಬೆಳದಿಂಗಳು ಸರ್ವತ್ರ ವ್ಯಾಪಿಸಿದೆ. ಮತ್ತು ಇಂದ್ರಿಯಗಳೆಲ್ಲ, ಅದರ ಆನಂದವನ್ನು ಸದಾಕಾಲ ಪಡೆಯುತ್ತಿವೆ. ಹೃದಯದಲ್ಲಿ ಸುಂದರವಾದ ಪರಮಾತ್ಮನ ರೂಪ ನೆಲೆಸಿದೆ. ಅದರಿಂದ ಸಾಂದ್ರವಾದ ಸುಖವು ತುಂಬಿ ತುಳುಕುತ್ತಿದೆ. ಕೃತಿಯಲ್ಲಿ ಪಾಂಡಿತ್ಯ ಪೂರ್ಣವಾದ ಭಾಷೆಯ ಬಳಕೆಯಿಲ್ಲ. ತೀರ ಸಾಮಾನ್ಯವಾದ, ಸಹಜವಾಗಿ ಅರ್ಥವಾಗುವಂಥ ಶಬ್ದಗಳಲ್ಲಿ ರಾಜಯೋಗದ ರಹಸ್ಯವನ್ನು ಬಿಚ್ಚಿ ಇಟ್ಟಿದ್ದಾರೆ. ರಾಯರ ಕಾವ್ಯ ಸಿದ್ಧಿಗೆ ಇದು ಒಂದು ಉದಾಹರಣೆ. ಗಟ್ಟಿಯಾದ ಅನುಭವವಿಲ್ಲದೆ ಈ ರೀತಿಯ ಅಭಿವ್ಯಕ್ತಿ ಸಾಧ್ಯವಾಗುವದಿಲ್ಲ. ರಹಸ್ಯವಾದ ಆಧ್ಯಾತ್ಮದ ಅನುಭವಗಳನ್ನು ಕಣ್ಣಿಗೆ ಕಟ್ಟುವಂತೆ ಮತ್ತು ಅದನ್ನು ಓದುವವರಿಗೂ ಕಿಂಚಿತ್ ಅನುಭವವಾಗುವಂತೆ, ಸಾಮಾನ್ಯ ಶಬ್ದಗಳಲ್ಲಿ ಅಸಾಮಾನ್ಯ ಅನುಭವಗಳನ್ನು ನಿರೂಪಿಸುವ ಕಾವ್ಯಶಕ್ತಿ ಮಹಿಪತಿರಾಯರಲ್ಲಿ ಅಗಾಧವಾಗಿತ್ತು.

'ಓಂಕಾರ ಮೊದಲಾದ ಶ್ರುತಿ ವೇದ ಘೋಷಗಳು
ಧಿಮಿಧಿಮಿಸುವ ಮಹಾಶಬ್ದಗಳು ವಾದ್ಯಗಳು
ಘೀಳಿನಿಸುವಾ ಶ್ರುತಿನಾದಗಳು ಭೇದಗಳು
ಕೇಳುವದು ಈ ದೃಶ್ಯದಲಿ॥
ಗರ್ಜಿಸುವ ಶೃಂಗ ಶಂಖನಾದದ ಧ್ವನಿಗಳು
ಭೋರಿಡುವ ಭೇರಿ ಮೃದಂಗ ವೇಣುಗಳು
ಚಿಣ ಚಿಣ ತಂತ್ರ ಮೊದಲಾದ ಸಂಕಾರಗಳು
ಕೇಳಿ ಪಾವನನಾದೆನು॥

ರಾಯರು ಪಡೆದ ಅದ್ಭುತ ಅನುಭವ, ಓಂಕಾರ ಮೊದಲಾದ ಶ್ರುತಿ ವೇದ ಘೋಷಗಳು, ಧಿಮಿ ಧಿಮಿಸುವ ಮಹಾಶಬ್ದ, ಘೀಳಿನಿಸುವಾ ಶ್ರುತಿ ನಾದ ಭೇದಗಳು, ಗರ್ಜಿಸುವ ಶೃಂಗದ ದನಿ, ಶಂಖನಾದ, ಭೋರಿಡುವ ಭೇರಿ ಮೃದಂಗಗಳು, ವೇಣುನಾದಗಳು ಒಂದೆ, ಎರಡೇ, ರಾಯರು ಆಲಿಸಿದ ಧ್ವನಿವೈವಿಧ್ಯವೇ ಮೂಕವಿಸ್ಮಿತರನ್ನಾಗಿ ಮಾಡುತ್ತದೆ. ಅದರಂತೆ ಮುಂದಿನ ನುಡಿಯಲ್ಲಿ ಅವರು ಕಂಡ ತೇಜಃ ಪುಂಜ

ಪ್ರಕಾಶದ ವೈವಿಧ್ಯವನ್ನು ವಿವರಿಸುತ್ತಾರೆ.

'ಬೆರೆದು ನೋಡಲು ಅಂತರಾತ್ಮದೊಳು ಪ್ರಭೆಗಳು
ಥಳಥಳಿಸುವ ಮಹಾತೇಜಗಳು ಪುಂಜಗಳು
ಹೇಳಲಿನ್ನೇನದನು ಹೊಳವುಗಳು ಸುಳವುಗಳು
ನೋಡುವದು ಅನಿಮಿಷದಲಿ॥
ರವಿ ಶಶಿತಾರೆಗಳು ಸೂಸುತಿಹ ಕಿರಣಗಳು
ಭಾಸುತಿಹ ನಾನಾ ವರ್ಣಗಳು ಛಾಯೆಗಳು
ತುಂಬಿದ ಬೆಳಗಿನ ಕಳೆಗಳು ಕಾಂತಿಗಳು
ಕಂಡು ಬೆರಗಾದೆನಿಂದು॥

'ಬೆಳಕು' ಒಂದೇ, ಆದರೆ ರಾಯರು ಕಂಡ ಬೆಳಕಿನ ವೈವಿಧ್ಯ ಅಗಾಧವಾಗಿದೆ. ಥಳಥಳಿಸುವ ಮಹಾತೇಜಗಳು, ಪುಂಜಗಳು, ಹೊಳವುಗಳು, ಸುಳವುಗಳು ಭಾಸುತಿಹ ನಾನಾ ವರ್ಣಗಳು, ಛಾಯೆಗಳು, ರವಿ ಶಶಿ ತಾರೆಗಳು, ಸೂಸುವ ಕಿರಣಗಳು, ಬೆಳಗಿನ ಕಳೆಗಳು, ಕಾಂತಿಗಳು ಮಹಿಪತಿರಾಯರು ಕಂಡ ಬೆಳಕಿನ ವೈವಿಧ್ಯವಿದು. ಇದರೊಂದಿಗೆ ಗೇಯತೆ ಕೂಡಿ ಇಂಪಾಗಿ ಈ ಪದವನ್ನು ಕೇಳಿದಾಗ ನಾದದ, ಪ್ರಕಾಶದ ಅನುಭವ ಕೇಳುಗನ ಎದುರು ಜೀವಂತವಾಗಿ ನಿಲ್ಲುತ್ತದೆ. ವಾತಾವರಣವು ಅನುಭವದ ತರಂಗಗಳಿಂದ ತುಂಬಿ ಹೋಗುತ್ತದೆ. ಕಾವ್ಯ ಶಿಲ್ಪಕ್ಕೆ ಇದಕ್ಕಿಂತ ಹೆಚ್ಚಿನ ಉದಾಹರಣೆ ಬೇಕಿಲ್ಲ.

ಬ್ರಹ್ಮ ಸಾಕ್ಷಾತ್ಕಾರವು ಅನಿರ್ವಚನೀಯವಾದುದು. ಮಾತಿಗೆ ಮೀರಿದ್ದು ಮನಸ್ಸಿನ ಆಚೆಯದು. ಅನುಭವವು ಅನುಭವವೇ ಹೊರತು ಹೇಳಲು ಬಾರದು. ಇಂಥ ಅನುಭವಗಳನ್ನೂ ಶಬ್ದಗಳಲ್ಲಿ ಹಿಡಿದಿಟ್ಟ ಶ್ರೇಯಸ್ಸು ರಾಯರದು.

'ಹುಡುಕೆಂತೋ ತಿಳಿಯದು ತಿಳಿಯದು
ಸ್ವಾನಂದದ ಸುಡಾಟ (ಕೀ-೧೧೯)

ಎಂಬ ಕೃತಿಯಲ್ಲಿ ಆ ದಿವ್ಯ ಅನುಭವವನ್ನು ಅಪರೂಪವಾಗಿ ವರ್ಣಿಸುತ್ತಾರೆ. ಅನಾದಿ ಅನಂತವೆಂದು ಹೇಳುವ ಬ್ರಹ್ಮವಸ್ತುವನ್ನು 'ತುದಿ ಮೊದಲಿಲ್ಲದ ಸದಮಲ ಬ್ರಹ್ಮ'ವೆಂದು ಕರೆದದ್ದು ಔಚಿತ್ಯ ಪೂರ್ಣವಾಗಿದೆ. 'ಮಹಿಪತಿ ವಸ್ತು ಮಯವೋ' ಎಂಬುದು ಕಾವ್ಯಾಭಿವ್ಯಕ್ತಿಯಲ್ಲಿ ಪರಮಾತ್ಮನ ಸಾಕ್ಷಾತ್ಕಾರದ ಅನುಭವವನ್ನು ಸಾಕ್ಷಾತ್ತಾಗಿ ಪ್ರಕಟಿಸುತ್ತದೆ. ಹೀಗೆ ಗೂಢ, ಗುಪ್ತತರ, ರಹಸ್ಯವೆಂಬ ಅನುಭವಗಳನ್ನು ರಾಯರು ತಮ್ಮ ಅನೇಕ ಕೃತಿಗಳಲ್ಲಿ ಅಭಿವ್ಯಕ್ತಿಗೊಳಿಸುವಲ್ಲಿ ಸಾರ್ಥಕರಾಗಿದ್ದಾರೆ.

ದಾಸ ಸಾಹಿತ್ಯದಲ್ಲಿ ಈ ವರೆಗೆ ದೊರೆತ ಕೀರ್ತನೆಗಳಲ್ಲಿ ಅತಿ ಹೆಚ್ಚು ಅಂದರೆ ಏಳುನೂರಕ್ಕೆ ಮಿಕ್ಕಿಲ್ಲದ ಕೀರ್ತನೆಗಳು ಪುರಂದರ ದಾಸರದೆಂದು ಹೇಳಲಾಗುತ್ತದೆ. ಅವುಗಳಿಗೆ ಸರಿಸಮನಾದ ಕೃತಿಗಳನ್ನು ಕೊಟ್ಟ ಇನ್ನೊಬ್ಬ ಹರಿದಾಸರು ಮಹಿಪತಿರಾಯರು. ಡಾ. ಮುಗಳಿ ಅವರು ಹೇಳುವಂತೆ "ವಿಷಯಾನುಗುಣವಾಗಿ ನಾಮ

ಮಹಿಮೆ, ಹರಿಗುರುಗಳ ಸ್ಮರಣೆ, ಸ್ತುತಿ, ಅಂತರಂಗ ನಿವೇದನೆ, ಕೃಷ್ಣ ಲೀಲೆ, ಸಮಾಜ ವಿಮರ್ಶೆ ಸಮಾಜ ಬೋಧನೆ ಹೀಗೆ ಸ್ಥೂಲವಾಗಿ ಎಲ್ಲ ದಾಸರ, ವಿಶೇಷವಾಗಿ ಪುರಂದರ ದಾಸರ, ಕೀರ್ತನೆಗಳನ್ನು ವಿಭಾಗಿಸಬಹುದು."//೩೧// ಆದರೆ ಈ ವಿಷಯ ವೈವಿಧ್ಯ ಮಹಿಪತಿರಾಯರ ಕೃತಿಗಳಲ್ಲಿ ದೊರೆಯಲಿಕ್ಕಿಲ್ಲ. ಯಾಕೆಂದರೆ ಅವರು ನಡೆದ ದಾರಿ ಬೇರೆಯಾಗಿದ್ದಿತು. ದೊರೆತ ೬೮೫ ಕೀರ್ತನೆಗಳಲ್ಲಿ ಅರ್ಧದಷ್ಟು ಕೃತಿಗಳು ಅನುಭವ -ಸ್ವಾನುಭವ ಉಪದೇಶಪರವಾಗಿವೆ. ಉಳಿದರ್ಧ ದಲ್ಲಿ ಹರಿ-ಗುರು ಮಹಿಮೆಗಳು, ಅಲ್ಲಿಯೂ ಗುರು ಮಹಿಮೆಗೆ ಹೆಚ್ಚಿನ ಪ್ರಾಶಸ್ತ್ಯ ಇದೆ. ಗುರು ಮಹಿಮೆಯನ್ನು ಹೇಳುವಾಗಲೂ, ಅವರ ಅನುಗ್ರಹದಿಂದ ಪಡೆದ ಬ್ರಹ್ಮ ಸಾಕ್ಷಾತ್ಕಾರದ ಅನುಭವಕ್ಕೇ ಹೆಚ್ಚಿನ ಕೃತಿಗಳು ಮೀಸಲು. ಹೀಗಾಗಿ ಪುನರುಕ್ತಿ ಕಂಡುಬರುವದು ಸಹಜವಾಗಿದೆ. ಆದರೆ ಅಭಿವ್ಯಕ್ತಿಯಲ್ಲಿ ವೈವಿಧ್ಯತೆಯಿದೆ.

ಮಹಿಪತಿರಾಯರದು ಯೋಗ ಮಾರ್ಗವಾದರೂ ಅವರ ಸಹಜಗತಿ ಭಕ್ತಿಯೋಗ ದ್ದಾಗಿತ್ತು. ಬ್ರಹ್ಮ ಸಾಕ್ಷಾತ್ಕಾರದಲ್ಲಿಯೂ ಭಕ್ತಿಪೂರ್ಣವಾಗಿ ವರ್ಣಿಸಿದ ಆ ಪರಮಾ ತ್ಮನ ಸ್ಮರಣೆ ಸ್ತುತಿ ಪರವಾದ ಕೀರ್ತನೆಗಳು ಅಪರೂಪದ್ದಾಗಿವೆ. ಪುರಂದರದಾಸಾದಿ ಗಳಷ್ಟೇ ಸತ್ವಪೂರ್ಣವಾಗಿವೆ. ಹರಿಸರ್ವೋತ್ತಮತ್ವವನ್ನೇ ಒಪ್ಪಿದ ಅವರ ಈ ಕೀರ್ತನೆಯನ್ನು ನೋಡಬೇಕು.

'ಸಕಲವೆನಗೆ ನೀನೆ ಶ್ರೀ ಹರಿಯೆ
ತಂದೆ ತಾಯಿ ಸ್ವಹಿತಾತ್ಮನು ನೀನೆ
ಬಂಧು ಬಳಗ ಸರ್ವಾತ್ಮನು ನೀನೆ
ದೈವ ಗುರು ಕುಲಗೋತ್ರನು ನೀನೆ
ಕಾವ ಕರುಣ ಸ್ವಾತಂತ್ರನು ನೀನೆ
ದ್ರವ್ಯ ಧನವು ಸಹಾಯವು ನೀನೆ
ದಿವ್ಯಾಲಂಕೃತ ಭೂಷಣ ನೀನೆ
ಭಾಸುತ ಬಾಹ್ಯಾಂತ್ರದೊಳಹ ನೀನೆ
ಭಾಸ್ಕರ ಕೋಟಿ ಸುತೇಜರೂಪನು ನೀನೆ
ಮಹಿಪತಿ ಮನೋ ಮೂರ್ತಿಯು ನೀನೆ
ಸಾಹ್ಯ ಸಕಲಕೆ ಸಾರಥಿಯು ನೀನೆ'' (೪೮-೫೦೭)

ಇಂಥ ಕೃತಿಗಳನ್ನು ಕಂಡಾಗ ಪುರಂದರ ಕನಕರ ಕೃತಿಗಳನ್ನು ಓದಿದಷ್ಟೇ ಆನಂದವಾಗುತ್ತದೆ. ತಟ್ಟನೆ, ಅವರ ಪ್ರಭಾವ ಇದೆಯೆಂದು ಹೇಳದೆ ಇರಲಾಗದು. ಆದರೆ ಇಡೀ ಕೀರ್ತನ ಸಾಹಿತ್ಯವೇ ಒಂದು ನಿರ್ದಿಷ್ಟ ದಾರಿಯಲ್ಲಿ ನಡೆದದ್ದರಿಂದ ಅಲ್ಲಿ ಪ್ರಭಾವಕ್ಕಿಂತ ಸಮಾನ ಅನುಭವದ ಅಭಿವ್ಯಕ್ತಿ ಮುಖ್ಯವೆನಿಸುತ್ತದೆ. ಮೇಲಿನ ಪುಟ್ಟ ಕೀರ್ತನೆಯಲ್ಲಿ ಮಹಿಪತಿರಾಯರ ಅಚಲವಾದ ಹರಿಭಕ್ತಿ ತೋರಿ ಬರುವುದ ಲ್ಲದೆ ಆ ಶ್ರೀಹರಿ ತನ್ನ ತೇಜೋಬಲದಿಂದ ಹೇಗೆ ಸರ್ವೋತ್ತಮನಾಗಿದ್ದಾನೆ

ಎಂಬುದು ದೃಢವಾಗುತ್ತದೆ. ಇದೇ ಸರಣಿಯಲ್ಲಿ ಬರುವ,

'ಸಕಲಮೆಲ್ಲವು ಹರಿಯೇವೆ ಎನ್ನಿ ಯುಕುತಿವಂತರು ಹರಿ ಭಕುತಿ ಎನ್ನಿ' (ಕೀ-೫೨೭)
'ಮೆಚ್ಚಿಕುಂಟು ನಮಗೆ ಆತ್ಮಜ್ಞಾನ ನಿಶ್ಚಯದ ಧನವು' (ಕೀ-೪೯೭)
'ಪರಮ ಸಂಜೀವನವು ಗುರು ನಿಮ್ಮ ನಾಮ ಸುರಮುನಿಯು ಸೇವಿಸುವ ದಿವ್ಯನಾಮ'
(ಕೀ-೬೫೪)
'ದೇವಾಧಿದೇವ ಶ್ರೀದೇವ ಶಿಖಾಮಣಿ ಬಾರೋ' (ಕೀ-೬೧೯)
'ಕಂಡೆ ಕಂಗಳಿನ್ನ ಮಂಗಳಾತ್ಮನ ಕಂಡೆ' (ಕೀ-೧೮೭)
'ಶ್ರೀಹರಿಯ ಸೇವೆಯ ಮಾಡುವ ಬನ್ನಿ' (ಕೀ-೫೨೦)
'ಹರಿ ಹರಿ ಎನ್ನಿ ಸಿರಿಲೋಲ ಎನ್ನಿ' (ಕೀ-೭೪೦)
'ಹರಿಭಕುತರ ದರುಶನವು ಅತಿ ಹರುಷವು' (ಕೀ-೭೬೧)

ಮೊದಲಾದ ಕೀರ್ತನೆಗಳನ್ನು ಗಮನಿಸಬಹುದು. ಶ್ರೀಹರಿಯ ದಶಾವತಾರವಂತೂ ಮಹಿಪತಿರಾಯರಿಗೆ ಅತಿ ಪ್ರಿಯವಾದ ವಸ್ತು. ಅದನ್ನು ಅನೇಕ ವಿಧವಾಗಿ ಹೇಳಿದ್ದಾರೆ. ಲಾಲಿಪದ್ಯ ರೂಪದಲ್ಲಿರುವ 'ಆಲದೆಲಿಯ ಮ್ಯಾಲ ಮಲಗಂಗ್ಯುಟವ ಚಪ್ಪರಿಸುವ ನೀನಾರ್‍ಯೆ' (ಕೀ-೨೧) ಎಂಬ ೮ ಸುಡಿಗಳ ಕೀರ್ತನೆಯನ್ನು ಹೆಂಗಳೆಯರ ಬಾಯಿಂದ, ತಮ್ಮ ಮಕ್ಕಳಿಗೆ ಹಾಲುಣಿಸುವಾಗ ಕೇಳಬೇಕು. ಸರಳ ಭಾಷೆ, ತಿಳಿಯಾದ ನಿರೂಪಣೆ ಅದರ ಸ್ವಾದವೇ ಬೇರೆ, ಅದರಂತೆ ದಶಾವತಾರವನ್ನು ಕೀರ್ತನ, ಸುವ್ವಿ, ಲಾಲಿ, ಕೋಲಾಟ, ಕೊರವಂಜಿ ಪದಗಳಲ್ಲೂ ಹೇಳಿದ್ದಾರೆ. ಸಮೂಹ ಗಾನದಲ್ಲಿಯ ಕೋಲಾಟ ಪದ,

'ಕೋಲು ಕೋಲೆನ್ನ ಕೋಲೆ ಕೋಲು ಕೋಲೆನ್ನ ಕೋಲೆ
ಕೋಲೆ ಶ್ರೀಹರಿಯ ಬಲಗೊಂಬೆ ಕೋಲೆ ॥ಧ್ರು॥
ಶಿಕ್ಷಿಸಿ ನಿಗಮ ಚೋರ ರಾಕ್ಷಸನ ಕೊಂದು
ರಕ್ಷಿಸಿ ವೇದವ ನುಳುಹಿದ ಕೋಲೆ
ರಕ್ಷಿಸಿ ವೇದವ ನುಳುಹಿದ ಕೋಲೆ
ಮತ್ಸ್ಯಾವತಾರನ ಬಲಗೊಂಬೆ ಕೋಲೆ ॥೧॥ (ಕೀ-೧೭೮)

ಎಂದು ಹನ್ನೊಂದು ಸುಡಿಗಳಲ್ಲಿ ರಾಯರ ವಾಣಿ ನಿರರ್ಗಳವಾಗಿ ಹರಿವಿದೆ. ಅದರಂತೆ ದಶಾವತಾರವನ್ನು ಒಂದೊಂದೇ ಶಬ್ದಗಳಲ್ಲಿ ಹಿಡಿಯುವುದರೊಂದಿಗೆ, ಇಪ್ಪತ್ತು ಸುಡಿಗಳಷ್ಟು ವಿಸ್ತರಿಸಿದ್ದನ್ನೂ ಕಾಣಬಹುದು. 'ಹೊಳೆಯ ನೀನೆ ಇಳಿದಿ ಬಾರೋ ಇಳೆಯುಪ್ಪೊತ್ತು, ಬಳಿದಿ ಬಾರೋ, ಇಳೆಯ ಗೆಲಿದು ಸೀಳಿ ಕಂಭದೊಳು ಹೊಳದಿ ಬಾರೋ' (ಕೀ-೪೧೫) ಎಂದು ಹೇಳಿದ್ದರೆ. ೭೪ ಸುಡಿಗಳ ಕೊರವಂಜಿ ಪದದಲ್ಲಿ 'ಒಮ್ಮೆ ನೀರನೆ ಚಲಿಪಿಲಿ ಮಾಡುವ, ಒಮ್ಮೆ ಬಾಗಿ ಜಗನೆಗುವ, ಒಮ್ಮೆ ಹಲ್ಲಲಿ ಬೇರನೆ ಅಗಳುವ, ಒಮ್ಮೆ ಬರುತಲಿ ಗುರುಗುಡುವ' ಹೀಗೆ ಅನೇಕ ವಿಧವಾಗಿ ಹರಿಯ ದಶಾವತಾರಗಳನ್ನು ವರ್ಣಿಸಿದುದರಲ್ಲಿ ವೈವಿಧ್ಯವನ್ನಲ್ಲದೆ ಕಾವ್ಯ ಸೌಂದರ್ಯವನ್ನೂ ಗಮನಿಸಬಹುದು.

ರಾಯರು ತಮ್ಮ ಕೃತಿಗಳಲ್ಲಿ ಸೃಷ್ಟಿಸಿರುವ ರೂಪಕಗಳು, ಮತ್ತು ಬಳಸಿರುವ ಉಪಮಾನಗಳು ಅಪರೂಪದ್ದಾಗಿವೆ. ಅವರ ಕಲ್ಪನಾ ಶಕ್ತಿಯ ಹಿರಿಮೆ ಹಾಗು ಮಹಾಕವಿಗೆ ಇರಬಹುದಾದ ಪ್ರಜ್ಞೆ ಇವುಗಳ ಅರಿವಾಗುತ್ತದೆ. ಈ ದೃಷ್ಟಿಯಿಂದ ಕೆಲವು ಕೃತಿಗಳನ್ನು ನೋಡಬಹುದು.

ನಿತ್ಯ ಜೀವನದಲ್ಲಿಯ ಸಂಗತಿಗಳನ್ನು ಆಧ್ಯಾತ್ಮ, ಸಾಧನ ಅನುಭವದ ಅಭಿವ್ಯಕ್ತಿಗೆ ಬಳಸುವುದು ತುಸು ಕಠಿಣ. ಒಕ್ಕಲುತನವು ಬಹು ಜನರ ಉದ್ಯೋಗವಾಗಿದೆ. ಭೂಮಿಯನ್ನು ಉತ್ತಿ, ಬಿತ್ತಿ, ಕಳೆಯನ್ನು ತೆಗೆದು ಬೆಳೆಯ ರಾಶಿ ಮಾಡುವ ಒಕ್ಕಲುತನದ ವಿಧಾನವನ್ನೇ ಪ್ರತೀಕಗಳನ್ನಾಗಿ ಬಳಸಿ ಆಧ್ಯಾತ್ಮ ಸಾಧನೆಯ ಕೃಷಿ ವ್ಯವಸಾಯ ಮಾಡುವ ವಿಧಾನವನ್ನು ರಾಯರು ಹೇಳುವ ರೀತಿ ವಿಶಿಷ್ಟವಾಗಿದೆ.

'ಹುರಿದು ಭವಬೀಜ ಧರೆಯೊಳು ಕರುಣದಲಿ
ಪರಮ ಆನಂದ ಸುಖ ಮಳೆಗರೆದು
ಕರ್ಮಪಾಶಗಳೆಂಬ ಕರಕಿ ಬೇರವು ಕಿತ್ತಿ
ಹರಗಿ ಬಿತ್ತಲು ನಾಮ ತಾರಕುಪದೇಶದಲಿ
ವರ ಪ್ರತಾಪದ ಬೆಳೆಯು ತುಂಬಿ ತುಳುಕುವ ಸಿರಿಯು
ಸರ್ವಮಯವೆಂಬ ತೆನೆಗಳು ತುಂಬಿ
ಏರಿ ಸುಷುಮ್ನ ನಾಳದ ಮಂಚಿಕೆಯ ಮೆಟ್ಟಿ
ಪರಿ ಪರಿ ಅವಸ್ಥೆಯ ಹಕ್ಕಿಗಳು ಹಾರಿಸಲಾಗಿ
ಮುರಿದು ಭೇದಾಭೇದವೆಂಬ ಗೂಡಲೊಟ್ಟಿ
ಅರಿವು ಕಣದಲ್ಲಿ ಥರಥರದಲಿಕ್ಕಿ
ಜ್ಞಾನ ವೈರಾಗ್ಯ ವೆಂಬೆರಡೆತ್ತುಗಳ ಹೂಡಿ
ಸರ್ವಗುಣ ತೆನೆ ತೆಗೆದು ತುಳಿದು ರಾಶಿ ಮಾಡಿಸಲಾಗಿ
ಸರ್ವಮಯವೆಂಬ ರಾಶಿಯ ಒಬ್ಬುಳಿ ಮಾಡಿ
ತೂರಿ ತರ್ಕ ಭಾಸಗಳೆದು
ಮಿಥ್ಯಾ ಪ್ರಪಂಚವೆಂಬ ಕಾಳವು ಕಡೆಮಾಡಿ
ಸಫಲ ಸಹಕಾರದಲಿ ಸುಗ್ಗಿ ಮಾಡಿಸಲಾಗಿ
ಏಕೋ ಬ್ರಹ್ಮದ ಗತಿ ನಿಧಾನ ರಾಶಿಯ ದೋರಿ
ಜನ್ಮ ಮರಣವು ಕೊಯಿಲಿಯ ಸುಟ್ಟು ಉರುಹಿ
ಸದ್ಗತಿ ಮುಕ್ತಿ ಸುಕಾಲ ಸಾಧನವಿತ್ತು
ಮೂಢ ಮಹಿಪತಿ ಪ್ರಾಣ ಸದ್ಬೈಸಲಾಗಿನ್ನು (೬೬-೩೫೨)

ಹೀಗೆ ದಿನ ಬಳಕೆಯ ವ್ಯವಸಾಯದ ಶಬ್ದಗಳನ್ನು ಬಳಸಿ ಸಾಧನ ರಾಶಿಯ ವಿಧಾನವನ್ನು ರಾಯರು ಅನನ್ಯವಾಗಿ ನಿರೂಪಿಸಿದ್ದಾರೆ.

ಮಹಿಪತಿರಾಯರ ರಮ್ಯ ಕಲ್ಪನಾಶಕ್ತಿಗೆ ಉದಾಹರಣೆಯಾಗಿ ಅವರ ಒಂದು ಸುಳ್ಳಿ ಪದವನ್ನು ನೋಡಬಹುದು. ಅದರಲ್ಲಿ ಅವರು ವಾಸುದೇವನ ಮದುವೆಯನ್ನು

ಮಾಡಿದ್ದಾರೆ. ಈ ನೀಡಿದಾದ ಕೃತಿ ಉದ್ದಕ್ಕೂ ಸಾಂಕೇತಿಕವಾಗಿ ನಿರೂಪಿತವಾಗಿದ್ದು ತ್ರಿಪದಿ ಧಾಟಿಯನ್ನು ಹೋಲುತ್ತದೆ. ಈ ಕೃತಿಯಲ್ಲಿ ರಾಯರ ಕಥನ ಕೌಶಲವನ್ನೂ ಕಾಣಬಹುದು.

ಶ್ರೀಪತಿಯ ಮದುವೆಯ ವೈಭವ ಅಪರೂಪವಾದದ್ದು, ಮೊದಲು ಗಣಪತಿಯ ಪೂಜೆಯಾಗಬೇಕು.

'ಮನವ ಕಣಕವ ಮಾಡಿ ಗಣಪತಿಯ ಬಲಗೊಂಡು
ಅನುಮಾನಂಬೆಳ್ಳಚಿಗಳಿಯ
ಅನುಮಾನಂಬೆಳ್ಳಚಿಗಳಿಯ ನೆನವು ನೆನಗಡಲಿಯ
ಗಣನಾಥಗಿಟ್ಟು ಬಲಗೊಂಡು'

ಎಂದು ಗಣಪತಿಯ ಪೂಜೆಯನ್ನು ಮಾಡಿ

'ಮನವೆಂಬ ಕಣಕವ ಘನವಾಗಿ ಕುಟ್ಟುತ್ತ
ಜ್ಞಾನ ವೈರಾಗ್ಯದೊಡಗೂಡಿ
ಒಡಗೂಡಿ ಕುಟ್ಟುತ ಪ್ರಾಣದ ಸಖಿಯರು
ಆನಂದ ಘನವ ಬಲಗೊಂಡು'

ಹೀಗೆ ಆನಂದ ಘನವನ್ನು, ನಿಗಮಗೋಚರನನ್ನು, ನಿತ್ಯನಿರ್ಗುಣನನ್ನು ಪತಿತಪಾವನನ್ನು ಬಲಗೊಂಡು ವಿಶ್ವ ವ್ಯಾಪಕನ ಮದುವೆಗೆ ಮಾಡಿದ ಅಡುಗೆಯ ಸಂಭ್ರಮ ಹೇಳತೀರದು. ಮನವೆಂಬ ಕಣಕವನ್ನು ಕುಟ್ಟಿದ್ದೇ ಕುಟ್ಟಿದ್ದು. 'ವಸುಧೆಯೊಳು ದೃಢ ಅಸಿಯ ಕಲ್ಲನೆ ಮಾಡಿ, ಕುಸುವ ನಿಶ್ಚಯದ ವನಕಿಯ ಹಸ್ತದಿ ಹಿಡಿದು ಹಸನಾಗಿ ಕುಟ್ಟಿ ನಾದಿ ಉರುಳಿ ಮಾಡಿ, ಅಸಿಯಕಲ್ಲು, ಒನಕೆ ಉಸಲಾರಗೊಡದೆ ಕುಟ್ಟಿದ ಕಣಕವು ಘಟ್ಟಿಸಿಹ ಮಾಡಿ, ಉಸ್ಮನೆಯ ಮುದ್ರಿಯಲಿ ಒಟ್ಟಿದರು. ಜ್ಞಾನ ವೈರಾಗ್ಯವೆಂಬ ಅನಾದಿ ಶಕ್ತರು ಕಣಕ ಕುಟ್ಟಿ ದಣಿದರು. ಈ ಹಸನಾದ ಕಣಕವಿಂದ ಹೊಸಪರಿ ಭಕ್ಷ್ಯಗಳನ್ನು ತಯಾರಿಸಿ, ಹೆಸರಿಟ್ಟು ವಿಸು ಪರಿಯಿಂದ - ಬೀಸೋರಿಗೆಗಳು ವಾಸುದೇವನ ಮದುವೆಗೆ ಸುತ್ತ ಕುಳಿತ ಪಂಕ್ತಿಯಲ್ಲಿ ಆತ್ಮದಿಂದ ಬಡಿಸಿದರು.

'ಸಖಿರಿ ಹುಷ್ಪವು ಭಕ್ತಿ ಭಾವದಲಾದ
ಅಕ್ಕ ತಂಗೇರು ಬಡಿಸುತ
ಬಡಿಸುತ ನಡೆದರು ಅಖರದಿಂದಲಿ
ಏಕಾಂತನ ಮದುವಿಗೆ
ಗಂಧ ಕಸ್ತೂರಿಯು ತಂದೆ ಗುರುಕೃಪೆಯು
ಚೆಂದವಾಗಿಟ್ಟು ಮೆರೆದರು
ಮೆರೆದು ಮೇದಿನಿಯೊಳು ಗುರುದಯ ಕರುಣದಿ
ಪರಮ ಸುಪಥವ ಪಡೆದರು
ಸರಿ ಇಲ್ಲದ ಪ್ರಸ್ತ ಧರೆಯೊಳಾಯಿತು
ಪರಮಾನಂದ ಹರುಷದಲಿ
ಹರುಷವ ಕಂಡಿನ್ನು ಕರಮುಗಿದು ಮಹಿಪತಿ

ಹೃತ್ಕಮಲದಲ್ಲಿ ಸ್ತುತಿಸಿದ' (ಕೀ-೬೧೬)
ಇಪ್ಪತ್ತಾರು ನುಡಿಗಳ ಈ ಸುವ್ವಾಲಿಯನ್ನು ಹೆಣ್ಣುಮಕ್ಕಳು ಮದುವೆಯ ಸಮಾರಂಭಗಳಲ್ಲಿ ಇಂಪಾಗಿ ಹಾಡಿದಾಗ ಆಗುವ ಪರಿಣಾಮ ಅದ್ಭುತವಾದದ್ದು.

ಹೀಗೆ ರಾಯರ ಕಲ್ಪನಾಶಕ್ತಿ ಹಾಗೂ ಕಥನ ಕೌಶಲಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. 'ಜ್ಞಾನ ಗುರು ಶುದ್ಧ ಮಡಿವಾಳ' (ಕೀ-೨೫೩) ಎಂಬ ಕೃತಿಯಲ್ಲಿ ಜ್ಞಾನವನ್ನು ಅಗಸನಿಗೆ ಹೋಲಿಸಿ ದೃಢದ ಬಂಡೆಗಲ್ಲಿನ ಮೇಲೆ ಸುಬೋಧದ ಸಬಕಾರವನ್ನು ಹಚ್ಚಿ ಮನದ ಮೈಲಿಗೆಯನ್ನು ಹಿಡಿದು -ಹಿಂಡಿ, ವೈರಾಗ್ಯದ ಬಿಸಿಲಿನಲ್ಲಿ ಒಣಗಹಾಕಿದ್ದಾರೆ. 'ತವರು ಮನೆ ನನ್ನ ಸುವಿದ್ಯಾಪುರದಲ್ಲಿದೆ' (ಕೀ-೨೬೮) ಎಂಬ ಹನ್ನೊಂದು ನುಡಿಗಳ ನಿಡಿದಾದ ಕೃತಿಯಲ್ಲಿ ಅವರ ತವರು ಮನೆಯ ಕಥೆಯನ್ನು ಚಿತ್ರಿಸಿದ್ದಾರೆ. ಒಂದು ಆರತಿ ಪದದಲ್ಲಿ (ಕೀ-೨೩೭) 'ಮನವೆ ಬತ್ತಿ, ತನು ಆರತಿ ನೆನವು ತುಪ್ಪ ಜ್ಞಾನ ದೀಪ' ಹಚ್ಚಿ ಬೆಳಗಿದ್ದಾರೆ. ಇನ್ನೊಂದು ಕೀರ್ತನೆಯಲ್ಲಿ (ಕೀ-೪೦೯) ಪರಮಾತ್ಮನು ಅವರಿಗೆ ಕೃಪೆ ಮಾಡುವ ರೀತಿಯನ್ನು ಹೇಳಿದ್ದಾರೆ. 'ತಾಯಿ ಶಿಶುಸ್ತನ ಪಾನಕೆ ಬಾಯೊಳಗಿಡುವ್ಹಾಂಗೆ' ಅವರಿಗೆ ದಯ ಮಾಡಬೇಕು!

ಹರಿಗುಣಗಾನ, ಸಾಧನೆ, ಅನುಭವ ಇವುಗಳಿಗಷ್ಟೇ ಅವರ ರೂಪಕ ಶಕ್ತಿ ಸೀಮಿತವಾಗಿಲ್ಲ. ನಾಸ್ತಿಕನನ್ನು ಕಂಡು ಹೇಳಿದ ಕೃತಿ 'ಹರಿಗೆ ನಮಿಸದ ಶಿರವು ತೋರುವ ಬೆಚ್ಚಿನ ತೆರವು' (ಕೀ-೬೩೨) ಎಂಬ ಕೃತಿಯಲ್ಲಿ 'ವಂದಿಸದ ಹಣೆಯು ಹುಳಕ ಮಣೆಯು' 'ಮುಗಿಯದ ಕೈ ಮುರಕ ಕೀಲಿಕೈ' 'ಕೊಂಡಾಡದ ನಾಲಿಗೆ ಒಡಕ ಸೊಲಿಗೆ' 'ಸ್ತುತಿಸದ ಮುಖ ಚೀರುವ ಚಿಮ್ಮುಡಿಯ ಮುಖವು' 'ಕೇಳದ ಕಿವಿಯು ಹಾಳು ಗವಿಯು' 'ನೋಡದ ಕಣ್ಣು ತೋರುವ ನವಿಲುಗರಿಕಣ್ಣು' 'ಸೇವೆಗೊಡಗದ ಕಾಲು ಮುರಕ ಹೊರಸಿನ ಕಾಲು' ಎಂದು ಇತ್ಯಾದಿಯಾಗಿ ಹೇಳುವಲ್ಲಿ ನಾವಿನ್ಯತೆ ಇದೆ.

ವಚನಗಳಲ್ಲಿಯ ಅವರ ರೂಪಕಶಕ್ತಿ ಅಪರೂಪವಾಗಿದೆ. ಇದೇ ಸಾಧನೆಯನ್ನೇ ನಾಲ್ಕು ಸಾಲುಗಳಲ್ಲಿ ಹಿಡಿದು ಇಡುತ್ತಾರೆ. ದೊರೆತ ಮೂರೇ -ಮೂರು ವಚನಗಳು ಅವರ ಕೃತಿ ರಚನಾ ಸಾಮರ್ಥ್ಯವನ್ನು ಎತ್ತಿ ತೋರಿಸುತ್ತವೆ. ಅವುಗಳಲ್ಲಿಯ ಅಪ್ರಕಟಿತ ಒಂದು ವಚನ.

'ಮನವು ಬಿಲ್ಲನೆ ಮಾಡಿ। ತನುವು ಹದಿಯನೆಕಟ್ಟಿ
ಅನುಭವದ ಅಂಬಿನಲಿ। ಜನನ ಮರಣದ ಗುರಿಯ ಕಡಹಿದಾ
ಜ್ಞಾನಸಾಗರ ಗುರುನಾಥನೆಂದು ಸ್ತುತಿಸಿದ ಮಹಿಪತಿ॥

(ಹಸ್ತಪ್ರತಿ -ಈ)

ಮಾನವನಲ್ಲಿ ಕಂಡು ಬರುವ ಸದ್ಗುಣ ಹಾಗು ದುರ್ಗುಣಗಳನ್ನು ದೃಷ್ಟ ಮತ್ತು ಅದೃಷ್ಟ ಶಕ್ತಿಗಳೆಂದು ಕರೆದು ಅವುಗಳ ಮಧ್ಯದ 'ಸಮರ'ವನ್ನು 'ದೃಷ್ಟಾದೃಷ್ಟ ಸಂವಾದ' (ಕೀ-೩೦೭) ಎಂಬ ಕೃತಿಯಲ್ಲಿ ನೂರ ಇಪ್ಪತ್ತೆರಡು ನಾಲುಗಳಲ್ಲಿ ತುಂಬ ಕುತೂಹಲ ಕಾರಿಯಾಗಿ ಹೇಳಿದ್ದಾರೆ. ಅದು ದೈವೀ -ಅಸುರೀ ಶಕ್ತಿಯೂ ಹೌದು. ಈ ಯುದ್ಧ ನಿರಂತರವಾಗಿ ನಡೆದದ್ದೇ ಆಗಿದೆ. ಕೊನೆಗೆ ದೈವೀ ಶಕ್ತಿಗೆ, ಸದ್ಗುಣಕ್ಕೆ ಜಯ ದೊರೆಯುತ್ತದೆ. ಕೃತಿಯ ಉದ್ದಕ್ಕೂ ಕಂಡುಬರುವ ಪಾರಿಭಾಷಿಕ ಶಬ್ದಗಳು, ಈ ಎರಡು ಶಕ್ತಿಗಳ ಪರಸ್ಪರ ಕಲಹ, ಪರಿಣಾಮ ಮುಂತಾದವುಗಳಲ್ಲಿ ಕಾವ್ಯಗುಣ ವನ್ನು ಲಕ್ಷಿಸಲು ಅರ್ಹವಾಗಿವೆ. ಯೋಗ ಸಾಧನೆಯ ಎಲ್ಲ ವಿವರಗಳನ್ನು ಈ ಕೃತಿಯಲ್ಲಿ ನಿರೂಪಿಸಲಾಗಿದೆ.

ಮಹಿಪತಿರಾಯರ ದೊರೆತ ಕೃತಿಗಳ ಸಂಖ್ಯೆ ವಿಪುಲವೆಂದು ಹೇಳಿತು. ಅದರಂತೆ ರಚನಾ ವೈವಿಧ್ಯವೂ ವಿಪುಲವಾಗಿದೆ. ಬಹುಶ: ರಾಯರ ಶಿಷ್ಯ ಮಂಡಲಿಯು ಕೆಲವು ಶಿಷ್ಟರದ್ದಾಗಿರಲಿಲ್ಲವೆಂದು ತೋರುತ್ತದೆ. ಎಲ್ಲ ಬಗೆಯ ಸಾಮಾಜಿಕ ಅಂತುಸ್ತುಗಳಿಗೆ ಸೇರಿದ ಜನರು ಇದ್ದಿರಬೇಕು. ಆದ್ದರಿಂದ ಅವರವರ ಅಭಿರುಚಿಗೆ ತಕ್ಕಂತೆ, ಸಾಂಸ್ಕೃತಿಕ ಮಟ್ಟಗಳಿಗೆ ಸರಿಹೊಂದುವಂತೆ ಬೇರೆ ಬೇರೆ ಬಗೆಯ ಸಾಹಿತ್ಯ ರಚನೆ ಮಾಡಿದ್ದಾರೆ. ವಿಷಯ ಒಂದೇ ಆಗಿದ್ದರೂ ಅದನ್ನು ವಿವರಿಸುವ ರೀತಿ ವೈವಿಧ್ಯಮಯವಾಗಿದೆ.

ಸುಸಂಸ್ಕೃತ ಶಿಷ್ಯರಿಗಾಗಿ ಕೀರ್ತನೆಗಳನ್ನು, ಸ್ತೋತ್ರ ಸ್ತುತಿ ಪದಗಳನ್ನು, ಆರತಿ ಪದಗಳನ್ನು, ಪ್ರಾತ:ಸ್ಮರಣೆಗಳನ್ನು ರಚಿಸಿದ್ದಾರೆ. ಸ್ತ್ರೀಯರಿಗಾಗಿ ಸಾಂಗತ್ಯ, ಶೋಭನ ಪದ, ತ್ರಿಪದಿ, ಜೋಗುಳ ಪದ, ಕುಟ್ಟುವ ಪದ, ಸುವ್ವಿ ಪದ, ಕೋಲಾಟದ ಪದಗಳನ್ನು ಬರೆದಿದ್ದಾರೆ. ಜನಸಾಮಾನ್ಯರಿಗೆ ಲಾವಣಿ, ಹಂತಿಪದ, ಭಾವಗೀತೆ, ಕೋಲಾಟ, ಕೊರವಂಜಿ ಪದ, ಸುಗ್ಗಿಯಪದ, ತಾನಾ-ತಂದಾನಾಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ವೃತ್ತಗಳ ವಿವಿಧತೆಯೂ ಸಾಕಷ್ಟಿದೆ. ಬೇರೆ ಬೇರೆ ರಾಗ-ತಾಳಗಳಿಂದ ಕೂಡಿದ ತ್ರಿಪದಿಗಳು, ಚೌಪದಿಗಳು, ಸಾಂಗತ್ಯ, ಭಾಮಿನಿ, ವಾರ್ಧಕ ಷಟ್ಪದಿಗಳು ರಗಳೆ, ಲಾವಣಿ, ಮಾಲಾವೃತ್ತ ವಚನ ಇವುಗಳಿಂದ ರಾಯರ ಸಾಹಿತ್ಯವು ಸಂಪದ್ಭರಿತ ವಾಗಿದೆ ಹೃದಯಂಗಮವಾಗಿದೆ.

ರಾಯರು ಬಹುಭಾಷಾ ವಿಶಾರದರಾಗಿದ್ದರು. ಕನ್ನಡದ ಹೊರತಾಗಿ ಮರಾಠಿ ಹಾಗೂ ಅಂದಿನ ದಖಣಿ ಭಾಷೆಯಲ್ಲಿ ರಚಿಸಿದ ಅವರ ಕೆಲವು ಕೃತಿಗಳೂ ದೊರೆಯು ತ್ತದೆ. ಜೊತೆಗೆ ಮಿಶ್ರ ಭಾಷಾ ಕೆಲವು ಕೃತಿಗಳನ್ನೂ ರಚಿಸಿದ್ದಾರೆ. ಕನ್ನಡ, ಮರಾಠಿ, ತೆಲಗು, ಪರ್ಶಿಯನ್ ಹಾಗೂ ದಖಣಿ ಭಾಷೆಗಳನ್ನು ಬಳಸಿ ರಚಿಸಿದ ಐದು ಕೃತಿಗಳು ದೊರೆಯುತ್ತವೆ. ಇದರಿಂದಾಗಿ ಅವರ ಕನ್ನಡ ಕೃತಿ ರಚನಾ ಶೈಲಿಯ ಮೇಲೂ

ಸಾಕಷ್ಟು ಪರಿಣಾಮವಾಗಿದೆ. ಸಂಸ್ಕೃತ ಹಾಗು ಜಾನಪದ ನುಡಿಗಳ ಮಧುರ ಮಿಲನವಂತೂ ಸರಿಯೆ. ದಖಣಿ ಭಾಷೆಯ ಪ್ರಭಾವದಿಂದಲೋ ಏನೋ, ಕನ್ನಡ ಭಾಷೆಯನ್ನು ಹೇಗೆ ಬೇಕೋ ಹಾಗೆ ದುಡಿಸಿಕೊಂಡಿದ್ದಾರೆ. ಬಹು ಭಾಷೆಗಳ ಪರಿಚಯವಿದ್ದರೂ ಅವರ ಆಯಾ ಭಾಷೆಗಳ ಕೃತಿಗಳಲ್ಲಿ ಇನ್ನೊಂದು ಭಾಷೆಯ ಶಬ್ದಗಳ ಬಳಕೆ ಇಲ್ಲದ್ದು ವೈಶಿಷ್ಟ್ಯವೆನ್ನಬಹುದು. ಪರ್ಶಿಯನ್ -ದಖಣಿ ಭಾಷೆಗಳ ಉಚ್ಛ್ರಾಯ ಕಾಲದಲ್ಲಿ ಕೃತಿಗಳನ್ನು ರಚಿಸಿದ್ದರೂ, ಆ ಭಾಷೆಗಳ ಮೇಲೆ ಅವರಿಗೆ ಪ್ರಭುತ್ವವಿದ್ದರೂ ಕನ್ನಡ ಭಾಷೆಯ ಅವರ ಕೃತಿಗಳಲ್ಲಿ ಪರ್ಶಿಯನ್ ಅಥವಾ ದಖಣಿ ಶಬ್ದಗಳನ್ನು ತಪ್ಪಿಕೂಡ ಬಳಸಿದ್ದನ್ನು ಕಾಣುವುದಿಲ್ಲ. ಅವರ ಕನ್ನಡ ಕೃತಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ವಿಜಾಪುರದ ಸುತ್ತಮುತ್ತ ಇಂದಿಗೂ ಬಳಸುವ ಜನಸಾಮಾನ್ಯರ ಶಬ್ದಗಳ ಬಳಕೆಯೇ ಅಧಿಕವಾಗಿದೆ.

ಹಾನೆ, (ಇದ್ದಾನೆ) ಅಭ್ಯಂತ್ರ, ಕರಕೋ, ಅಮ್ಮೆ, ಅಮ್ಮಿ (ಮೊಲೆ), ರಮ್ಮಿಸಿ, ತ್ಯರನೆ, ಕುರುವ್ಹು, ಸಿಲ್ಕುವ, ಅರಿಕ್ಕುಳ್ಳ, ತಿರವು, ಮರವ್ಹು, ಖೂನ (ಗುರುತು), ಬೆರಿ (ಕೂಗು), ಠಾವ, ಇರಳ್ಹಗಲ, ಬಡಿವಾರ, ಸರ್ಕನೆ, ತುಂಬ್ಯಾದ, ಗುರ್ತು, ಬೆರ್ತು, ಪ್ಯಾಟಿ, ಸೂರ್‍ಯಾಡು, ಕಡಗಂಡು, ಸರಗ, ಉಮ್ಮೆಸ (ಹುಮ್ಮಸ), ಭಗತರು, ಹೊತ್ತಿಗೆ, ಸುಖಿಗರು ತದೆ, ಸಂತ್ರಾಧಾರಿ, ಸ್ವಸ್ಥ, ಅಖರದಿ, ಕಂಡಮ್ಯಾಲೆ, ಬಲುಬ್ಯಾಗ, ಕೊಟ್ಟಾಂಗ, ತುಟ್ಟಲೆ (ತುಟಿಲೆ), ಹೊಟ್ಟೆ, ಸಾಯಾಸ, ಮಾರಗವು (ಮಾರ್ಗವು), ಹತ್ತಿಲೆ (ಸಮೀಪ), ಸೂಟಿ, ನಾಟಿ, ಮುರುವು (ದನಗಳಿಗೆ ಹಾಕುವ ನುಚ್ಚು)

ಇತ್ಯಾದಿ ಇನ್ನೂ ಅನೇಕ ಶಬ್ದಗಳನ್ನು ಉದಾಹರಿಸಬಹುದು. ಭಾಷಾಭ್ಯಾಸಿಗಳಿಗೆ ರಾಯರ ಸಾಹಿತ್ಯವು ಒಂದು ಆಗರವಿದ್ದಂತೆ. ಈ ಶಬ್ದಗಳ ಉಪಯೋಗ ಕೂಡ ಗಮನಾರ್ಹವಾಗಿದೆ.

'ಸುಗ್ಗಿ ಇದೆ ಲಗ್ಗೆ ಮಾಡಿಕೊಳ್ಳಿ,
ಬೊಗ್ಗಿ ಉಣಬೇಕು ಹಿಗ್ಗಿಕೊಳ್ಳೋ' (ಕೀ-೧)
'ಉಮ್ಮೀ ಸವಿದೊಮ್ಮೆ ಅಮ್ಮ ನಾ
ಅಮ್ಮಿಯಾಲಮೃತ್ಯರಿ' (ಕೀ-೪)
(ಮೊಲೆ ಹಾಲ ಅಮೃತವನೆರೆ)
'ಮುರು ಹರಿಯಗುಡದನಕ' (ಕೀ-೫)
'ಮರಹು ಮರದೀಡ್ಯಾಡಿ' (ಕೀ-೭)
'ಒಳ್ಳ್ಯಾವರ ಕೇಳಿ ಉಳವಉಪಾಯದ ಮಾತು' (ಕೀ-೧೨೭)
'ಅಟಾಅಟ ಬಡುವದ್ಯಾತಕೆ' (ಕೀ-೧೫೪)

ಇತ್ಯಾದಿ ವಾಕ್ಯ ಪ್ರಯೋಗಗಳು ಆಡುಮಾತಿನ ಬಳಕೆಗೆ ಸಾಕ್ಷಿಯಾಗಿವೆ.

ಮಹಿಪತಿರಾಯರು ಶಬ್ದ ಸಾಮ್ರಾಟರು. ಅವರ ಶಬ್ದ ಸಂಗ್ರಹ ಅನುಪಮವಾಗಿದೆ. ಆ ಶಬ್ದಗಳ ಸರಿ ಉಪಯೋಗ ಕೃತಿಗಳಿಗೆ ನಾದ ಮಾಧುರ್ಯವನ್ನು ಒದಗಿಸಿದೆ. ಪ್ರಾಸ, ಅನುಪ್ರಾಸ, ಯಮಕಾದಿ ಶಬ್ದಾಲಂಕಾರಗಳು, ಮುಕ್ತಪದ ಗ್ರಾಸಾಲಂಕಾರ.

ಅರ್ಥಾನುಕಾರಿ ನಾದವುಳ್ಳ ಶಬ್ದಗಳ ಬಳಕೆ ಸಹಜವಾಗಿ ಹೊರಹೊಮ್ಮಿ ಅವರ ಕೃತಿಗಳ ನಾದ ಮಾಧುರ್ಯವನ್ನು ಹೆಚ್ಚಿಸಿವೆ.

'ಸತ್ಸಂಗ ಮಾಡೋ ಮನವೆ' (ಕೀ-೫೩೪) ಲಾವಣಿಯಲ್ಲಿಯ ಅನುಪ್ರಾಸ -ಯಮಕಗಳು ಅನುಪಮವಾಗಿವೆ. ಇವುಗಳು ಸಹಜವಾಗಿ ಬಂದಿವೆಯಲ್ಲದೆ ಪಾಂಡಿತ್ಯದ ಪ್ರತೀಕವಾಗಿ ಅಲ್ಲ - ಎಂಬುದು ಗಮನಾರ್ಹವಾಗಿದೆ.

'ತೊಡಕಿ ಮಿಡುಕಬ್ಯಾಡ ಹಡಕಿ ವಿಷಯದೊಳು ಗಡಕವಾಗಿ।
ಕೆಡುಕ ಬುದ್ಧಿಯಿಂದ ಕೆಡುದೇನ ಬಡದ ಭವಣೆಬಟ್ಟು।
ಮಡದಿ ಮಕ್ಕಳಿಗೆ ದುಡಿದು ತಂದು ಅಡಕಿದರ ತಾವು ಕೊಡುವರೇನ।
ಒಡಲ ಹೊರಿಯಲಿಕ್ಕೆ ಒಡದ ಮಡಕಿಯಂತೆ ದಣಿಯಲಿಲ್ಲ।
ತುಡುಕಿ ಹೋಗುತಿಹಾಯುಷ್ಯಕ್ಷೀಣ ಸಡಕಹಾಕಿ ವ್ಯವಯಮನ।
ದುಡುಕಿಯೊಳಗಾಗ ಬ್ಯಾಡ ಪಡಕೋಬ್ಯಾಗ ಗುರುದಯಕರುಣ॥

ಸಿಲ್ಕಿಮಾಯ ಮಲ್ಕಿನೊಳು ಅಳ್ಕಿ ಆಲಪರಿಯಬ್ಯಾಡ।
ಬಲ್ಕಿ ಮಾಡಿಕೊಳ್ಳು ನೀ ಸುಜ್ಞಾನ ಕ್ಷುಲ್ಲಕ ಬುದ್ಧಿಗಾಗಿ।
ಅಳ್ಕಿ ಕಲ್ಕಿಬ್ಯಾಡೋ ನೀನು ತಿಳಕೋ ನಿನ್ನ ತನುವಿನೊಳಗಖೂನ।
ನುಲ್ಕಿ ಸುಟ್ಟ ಮಲ್ಕಿನಂತೆ ಜನಕಾಲಂಬ ತೋರಿ ನೀನು।
ಜಲ್ಕಮಲದಂತಿರನುದಿನ ನೀನು ನಿಲ್ಕಿ ನೆಲೆಗೊಂಬುದಿದು।
ತಳ್ಕು ತನ್ನೊಳಗದೆಯೆಂದು ನಾಲ್ಕು ವೇದ ಸಾರುತಿದೆ ಪೂರ್ಣ॥''
ಹೀಗೆ ಸಾಗುತ್ತದೆ. ಇದರೊಂದಿಗೆ,

'ಮೂರುಗುಣರಹಿತ ಮೂರುಲೋಕ ವಂದಿತ।
ಮುರಹರನಹುದೀತ ಗುರುನಾಥ।

ಸುರಜನ ಪೂರಿತ ಪರಮಾನಂದ ಭರಿತ।
ತಾರಕನಹುದೀತ ಗುರುನಾಥ॥ (ಕೀ-೧೪೨)

ಎಂಬ ಎಂಟು ನುಡಿಗಳ ಕೃತಿಯಲ್ಲಿ ಒಂದೇ ಒಂದು ಒತ್ತಕ್ಷರದ ಉಪಯೋಗವಿಲ್ಲದ್ದನ್ನು ಗಮನಿಸಬೇಕು. ಇದು ರಾಯರ ಭಾಷಾ ಪ್ರಭುತ್ವಕ್ಕೆ ಸಾಕ್ಷಿ. ಅದರಂತೆ 'ಒಡೆಯನೆಂದು ನಿಮ್ಮ ಎಡದಿರೆ ಪಾದವ' (ಕೀ-೧೨೫) 'ಇದೇ ನೋಡಿರೋ ನಿಜ ಕೂಡಿರೋ' (ಕೀ-೪೬) ಮೊದಲಾದ ಕೃತಿಗಳನ್ನೂ ನೋಡಬಹುದು.

'ನೋಡಿ, ನೋಡಿ ನೋಡಿ ನೋಡುದರೊಳು ಕೂಡಿ
ನೋಡುವದೇನೆಂದು ನೋಡಿ
ನೋಡಿದ ಮ್ಯಾಲಿನ್ನು ಮೂಡಿ ಬಂದರ ಘನ
ನೋಡುವದೇ ಖೂನಮಾಡಿ
ಮಾಡಿದ ಮಾಟವು ಕೂಡಿ ಬಂದರ ಕೈಯ
ನಾಡಗೂಡ ಹೇಳಬ್ಯಾಡಿ

ಗೂಢ ಗುಹ್ಯದ ಮಾತು ಒಡೆದು ಹೇಳುವದಲ್ಲಾ
ನೋಡಿ ನಿಮ್ಮೊಳು ಬೆರದಾಡಿ'

ಇಂಥ ಸಾಲುಗಳು ಓದುಗರ ಕಿವಿಗಳನ್ನು ತಣಿಸದಿರವು. 'ಸೋಜಿಗವಾಯಿತು ಸದ್ಗುರು ಏನ ಕೃಪೆ' (ಕೀ-೬೨೨) ಕೃತಿಯಲ್ಲಿನ,

ನೀಗು, ಹೋಗು, ಬಾಗು, ಸಾಗು, ಆಗು, ಕೂಗು, ತೂಗು ಮತ್ತು ಹರಿ, ಮುರಿ, ಕುರಿ, ಮರಿ, ಅರಿ, ಸುರಿ, ನರಿ, ತ್ಯರಿ, ಜರಿ, ನೆರಿ ಅಲ್ಲದೆ ಜಾರು, ಮೀರು, ಹಾರು, ತೋರು, ಸೇರು, ಸಾರು, ಭೀರು,

ಈ ಶಬ್ದಗಳ ಬಳಕೆಯನ್ನು ಗಮನಿಸಬೇಕು.

ಮಾಧ್ವರೇ ಆದ ಮಹಿಪತಿರಾಯರ ಕೃತಿಗಳ ಮೇಲೆ ಮಾಧ್ವರ ದ್ವಾದಶಸ್ತೋತ್ರ, ವಾಯುಸ್ತುತಿ ಮೊದಲಾದವುಗಳ ಪ್ರಭಾವ ಆಗಿರುವುದು ಸಹಜವೇ ಆಗಿದೆ. ಜೊತೆಗೆ ಲಕ್ಷ್ಮೀಶನ ಜೈಮಿನಿ ಭಾರತ, ರತ್ನಾಕರವರ್ಣಿಯ ಭರತೇಶ ವೈಭವದಂಥ ಕಾವ್ಯಗಳ ಪ್ರಭಾವವೂ ಆಗಿರುವ ಸಾಧ್ಯತೆಯನ್ನು ಗುರುತಿಸಬಹುದಾಗಿದೆ.

'ಇಂದೀವರ ದಾಸಯನ ನಂದಕುಮಾರ
ಸುಂದರ ಶುಭವದನ
ಮಾಧವ ಮಧುಸೂದನ
ಮಂದರ ವೃಂದ ಗೋಕುಲೋದ್ಧರಣ' (ಕೀ-೪೧೩)

ಇಂಥ ಕೃತಿಗಳ ಮೇಲೆ ಮಧ್ವಾಚಾರ್ಯರ ದ್ವಾದಶಸ್ತೋತ್ರದ ಪ್ರಭಾವ ಆಗಿರದೇ ಇಲ್ಲ.

'ಭೋಗ್ಯ ಭೋಗದ ಸಾರಸುಖವಿದು ಯೋಗಿ ಮಾನಸ ಜೀವನ
ಬಗೆಬಗೆಯಲನುಭವಿಸಿ ಮಹಿಪತಿಯೋಗ್ಯನಾಗೋ ಸನಾತನ'

ಎಂಬಂಥ ಸಾಂಗತ್ಯದ ಸಾಲುಗಳ ಮೇಲೆ ರತ್ನಾಕರವರ್ಣಿಯ ಪ್ರಭಾವವು ಇಲ್ಲವೆಂದು ಹೇಳಲಿಕ್ಕಾಗದು.

ಮಹಿಪತಿರಾಯರ ಶೈಲಿಯ ವಿವಿಧ ವಿನ್ಯಾಸಗಳನ್ನು ನೋಡಿದಾಗ ಇವುಗಳಲ್ಲಿ ಅವರ ಅಪಾರ ತತ್ವಜ್ಞಾನ, ಲೋಕಾನುಭವ ಹಾಗೂ ಭಾಷಾಪ್ರಭುತ್ವಗಳು ಎದ್ದು ಕಾಣುತ್ತವೆ. ವೇದೋಪನಿಷತ್ತುಗಳೇ ಮೊದಲಾದ ಆರ್ಯ ಆಧ್ಯಾತ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡಿದ ಅವರು ಈ ಶಬ್ದ ಮಾಧುರ್ಯ ಉಕ್ತಿ ಚಾತುರ್ಯಗಳನ್ನು ಸಹಜವಾಗಿಯೇ ಸಂಪಾದಿಸಿಕೊಂಡಿದ್ದರೆಂದು ತಿಳಿಯಬಹುದು.

★ ★ ★

## ಅಡಿ ಟಿಪ್ಪಣಿಗಳು

೧. ಶ್ರೀಪತಯ್ಯ ಹರಿದಾಸ (ಸಂ): ಸೇವಾತತ್ವ ಕೃತಿ ೧೫೯ ಪುಟ ೧೬೦
೨. ಅದೇ
೩. ಇಲ್ಲಿ ಹಾಗೂ ಈ ಮುಂದೆ ಉದ್ಧರಿಸುವ ಕೃತಿಸಂಖ್ಯೆಗಳು ಮೈಸೂರು ವಿಶ್ವ ವಿದ್ಯಾಲಯದ 'ಶ್ರೀಮಹಿಪತಿರಾಯರ ಕೃತಿಗಳು' ಸಂಗ್ರಹದಿಂದ ಆಯ್ದುಕೊಂಡಿದೆ.
೪. ಕೆ.ಟಿ. ಪಾಂಡುರಂಗಿ : ಆಧ್ಯಾತ್ಮ ದೃಷ್ಟಿ ಪುಟ ೪
೫. ಅದೇ ಪುಟ ೫
೬. ಜಿ. ವರದರಾಜರಾವ (ಸಂ): ಶ್ರೀ ಮಹಿಪತಿರಾಯರ ಕೃತಿಗಳು ಪೀಠಿಕೆ XXVI
೭. Shri. Aurobindo on himself: ಪುಟ - ೩೯
೮. ಕೆ.ಟಿ.ಪಾಂಡುರಂಗಿ: ಆಧ್ಯಾತ್ಮಿಕ ದೃಷ್ಟಿ ಪುಟ ೩೯
೯. ಸುಬೋಧ ರಾಮರಾಯರು (ಸಂ): ಹರಿದಾಸ ಕೀರ್ತನ ತರಂಗಿಣಿ ಭಾಗ ೧-೨ ಪುಟ ೩೬
೧೦. ಅದೇ ಪುಟ ೪೫
೧೧. ಅದೇ ಪುಟ ೨೨೫
೧೨. ಅದೇ ಪುಟ ೮೬
೧೩. ಅದೇ ಪುಟ ೪೬
೧೪. ಅದೇ ಪುಟ ೨೭೬
೧೫. ಅದೇ ಪುಟ ೧೦೨
೧೬. ಬೆಟಗೇರಿ ಕೃಷ್ಣಶರ್ಮ/ ಬೆಟಗೇರಿ ಹೆಚ್.ಜಿ. (ಸಂ): ಕನಕದಾಸರ ಹಾಡುಗಳು ಕೃತಿ ೨೩
೧೭. ಅದೇ ಕೃತಿ ೨೪
೧೮ ಅದೇ ಕೃತಿ ೨೮
೧೯ ಅದೇ ಕೃತಿ ೧೨೬
೨೦. ಸುಭೋದ ರಾಮರಾವ (ಸಂ): ಹರಿದಾಸ ಕೀರ್ತನ ತರಂಗಿಣಿ ಭಾಗ ೩.೪ ಪುಟ ೮೧
೨೧. ಸ್ವಾಮಿ ಮುಕ್ತಾನಂದ: ಚಿತ್‌ಶಕ್ತಿ ವಿಲಾಸ (೧೯೭೫) ಪ್ರಸ್ತಾವನೆ ಪುಟ ೯
೨೨. ರಂ ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ ಪುಟ ೨೭೬

## ಅಧ್ಯಾಯ - ಏಳು

# ೭. ಸಮಾರೋಪ

ಭಾರತೀಯ ಆಧ್ಯಾತ್ಮ ಪರಂಪರೆಯು ಬಹು ಪುರಾತನವಾದದ್ದು. ಈ ಪರಂಪರೆಯು ಸನಾತನವಾದಷ್ಟೇ ವಿನೂತನವೂ ಆಗಿದೆ. ಪರಮ ಸತ್ಯವನ್ನು ಶೋಧಿಸುವಲ್ಲಿ, ಆ ಸತ್ಯದ ಸಾಕ್ಷಾತ್ಕಾರಕ್ಕಾಗಿ ಎಲ್ಲರಿಗೂ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಲಾಗಿದೆ. ಸತ್ಯದ ಶೋಧನೆಯನ್ನು ಯಾರು ಮಾಡಿದರು ಎನ್ನುವುದಕ್ಕಿಂತ ಸತ್ಯದ ನಿಜವಾದ ಮೌಲ್ಯಮಾಪನ ಮಾಡಿ ಆ ಸತ್ಯಕ್ಕೆ ಮನ್ನಣೆಯಿತ್ತು ಮತ್ತೆ ಮುಂದಿನ ಹೆಜ್ಜೆ ಇಡುವುದು ಭಾರತೀಯ ಪರಂಪರೆಯ ಸಾಧಕರ, ಸಿದ್ಧರ ಸಹಜ ಗತಿಯಾಗಿದೆ. ಅಂತೆಯೇ ವೇದದ ಅಧಿಕಾರವನ್ನು ಅಷ್ಟೇ ಏಕೆ? ಭಗವಂತನ ಅಸ್ತಿತ್ವವನ್ನೇ ಪ್ರಶ್ನಿಸಿದ ಬೌದ್ಧ, ಜೈನ ಧರ್ಮಗಳು ಕೂಡ ನಮ್ಮ ಆಧ್ಯಾತ್ಮ ದರ್ಶನದ ಭಾಗಗಳಾಗಿಯೇ ಉಳಿದವು. ಹೊಸ ಹೊಸ ಸತ್ಯದರ್ಶನಗಳನ್ನು ಮೈಗೂಡಿಸಿಕೊಂಡು ಈ ದೇಶದ ಆಧ್ಯಾತ್ಮ ಜೀವನಗಂಗೆ ನಿತ್ಯ ನಿರ್ಮಲಳಾಗಿ ಹರಿಯುತ್ತಿದ್ದಾಳೆ. ಅಂತೆಯೇ ಎಲ್ಲ ವಿಧದ ಸಾಧನೆಗಳಿಗೂ ಇಲ್ಲಿ ಅವಕಾಶವಿದೆ. ಬೇರೆ ಬೇರೆ ದರ್ಶನಗಳು ಪರಸ್ಪರ ವಿರೋಧವಾಗಿ ಕಾಣದೆ ಒಂದೇ ಸತ್ಯದ ವಿವಿಧ ಮುಖಗಳನ್ನು ತೋರಿಸುತ್ತವೆ.

ಕಾಲಕ್ರಮದಲ್ಲಿ ಒಂದು ಸತ್ಯದ, ಪರಂಪರೆಯ ಧರ್ಮದ ಸತ್ವವು ಕಡಿಮೆಯಾಗಿ ಹೊಸ ಮಾರ್ಗಗಳ ಅವಶ್ಯಕತೆ ಉಂಟಾದಾಗ ರಾಜಕೀಯ ಅಸ್ಥಿರತೆಯಿಂದಾಗಿ ಜನಜೀವನವು ವ್ಯಸ್ತವಾದಾಗ, ಸಾಮಾಜಿಕ ಜೀವನವು ಅಲ್ಲೋಲ ಕಲ್ಲೋಲವಾದಾಗ, ಪರಿಸ್ಥಿತಿಯ ಒತ್ತಡದಿಂದಾಗಿ ಮಹಾಪುರುಷರು ಹುಟ್ಟಿ ಬರುತ್ತಾರೆ. ತಮ್ಮ ವೈಯಕ್ತಿಕ ಸಾಧನೆ ಸಿದ್ಧಿಗಳ ಬಲದಿಂದ ಇಡೀ ಸಮಾಜಕ್ಕೆ ಹೊಸ ಮಾರ್ಗವನ್ನು ತೋರಿಸಿ ಜನಜೀವನದಲ್ಲಿ ಶಾಂತಿ ಸಮಾಧಾನಗಳನ್ನು ನೆಲೆಸಲು ನೆರವಾಗುತ್ತಾರೆ. ಭಾರತದಲ್ಲಿ ಈ ಮಾತು ಐತಿಹಾಸಿಕ ಸತ್ಯವಾಗಿದ್ದು, ನಮ್ಮ ಆಧ್ಯಾತ್ಮ ಪರಂಪರೆಯು ಜೀವಂತವಾಗಿ ಉಳಿಯಲು ಮುಖ್ಯ ಕಾರಣವಾಗಿದೆ.

ಮುಸಲ್ಮಾನರ ದಾಳಿಯಿಂದ ದೇಶವು ತತ್ತರಿಸಿದಾಗ, ಆಂಗ್ಲರ ಧೂರ್ತ ನೀತಿಯಿಂದ ನಮ್ಮ ಸಂಸ್ಕೃತಿಗೆ ಬಲವಾದ ಪೆಟ್ಟು ಬಿದ್ದಾಗ, ಅನೇಕ ಜನ ಸಾಧು ಸಂತರು, ಆಚಾರ್ಯರು ಅವತರಿಸಿ ಮಾರ್ಗದರ್ಶನ ಮಾಡಿದ್ದಾರೆ. ಆಂಗ್ಲರ ರಾಜಕೀಯ ಉದ್ದೇಶದಿಂದ ಪ್ರೇರಿತವಾದ ನೀತಿಯಿಂದ ನಮ್ಮ ಶಿಕ್ಷಣ ಪದ್ಧತಿಯು ನಾಶವಾಗಿ ಭಾರತೀಯ ಮೌಲ್ಯಗಳನ್ನು ತಿರಸ್ಕರಿಸುವ ನಾಸ್ತಿಕತೆಯೇ ಜೀವನದ ರೀತಿಯೆಂದು ಭ್ರಮಿಸುವ ಪರಿಸ್ಥಿತಿ ಉತ್ಪನ್ನವಾದಾಗ ರಾಮಕೃಷ್ಣ ಪರಮ ಹಂಸರು ಭಾರತದ ಆಧ್ಯಾತ್ಮ ಜೀವನವನ್ನು ಪುನರುಜ್ಜೀವನಗೊಳಿಸಿದರು. ಸ್ವಾಮಿ

ವಿವೇಕಾನಂದರು ಭಾರತೀಯ ಆಧ್ಯಾತ್ಮದ ಹಿರಿಮೆಯನ್ನು ಮೆರೆಸಿದರು. ರಾಷ್ಟ್ರೀಯ ಭಾವನೆಯ ಅವಶ್ಯಕತೆ ಉಂಟಾದಾಗ ಮಹಾತ್ಮಾ ಗಾಂಧೀಜಿಯವರು ಮುಂದೆ ಬಂದು ಸಮಗ್ರ ಭಾರತದಲ್ಲಿ ಜಾಗ್ರತಿಯನ್ನುಂಟು ಮಾಡಿದರು.

ಒಬ್ಬ ವಿಜ್ಞಾನಿಯು ಸಂಶೋಧಿಸಿದ ಹೊಸದೊಂದು ಸಂಶೋಧನೆಯು ಅವನೊಬ್ಬನಿಗೇ ಅಲ್ಲದೇ ಇಡೀ ಲೋಕಕ್ಕೆ ಉಪಕಾರವಾಗುವುದು. ಅದರಂತೆ ಒಬ್ಬ ಸಾಧಕನು ಗೈದ ಸಾಧನೆಯು, ಸುತ್ತಲಿನ ಸಮಾಜಕ್ಕೂ, ಜನರಿಗೂ ಉದ್ಧಾರದ ಮಾರ್ಗ ತೋರಿಸಿ ಅವರ ಪ್ರಜ್ಞೆಯು ಉನ್ಮುಖವಾಗಲು ನೆರವಾಗುತ್ತದೆ. ಮಹಾತ್ಮಾ ಗಾಂಧೀಜಿಯವರ ಸತ್ಯ ನಿಷ್ಠ, ದೇವರಲ್ಲಿಯ ಶ್ರದ್ಧೆ, ನೈತಿಕ ಮಟ್ಟ ದೇಶದ ಜನರ ಮೇಲೆ ವಿಲಕ್ಷಣ ಪರಿಣಾಮ ಬೀರಿತು. ಭಾರತೀಯರ ನೈತಿಕ -ಆಧ್ಯಾತ್ಮಿಕ ಪ್ರಜ್ಞೆಯನ್ನು ಮೇಲೆತ್ತಲು ಕಾರಣವಾದದ್ದನ್ನು ಯಾರೂ ಅಲ್ಲಗಳೆಯಲಾರರು.

ಈ ದೃಷ್ಟಿಯಿಂದ ನೋಡಿದಾಗ, ಸಾಧು ಸಂತರ, ಸಿದ್ಧರ ಜೀವನ ಕೃತಿಗಳನ್ನು ಅಭ್ಯಸಿಸುವುದು ಮತ್ತು ಅಂಥವರ ಜೀವನದಿಂದ ಉಂಟಾದ ಪರಿಣಾಮಗಳನ್ನು ನಿರೀಕ್ಷಿಸುವುದು ಅತ್ಯಂತ ಅವಶ್ಯವಾಗಿದೆ. ವಿಜಯನಗರ ಸಾಮ್ರಾಜ್ಯವು ಹಾಳಾಗಿ ಮುಸಲ್ಮಾನರ ಮೇಲುಗೈಯಾಗಿ ಸಾಂಸ್ಕೃತಿಕ, ಸಾಮಾಜಿಕ, ಆಧ್ಯಾತ್ಮಿಕ ಜೀವನವು ಗೊಂದಲಮಯವಾದಾಗ ಮಹಿಪತಿರಾಯರು ತಮ್ಮ ಸಾಧನೆ, ಸಿದ್ಧಿಯಿಂದ, ರಚಿಸಿದ ಸಾವಿರಾರು ಪದ -ಪದ್ಯಗಳಿಂದ ಅಂದಿನ ಸಮಾಜಕ್ಕೆ ಧೈರ್ಯ, ಸ್ಥೈರ್ಯಗಳನ್ನು ಕೊಟ್ಟಿದ್ದಾರೆ. ಬತ್ತಿಯೇ ಹೋಯಿತೆಂದು ತಿಳಿದ ಭಕ್ತಿ ತೊರೆಯನ್ನು ಅವರು ಮತ್ತೆ ಹರಿಬಿಟ್ಟಿದ್ದಾರೆ.

ಮಹಿಪತಿರಾಯರು ಸಾಹಿತ್ಯವನ್ನು ರಚಿಸಿದ ಕಾಲವು ಈ ವರೆಗೂ ಹರಿದಾಸ ಸಾಹಿತ್ಯದ ಚರಿತ್ರೆಯಲ್ಲಿ ಅತ್ಯಂತ ಸಂದಿಗ್ಧವಾದ ಕಾಲವೆನಿಸಿತ್ತು. ಅತ್ತ ಪುರಂದರದಾಸರ ಕಾಲ ಮುಗಿದು ಇತ್ತ ವಿಜಯದಾಸರ ಕಾಲ ಇನ್ನೂ ಆರಂಭವಾಗದಿದ್ದ ಅವಧಿ ಎಂದರೆ ಕ್ರಿ.ಶ. ೧೫೬೪ ರಿಂದ ಕ್ರಿ.ಶ ೧೬೮೭ ರವರೆಗೆ ಈ ಕ್ಷೇತ್ರದಲ್ಲಿ ಏನೂ ಕೃಷಿಯೇ ಆಗಿರಲಿಲ್ಲ. ಅದೊಂದು ಅಜ್ಞಾತಕಾಲವೆಂದು ತಿಳಿಯಲಾಗಿತ್ತು. ಅಲ್ಲಿ ಇಲ್ಲಿ ಮಹಿಪತಿರಾಯರ ಸೊಲ್ಲು ಕೇಳಿ ಬರುತ್ತಿತ್ತಾದರೂ ಕೆಲವರು ಅವರನ್ನು ಹೆಸರಿಗೆ ಮಾತ್ರ ದಾಸರೆಂದು ಉಲ್ಲೇಖಿಸಿದರೆ, ಇನ್ನು ಕೆಲವರು ಅಂಕಿತ ಗುರೂಪದೇಶಗಳನ್ನು ಮುಂದೆ ಮಾಡಿ ದಾಸಕೂಟದಿಂದ ಹೊರಗೆ ಇಟ್ಟಿದ್ದರು. ಇನ್ನು ಕೆಲವರು ಅವರನ್ನು ಅದ್ವೈತಿಗಳೆಂದು, ಅವಧೂತ ಪಂಥದವರೆಂದೂ ಸಾಧಿಸಿದರು.

ಈ ಪ್ರಬಂಧದ ಮುಖಾಂತರ ದೊರೆತ ೩೭ ಹಸ್ತಪ್ರತಿಗಳು ಹರಿದಾಸ ಸಾಹಿತ್ಯದಲ್ಲಿ ಅಜ್ಞಾತಕಾಲವೊಂದಿದೆಯೆಂಬುದನ್ನು ಸುಳ್ಳು ಮಾಡುತ್ತದೆ. ಆ ನಿಟ್ಟಿನಲ್ಲಿ ದೊರೆತ ಅಗಾಧ ಪ್ರಮಾಣದ ಸಾಹಿತ್ಯ ವಿಶೇಷವಾಗಿ ಮಹಿಪತಿರಾಯರ ವೈವಿಧ್ಯಮಯ ಶೈಲಿಯ ಕೃತಿಗಳು ೧೭ ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಾರ್ಹವಾಗಿವೆ. ಮಹಿಪತಿರಾಯರ ಕೃತಿಗಳ ಅವಲೋಕನದಿಂದ ಅವರ ಸಂಪ್ರದಾಯ ಶ್ರದ್ಧೆಗಳ ಕುರಿತು ಇರುವ ಎಲ್ಲ ಸಂದೇಹಗಳೂ ನಿವಾರಣೆಯಾದಂತಾಗಿದೆ.

ಜಾತಿ ಮತ ಪಂಥಗಳ ಗೋಜಲು ಇಂದು ಎಂದಿಗಿಂತಲೂ ಹೆಚ್ಚಾಗಿದೆ. ಮಹಿಪತಿರಾಯರು ತಮ್ಮ ಶ್ರದ್ಧೆಯನ್ನು ಬದಲಿಸದೆ ಧರ್ಮ ಸಮನ್ವಯದ ಸಂದೇಶವನ್ನು ಸಾರಿದರು. ಮೂರೂವರೆ ಮೊಳದ ದೇಹ ಶುದ್ಧಿಯನ್ನು ಪಡೆಯದೇ ದ್ವೈತ -ಅದ್ವೈತ ಎಂದು ಯಾಕೆ ಬಡಿದಾಡುತ್ತಿ? ಎಂದು ಕೇಳಿದರು. ಸಮಕಾಲೀನ ಸಮಾಜದೊಂದಿಗೆ ಜಾತಿ ಮತ ಕುಲಗಳ ಭೇದವಿಲ್ಲದೆ ಬೆರೆದು ಆತ್ಮೋನ್ನತಿಯ ಮಾರ್ಗವನ್ನು ತೋರಿದರು. ಹಿಂದು ಧರ್ಮವೇ ಖಿಲವಾಗುತ್ತಿದ್ದ ಅಥವಾ ಒಂದರ್ಥದಲ್ಲಿ ಹೇಳ ಹೆಸರಿಲ್ಲದಂತೆ ಆಗುವ ದಿನಗಳಲ್ಲಿ ಮಹಿಪತಿರಾಯರು ಹಾಗು ಅವರ ಸಮಕಾಲೀನರು ವಿಜಾಪುರದ ಭಾಗದಲ್ಲಿ ಹುಟ್ಟಿ ಹಿಂದು ಧರ್ಮ ಹಾಗೂ ಸಂಸ್ಕೃತಿಯನ್ನು ಪುನರುಜ್ಜೀವಿಸಿದರು.

ದ್ವೈತನೋ, ಅದ್ವೈತನೋ, ವೀರಶೈವನೋ, ಅವಧೂತನೋ, ಅಂತು ಹಿಂದೂ ಧರ್ಮ ಉಳಿಯಲಿ, ಅನ್ಯ ಮತ - ಧರ್ಮಗಳ ಸಂಸ್ಕೃತಿಗೆ, ಪ್ರಭಾವಕ್ಕೆ ನಮ್ಮವರು ಬಲಿಯಾಗದಿರಲಿ ಎಂಬ ಉತ್ಕಟ ಆಕಾಂಕ್ಷೆಯಿಂದ ಮಹಿಪತಿರಾಯರು ತಮ್ಮ ಸಾಹಿತ್ಯವನ್ನು ಒಂದು ಸಂಪ್ರದಾಯಕ್ಕೆಂದು ಸಂಕುಚಿತಗೊಳಿಸಲಿಲ್ಲ. ಅದರಂತೆ ಭಾಷೆಯಾವುದಾದರೇನು ದೇವರನ್ನು ಕಾಣುವ, ಅವನನ್ನು ಅರ್ಥ ಮಾಡಿಕೊಳ್ಳುವ ದಾರಿ ಒಂದೇ ಎಂದು ಮುಂತಾಗಿ ಹೇಳಿ ತಮ್ಮ ದೃಷ್ಟಿಯನ್ನು ನಾಲ್ಕು ನಿಟ್ಟಿಗೂ ಹರಿಬಿಟ್ಟರು. ಅದು ಅವರ ದೊಡ್ಡಗುಣ. ತಂತಮ್ಮ ಶ್ರದ್ಧೆಗಳನ್ನು ಭಾಷೆಯನ್ನು ಬಲಿಕೊಡದೆ, ಆ ಕೆಲಸವನ್ನು ಅವರು ಮತ್ತು ಅವರಂಥವರು ಅಂದಿನ ದಿನಗಳಲ್ಲಿ ಮಾಡಿದರೆಂದೇ ಇಂದು ವಿಜಾಪುರ ಹಾಗು ಸುತ್ತಮುತ್ತಲಿನ ಭಾಗಗಳಲ್ಲಿ ಇಂದಿನ ಹಿಂದು ಸಂಸ್ಕೃತಿಯನ್ನು ಕಾಣುವಂತಾಗಿದೆ ಎಂದು ಧೈರ್ಯವಾಗಿ ಹೇಳಬಹುದು.

ಅಧ್ಯಯನದ ದೃಷ್ಟಿಯಿಂದ, ಸಾವಿರಾರು ದೇವರನಾಮಗಳನ್ನು ರಚಿಸಿದರೆಂದು ಹೇಳಲಾದ ಮಹಿಪತಿರಾಯರ ಖಚಿತವಾದ ಕೃತಿಗಳ ಸಂಖ್ಯೆಯನ್ನು ಹಾಗು ಅವರು

ಬಳಸಿದ ಅಂಕಿತಗಳನ್ನು ಈ ಪ್ರಬಂಧ ನಿರ್ಣಯಿಸುತ್ತದೆ.

ಮಹಿಪತಿರಾಯರು ಹರಿದಾಸರು ಹೌದೋ -ಅಲ್ಲವೋ ಎಂಬುದು ಗೌಣ. ಆದರೂ ಅದನ್ನು ವಿವರವಾಗಿ ಚರ್ಚಿಸುವದರೊಂದಿಗೆ ಹರಿದಾಸ ಲಕ್ಷಣದ ಲಕ್ಷ್ಮಣ ರೇಖೆಗಳನ್ನು ಎಳೆದ ವ್ಯಕ್ತಿ - .ಕಾಲ ನಿರ್ದೇಶನಗಳನ್ನು ಸೂಚಿಸಲಾಗಿದೆ.

ಮಹಿಪತಿರಾಯರು ಕನ್ನಡ ಸಾಹಿತ್ಯಕ್ಕೆ ನೀಡಿದ ಅಮೋಘ ಕೊಡುಗೆ. ಅವರ ಅನುಭಾವ ಸಾಹಿತ್ಯ. ಅದರಲ್ಲೂ ಅವರು ಕನ್ನಡಮ್ಮನಿಗೆ ಮಾಡಿಸಿದ ರಾಜಯೋಗದರ್ಶನ. ಈ ಕುರಿತು ಇನ್ನೂ ಒಂದು ಪ್ರತ್ಯೇಕ ಪ್ರಬಂಧವಾಗುವಷ್ಟು ವಿಷಯ ಅವರ ಅನುಭಾವ ಸಾಹಿತ್ಯದಲ್ಲಿ ಇದೆಯೆಂಬುದು ಈ ಅಭ್ಯಾಸದಿಂದ ವ್ಯಕ್ತವಾಗುತ್ತದೆ.

ರಾಯರ ಸಾಹಿತ್ಯದಲ್ಲಿ ಬಳಕೆಯಾದ ಅಂದಿನ ಕನ್ನಡ ಭಾಷೆಯು, ಹೊಸಗನ್ನಡ ಬೆಳೆದು ಬಗೆಯನ್ನು ವಿವರಿಸಲು ಅಪೂರ್ವ ವಿಷಯ ರಾಶಿಯಾಗಿದೆ. ಕನ್ನಡ ಭಾಷಾ ವಿಜ್ಞಾನದ ಅಭ್ಯಾಸಕ್ಕೆ ಒಂದು ಹೊಸ ದಾರಿಯಾಗಿದೆ.

ಸಮಕಾಲೀನರಾದ ವಿಜಾಪುರದ ರುಕ್ಮಾಂಗದ ಪಂಡಿತರು. ಸಿಂದಗಿಯ ಭೀಮಾಶಂಕರರು ಮತ್ತು ಅವರ ಮಕ್ಕಳು ರಚಿಸಿದ ಸಾಹಿತ್ಯ ಹಾಗು ಸಾಧನೆಗಳು ಪ್ರತ್ಯೇಕ ಪ್ರಬಂಧಗಳಿಗೆ ದಾರಿ ಮಾಡಿಕೊಡುತ್ತವೆ. ಅದರಂತೆ ಮಹಿಪತಿರಾಯರ ಮುಂದಿನ ಮೂರು ತಲೆಮಾರುಗಳು ಅವರ ಮನೆತನದಲ್ಲಿ ಸಾಹಿತ್ಯ ರಚನೆಯಾಗಿದೆ. ಸಾವಿರಾರು ಕೀರ್ತನೆಗಳು, ಹತ್ತೆಂಟು ಆಖ್ಯಾನಗಳು, ಕಾವ್ಯಗಳು ಇನ್ನೂ ಅಪ್ರಕಟತವಾಗಿಯೇ ಉಳಿದಿವೆ. ಅವುಗಳ ಅಭ್ಯಾಸವು ವಿಜಯನಗರ ಕಾಲದ ಅನಂತರದ ಕನ್ನಡ ಸಾಹಿತ್ಯ ಚರಿತ್ರೆಗೆ ಹೊಸ ಬೆಳಕನ್ನು ನೀಡುವುದರಲ್ಲಿ ಸಂದೇಹವಿಲ್ಲ. ಮಹಿಪತಿರಾಯರ ಮನೆತನದ ಅಪ್ರಕಟಿತ ಸಾಹಿತ್ಯವೂ ಇನ್ನೊಂದು ಮಹಾಪ್ರಬಂಧಕ್ಕೆ ವಸ್ತುವಾಗುವಷ್ಟು ದೊರೆತಿದೆ.

ಹರಿದಾಸ ಸಾಹಿತ್ಯದ ಆಕಾಶದಲ್ಲಿ ಹೊಳೆಯುತ್ತಿರುವ ಅನೇಕ ತೇಜಃ ಪುಂಜ ನಕ್ಷತ್ರಗಳಲ್ಲಿ ಮಹಿಪತಿರಾಯರು ಹಿಡಿದು ನಿಂತ ಧ್ರುವ ನಕ್ಷತ್ರದಂತಿದ್ದಾರೆ.

## ಅನುಬಂಧ -ಒಂದು

# ಅಧಿಕ ಕೃತಿಗಳು

೧

ವಚನ.

ಮನವು ಬಿಲ್ಲನೆ ಮಾಡಿ।
ತನವು ಹೆದಿಯನೆ ಗಟ್ಟಿ।
ಅನುಭವದ ಅಂಬಿನಲಿ।
ಜನನ ಮರಣದ ಗುರಿಯ ಕೆಡಹಿದಾ।
ಜ್ಞಾನಸಾಗರ ಗುರುನಾಥನೆಂದು।
ಸ್ತುತಿಸಿದಾ ಮಹಿಪತಿಯು.।।

ಹಸ್ತಪ್ರತಿ -ಈ

೨

ಸಂಗ ವಿಡಿವಿಡಿ। ಸಾಧು ಸಂಗ ವಿಡಿ ವಿಡಿ। ಸಂಗವಿಡಿಯಳಂಗದೊಳಗ।
ಮಂಗಳುತ್ಸಾಹ ದೋರುವರ।। ।।ಧ್ರು।।
ಹರಿಪದ ಪರಾಗನುಂಡು। ಹರುಷವೇರಿ ಭವಶರಧಿಗೆ।
ಹರಿಯ ಭಕುತಿ ಸೇತುಗಟ್ಟಿ। ತೋರಿಸಿ ಜನರ ತಾರಿಸುವರಾ।।೧।।
ವೇದಶಾಸ್ತ್ರ ಸಾರವಾದ ಬೋಧ। ಸುಧಿಯವೆರದು ಮರದು।
ಹಾದಿ ದೋರಿ ಮನಕ ಗತಿಯ। ಸಾಧನವನು ಬೀರುವರಾ।।೨।।
ಹ್ಯಾವ ಹೆಮ್ಮಿ ಬಿಡಿಸಿ ಸಂಮತಿ। ಭಾವದಿಂದ ಮಹಿಪತಿಸ್ವಾಮಿಯ
ಸಾವಧಾನದಿಂದಲಿ ಜಗ। ತೀವಲಯದೊಳರಹಿಸುವರ ।।೩।।

ಹಸ್ತಪ್ರತಿ - 'ಎ'

೩

ದಾವನು ಗುರುಸಹವಾಸಿ। ಅವನಿದ್ದದ್ದೇ ಸ್ಥಳಕಾಶಿ ।।ಧ್ರು।।
ಕೂಡಿದವರ ತ್ರಿತಾಪಭಂಗಾ। ರೂಢಿಗೆ ಮೆರೆವಳು ಜ್ಞಾನಗಂಗಾ।
ಮೂಡಿಹ ಆತ್ಮಜ್ಯೋತಿ ಲಿಂಗಾ। ಕಂಡಿಹ ಗುಣರಾಶೀ ।।೧।।
ವಿವರಿಸಿ ತಾರಕ ಮಂತ್ರದ ನೆಲಿಯಾ। ಕಿವಿಯೊಳು ಹೇಳಲು ಗುರುರಾಯಾ।
ಅವನಿಗಿನ್ನೆಲ್ಲಿಯದು ಭವಭಯಾ। ಸ್ವಾನಂದವ ಬೆರಸೀ ।।೨।।
ಜನದಲಿ ನಾನಾ ಸಾಧನ ಜರಿದು। ಮನದಲಿ ಒಂದೇ ನಿಶ್ಚಿಯ ಹಿಡಿದು।
ಅನುಮಾನದ ಸಿದ್ಧಾಂತಗಳಳದು। ಸದ್ಭಾವನೆ ಬಲಿಸೀ।।೩।।
ಪ್ರೇಮಿಯ ನಿಜಸುಖ ಪ್ರೇಮಿಕ ಬಲ್ಲಾ। ಈ ಮನುಜರಿಗಿದು ಭೇದಿಸುದಲ್ಲಾ।
ಶ್ರೀಮಹಿಪತಿ ಬೋಧಿಸಿದನು ಸೊಲ್ಲಾ। ಪೂರಿಸಿ ಮನದಾಸೀ ।।೪।।

ಹಸ್ತಪ್ರತಿ 'ಟ'

